# ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು
ಗೀತಾಬಾಯಿ ಬಡಿಗೇರ

ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ




ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಗೀತಾಬಾಯಿ ಬಡಿಗೇರ**

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ





**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – ೫೮೩೨೭೬

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

**ಗೀತಾಬಾಯಿ ಬಡಿಗೇರ** ಅವರು ನನ್ನ ಮಾರ್ಗದರ್ಶನದಲ್ಲಿ **ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

[signature]

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ :
ದಿನಾಂಕ : ೧೭/೬/೧೯

# ಸಂಶೋಧಕರ ಪ್ರಮಾಣ ಪತ್ರ

**ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ **ಡಾ.ವೀರೇಶ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಗೀತಾಬಾಯಿ ಬಡಿಗೇರ**
ಸಂಶೋಧನಾ ವಿದ್ಯಾರ್ಥಿನಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 15/6/2019

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

ಪ್ರಾಚೀನ ಕಾಲದಿಂದಲೂ ಪಾಂಚಾಳರು ಸಾಮಾಜಿಕ ಜೀವನದ ಅಗತ್ಯ ಹಾಗೂ ಅವಶ್ಯಕ ಭಾಗವಾಗಿದ್ದರು. ಪಾಂಚಾಳರ ಹಾಗೂ ಇತರೆ ಸಮುದಾಯಗಳ ನಡುವಿನ ಸಂಬಂಧಗಳು ತಾಳಿಕೆಯ ಹಾಗೂ ಬಾಳಿಕೆಯ ವ್ಯವಸ್ಥೆಯಿಂದ ಕೂಡಿದ್ದವು. ವೃತ್ತಿಗಳೇ ಪ್ರಧಾನವಾಗಿ ಜಾತಿಗಳು ಗೌಣವಾಗಿದ್ದ ಹೊತ್ತಿನಲ್ಲಿ ಇಂಥ ಕಸುಬುಗಳು ಸಮೂಹ ಹೊಣೆಗಾರಿಕೆಯ ಭಾಗಗಳಾಗಿದ್ದವು. ಉತ್ಪಾದಕ ರೈತ ಕುಟುಂಬಗಳು ಅವನ್ನು ಆಶ್ರಯಿಸಿ ಬದುಕುವ ಕೈ ಕಸುಬಿನವರು ಅವರನ್ನು ಆಶ್ರಯಿಸಿ ಬದುಕುವ ರೈತ ಕುಟುಂಬಗಳು ಇವರೆಲ್ಲರಿಗೂ ವೃತ್ತಿ ಎನ್ನುವುದು ಕರ್ತವ್ಯಪ್ರಜ್ಞೆಯ ಹಾಗೂ ಸಾಮಾಜಿಕ ಜವಾಬ್ದಾರಿಯ ಭಾಗವಾಗಿತ್ತು.

ಇಂಥ ಕರ್ತವ್ಯಪ್ರಜ್ಞೆಯುಳ್ಳವರಾಗಿದ್ದ ಪಾಂಚಾಳರು ಹಳ್ಳಿಗಳಲ್ಲಿ ಅಲ್ಪಸಂಖ್ಯಾತರಾಗಿದ್ದರೂ ಸರ್ವರಿಗೂ ಅನಿವಾರ್ಯವಾಗಿದ್ದರು. ಪ್ರೀತಿ ಹಾಗೂ ಅಭಿಮಾನಕ್ಕೆ ಪಾತ್ರರಾಗಿದ್ದರು. ಇಂದು ಮನುಷ್ಯನ ನೆಲ ಹಾಗೂ ನೆಲೆಗಳನ್ನು ಕಿತ್ತುಕೊಂಡು ದಿಕ್ಕೇಡಿಗಳನ್ನಾಗಿಸುತ್ತಿರುವ ಹಣಪ್ರಧಾನದ ಅಭಿವೃದ್ಧಿ ಇಂಥ ಸಾಂಪ್ರದಾಯಿಕ ಸೃಜನಶೀಲ ಸಮಾಜದ ವಿನಾಶಕ್ಕೆ ಕಾರಣವಾಗುತ್ತಿದೆ.

ಬದುಕು ಹಾಗೂ ನಿಸರ್ಗದ ವೈವಿಧ್ಯತೆ ಎನ್ನುವುದು ಶ್ರಮಪ್ರಧಾನ ಸಂಸ್ಕೃತಿಯ ಜೀವಾಳವಾಗಿತ್ತು. ಭೌತಿಕ ರೂಪದ ಆಧುನಿಕತೆಯು ಸಾಮಾಜಿಕ ವ್ಯವಸ್ಥೆಯಾಗಿ ಬರುವ ಮೂಲಕ ಇಂಥ ಜೀವ ಸಂಸ್ಕೃತಿಗೆ ಕೇಡು ಬಗೆಯುತ್ತಿದೆ. ವ್ಯವಸಾಯ ಹಾಗೂ ಸೇವಾವೃತ್ತಿಯಂಥ ಉದ್ಯೋಗಗಳು ಕೇವಲ ವೃತ್ತಿಗಳಾಗಿರಲಿಲ್ಲ. ಅವು ಜೀವನಪದ್ಧತಿಗಳಾಗಿದ್ದವು. ಪಟ್ಟಣದಲ್ಲಿ ವೃತ್ತಿಗೂ ಜೀವನಕ್ಕೂ ಸಂಬಂಧ ಇರುವುದಿಲ್ಲ. ಅವರು ವೃತ್ತಿಯನ್ನು ಸುಲಭವಾಗಿ ಬದಲಿಸಬಲ್ಲರು. ಹಳ್ಳಿಗರಿಗಿರುವ ಮಾನಸಿಕ ಹಿಂಜರಿತ ಇಂಥ ಬದಲಾವಣೆಯನ್ನು ಸ್ವೀಕರಿಸುವುದಿಲ್ಲ.

ಪಾಂಚಾಳ ಕಸುಬುಗಳು ಯಾಂತ್ರಿಕ ಹಾಗೂ ತಾತ್ಕಾಲಿಕವಾದವುಗಳಲ್ಲ. ಕೇವಲ ಒಪ್ಪತ್ತಿನ ಗಂಜಿಯ ಹಂಗು ಮಾತ್ರ ಅವುಗಳಿಗಿರುವುದಿಲ್ಲ. ಅವು ದೀರ್ಘಕಾಲದ ಕಾರ್ಯಗತ ಹಾಗೂ ಕೌಶಲ್ಯತೆಯನ್ನು ಹೊಂದಿದ್ದವು. ಬಡತನದಲ್ಲಿ ಹುಟ್ಟಿ ದುಡಿಮೆಯೊಡನೆ ಬೆಳೆದು ತಾಪತ್ರಯಗಳೊಂದಿಗೆ ಜೀವಿಸುವ ಕಸುಬುದಾರರ ಬದುಕು ನಿತ್ಯಕ್ರಿಯಾಶೀಲವಾದುದು ಹಾಗೂ ಅನ್ವೇಷಕ ಪ್ರವೃತ್ತಿಯುಳ್ಳದ್ದು. ಅಪಾರವಾದ ಆರ್ಥಿಕ ಸಬಲತೆ ಹಾಗೂ ಸಾಮಾಜಿಕ ಕೀರ್ತಿ ಅವುಗಳಿಗಿರದಿದ್ದರೂ ತನ್ನ ಮಿತಿಯೊಳಗೆ

ಅವು ಸೃಷ್ಟಿಸಿಕೊಂಡ ಬದುಕಿನ ನೆಲೆಗಳು ಅಗಾಧವಾದಂಥವು. ಇಂಥ ಸಮುದಾಯಗಳನ್ನು ಸಾಂಪ್ರದಾಯಿಕ ಮಾದರಿಯ ಅಥವಾ ರಂಜನೀಯವಾದ ಸಾಂಪ್ರದಾಯಿಕ ಧೋರಣೆಯಿಂದ ನೋಡಿದರೆ ಸಾಲದು. ಇಂಥ ಅಧ್ಯಯನ ಕ್ರಮಗಳು ವೃತ್ತಿಗಳ ಭೌತಿಕ ಸ್ವರೂಪದ ಅರ್ಥಗಳನ್ನು ಅವುಗಳ ಸಾಂದರ್ಭಿಕ ವಿವರಗಳನ್ನು ಕೊಡುತ್ತವೆಯೇ ಹೊರತು ಸಂದರ್ಭದ ಆಚೆಗಿನ ಸಂಕಥನಗಳನ್ನು ನಿರೂಪಿಸುವುದಿಲ್ಲ. ಹೀಗಾಗಿ ಈ ವೃತ್ತಿಗಳನ್ನು ಕೇವಲ ಉತ್ಪಾದಕ ಅಥವಾ ಸೇವಕ ವೃತ್ತಿಗಳನ್ನಾಗಿ ನೋಡದೆ ಒಂದು ಅಖಂಡ ಸಾಮಾಜಿಕ ವೈವಿಧ್ಯತೆ ಹಾಗೂ ಅಗಾಧತೆಯಲ್ಲಿ ನಿರ್ವಹಿಸಿಕೊಳ್ಳುವುದು ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ತಲೆ ತಲಾಂತರದಿಂದ ವಂಶಪಾರಂಪರಿಕವಾಗಿ ಬಂದ ಈ ಪಾಂಚಾಳರ ವೃತ್ತಿ ಇಂದು ಕಣ್ಮರೆಯಾಗುತ್ತಿದೆ. ಇದಕ್ಕೆ ಆಧುನಿಕ ಶಿಕ್ಷಣವ್ಯವಸ್ಥೆ, ಆಡಳಿತವ್ಯವಸ್ಥೆ ಮತ್ತು ಆಧುನಿಕ ತಂತ್ರಜ್ಞಾನ ಕಾರಣವಾಗಿರಬಹುದು. ಕಾಲದಿಂದ ಕಾಲಕ್ಕೆ ವೃತ್ತಿಗಳು ಬದಲಾಗಿ ಬದಲಾದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳುವ ಅನಿವಾರ್ಯತೆ ಸಹಜವಾಗಿ ಎದುರಾಗುತ್ತದೆ. ಹಾಗಾಗಿ ಪಾಂಚಾಳರು ಸಹಜವಾಗಿ ಬೇರೆ ವೃತ್ತಿಯನ್ನು ಮಾಡುವ ಅನಿವಾರ್ಯತೆ ಸೃಷ್ಟಿಯಾಗಿದೆ. ಪಾಂಚಾಳರ ಆಯಾ ವೃತ್ತಿ ಸಮುದಾಯದ ಹಿನ್ನೆಲೆ ಮತ್ತು ಅವರ ಒಟ್ಟಾರೆ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಉದ್ದೇಶವನ್ನು ಈ ಅಧ್ಯಯನ ಇಟ್ಟುಕೊಂಡಿದೆ.

ಪಾಂಚಾಳರು ಸಾಮಾಜಿಕ ಸಮುದಾಯಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ಪಾಂಚಾಳರ ವೃತ್ತಿಯ ಬಗೆಗೆ ಪ್ರಾಚೀನ ಸಾಹಿತ್ಯ ಶಾಸನ, ಐತಿಹ್ಯ, ಪುರಾಣ ಹಾಗೂ ಜಾನಪದದಲ್ಲಿ ಉಲ್ಲೇಖಗಳು ಸಿಗುತ್ತವೆ. ಹೀಗೆ ಉಲ್ಲೇಖಗೊಂಡ ಪಾಂಚಾಳರ ಸಂಗತಿಗಳನ್ನು ಗುರುತಿಸಿ, ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಅವರ ಬದುಕಿನ ಮಹತ್ವವನ್ನು ಅರಿಯುವುದಾಗಿದೆ. ಇವರು ಒಂದು ಸ್ಥಾನಮಾನವನ್ನು ಪಡೆದುಕೊಂಡರು ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಪಾಂಚಾಳರು ಕಾಲಮಾನಕ್ಕೆ ತಕ್ಕಂತೆ ಬದುಕನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಗಿದೆ. ಸಮುದಾಯದ ಪೌರಾಣಿಕ, ಸಾಮಾಜಿಕ, ಮಾನವಶಾಸ್ತ್ರೀಯ ನೆಲೆಗಳನ್ನು ಸೂಕ್ಷ್ಮವಾಗಿ ಗಮನಿಕೀ ಪ್ರಬಂಧದಲ್ಲಿ ಅಧ್ಯಯನ ಕೈಕೊಳ್ಳಲಾಗಿದೆ. ಪಾಂಚಾಳರು ಒಂದು ಕಾಲಕ್ಕೆ ತಮ್ಮ ವೃತ್ತಿಯ ಮೂಲಕ ಎಲ್ಲ ಸಮುದಾಯಗಳ ಜನಮನವನ್ನು ಸೆಳೆದವರಾಗಿದ್ದರು. ಆದರೆ ಇಂದು ಅವರಲ್ಲಿ ಉಂಟಾದ ತೊಂದರೆಗಳ ಬಗ್ಗೆ ಯಾರೂ ವಿಚಾರಿಸುತ್ತಿಲ್ಲ. ಈ ಅಧ್ಯಯನದ ಮೂಲಕ ಅವರ ಮೂಲವೃತ್ತಿಯನ್ನು ಅರ್ಥ ಮಾಡಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಇಲ್ಲಿಯವರೆಗೂ ಪಾಂಚಾಳರನ್ನು ಕುರಿತು ಸಾಹಿತ್ಯ ಕೃತಿಗಳಲ್ಲಿ ಸಮಗ್ರವಾಗಿ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಆಧುನಿಕ ಯಂತ್ರಗಳ ಹಾವಳಿಯಲ್ಲಿ ಕಮ್ಮಾರ, ಬಡಿಗ, ಪತ್ತಾರಿಕೆ ವೃತ್ತಿಯನ್ನು ಹಂತ ಹಂತವಾಗಿ ಕಳೆದುಕೊಳ್ಳುತ್ತಿರುವ ಈ ಸಮುದಾಯ ಆರ್ಥಿಕವಾಗಿ ಕುಗ್ಗುತ್ತ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಒಂದು ಹಂತದಲ್ಲಿ

ಉತ್ಪಾದನೆ ಮತ್ತು ಆರ್ಥಿಕತೆಯಲ್ಲಿ ಅತ್ಯಂತ ಪ್ರಬಲವಾಗಿದ್ದ ಈ ಸಮುದಾಯ ಇಂದು ವೈಜ್ಞಾನೀಕರಣದ ಭರಾಟೆಯಲ್ಲಿ ಎಲ್ಲವನ್ನು ಕಳೆದುಕೊಳ್ಳುತ್ತಿದೆ. ಆಧುನಿಕತೆಗೆ ತಕ್ಕ ಬದ್ಧತೆ ಅವರ ಪಾರಂಪರಿಕ, ಆಚಾರ ವಿಚಾರ, ವೃತ್ತಿ, ದೈವ, ಧರ್ಮಗಳು, ಸಾಮಾಜಿಕ ಸ್ಥಾನಮಾನಗಳು ಅವರ ಕಲೆಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

**ಅಧ್ಯಯನದ ವಿಧಾನ**

'ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ' ಎನ್ನುವ ಶೀರ್ಷಿಕೆಯ ಈ ಅಧ್ಯಯನವು ಪಾಂಚಾಳ ಸೃಷ್ಟಿಕ್ರಿಯೆ ನೆಲೆಗಳ ಕುರಿತು ಪಾಂಚಾಳರು ಹಾಗೂ ಪಾಂಚಾಳೇತರರು ಕಟ್ಟಿದ ಕಥನಗಳನ್ನು ಪ್ರಧಾನವಾಗಿಸಿಕೊಂಡಿದೆ. ಸಾಮಾಜಿಕ, ಆರ್ಥಿಕ, ಕಲಾತ್ಮಕ ನೆಲೆಗಳು ವರ್ತಮಾನದ ಹಿನ್ನೆಲೆಯನ್ನು ನಿರ್ವಹಿಸುತ್ತಿವೆ. ಈ ವಿಧಾನ ಶಿಷ್ಟ ಹಾಗೂ ಮೌಖಿಕ ಪಠ್ಯಗಳ ಜೊತೆಗೆ ಕ್ಷೇತ್ರಗಳ ಮಾಹಿತಿ, ಜಾತ್ರಾ ಉತ್ಸವ, ಆಚರಣೆ, ಸಂಪ್ರದಾಯ ದೇವಾಲಯ ಮತ್ತು ಪರಿಸರ ಮುಂತಾದ ವಿಷಯಗಳನ್ನು ಆಧರಿಸಿವೆ. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಸೃಷ್ಟಿಯಾದ ಪಾಂಚಾಳರ ಕುರಿತ ಶಾಸನಗಳು ದಾಖಲೆಗಳು ಮತ್ತು ಸಾಹಿತ್ಯಿಕ ಸಂಕಥನಗಳನ್ನು ಅರ್ಥ ಮಾಡಿಕೊಳ್ಳುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

ಪಾರಂಪರಿಕವಾಗಿ ದುಡಿಯುವ ಸಂಸ್ಕೃತಿಯ ಕಲೆ, ಕೌಶಲ್ಯಗಳನ್ನು ಬದುಕಿನ ಅವಿಭಾಜ್ಯ ಅಂಗವಾಗಿಸಿಕೊಂಡಿರುವ ಪಾಂಚಾಳರ ಸಮುದಾಯ ಭಾರತದ ಮುಖ್ಯ ಸಮುದಾಯಗಳಲ್ಲಿ ಒಂದಾಗಿದೆ. ಈ ಸಮುದಾಯದ ವೃತ್ತಿ ವಿವರ, ಆಚರಣೆ, ನಂಬಿಕೆ, ವಿಧಿ ನಿಷೇಧಗಳು, ವಿಚಾರಗಳು ಹಾಗೂ ವೃತ್ತಿಯ ಕಾರಣಕ್ಕಾಗಿ ರೂಪಗೊಂಡಿರುವ ವಿಶಿಷ್ಟ ಭಾಷಿಕ ವಿವರಗಳನ್ನು ದಾಖಲಿಸಿ ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಗುರಿಯಾಗಿದೆ.

ಕಮ್ಮಾರಿಕೆ, ಬಡಿಗತನ, ಅಕ್ಕಸಾಲಿಕೆ, ಶಿಲ್ಪಗಾರಿಕೆ ಹಾಗೂ ಕಂಚುಗಾರಿಕೆ ಈ ಐದು ವೃತ್ತಿಗಳು ಅವರ ಪ್ರಧಾನ ವೃತ್ತಿಗಳಾಗಿವೆ. ಇವುಗಳಿಂದಲೇ ಅವರ ಜೀವನ ಮಾರ್ಗ ಕಂಡುಕೊಳ್ಳಲಾಗಿದೆ. ಈ ಐದು ವೃತ್ತಿಗಳನ್ನು ಒಟ್ಟಿಗೆ ಹೇಳುವ ಸಮೂಹ ಪದವೇ ವಿಶ್ವಕರ್ಮ ಅಥವಾ ಪಾಂಚಾಳ ಎಂದು ಕರೆಯಲಾಗುತ್ತದೆ. ಒಂದು ಸಮುದಾಯದ ಅಧ್ಯಯನ ಮಾಡುವಾಗ ಅವರ ಸಂಪ್ರದಾಯ, ನಂಬಿಕೆ, ಕೌಟುಂಬಿಕ ವ್ಯವಸ್ಥೆ, ಅವರಲ್ಲಿ ಆಗಿರುವ ಬದಲಾವಣೆಗಳನ್ನು ಗಮನಿಸಬೇಕಾಗುತ್ತದೆ. ಇಂತಹ ಅಧ್ಯಯನ ಒಂದು ಸಮುದಾಯದ ಆಳವಾದ, ಅಧ್ಯಯನ ಎನಿಸಿಕೊಳ್ಳುತ್ತದೆ. ಅದಕ್ಕಾಗಿ ಬಹುಮುಖ್ಯವಾಗಿ ಸಮೀಕ್ಷಾತ್ಮಕ ಹಾಗೂ ವಿಶ್ಲೇಷಣಾ ಮಾದರಿಯ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ.

ಒಂದು ಸಮುದಾಯದ ಬದುಕಿನ ಸಾಂಸ್ಕೃತಿಕ ಪರಿಸರವನ್ನು ತಿಳಿಯಬೇಕಾದರೆ ಆ ಸಮುದಾಯದ ವೃತ್ತಿ–ಭಾಷೆ, ನಿಷೇಧ ಪದಗಳು, ನಂಬಿಕೆ, ಸಂಪ್ರದಾಯ ಇಂತಹ ಸಂಸ್ಕೃತಿಯನ್ನು ಜೀವಂತವಾಗಿಟ್ಟುಕೊಂಡಿರುವ ಸಮುದಾಯವನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ. ಇಂದಿನ

ಆಧುನೀಕರಣದ ಪ್ರಕ್ರಿಯೆಯಲ್ಲಿ ಎಷ್ಟೋ ಸಮುದಾಯಗಳು ತಮ್ಮ ಪಾರಂಪರಿಕ ಆಯಾಮ ನಶಿಸಿ ಹೊಸತನವನ್ನು ಪಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಇಂತಹ ಸಂದರ್ಭದಲ್ಲಿ ಆ ಸಮುದಾಯಗಳು ತಮ್ಮ ಪಾರಂಪರಿಕತೆಯನ್ನು ಉಳಿಸಿಕೊಳ್ಳಲು ಹೋರಾಟ ಮಾಡುತ್ತಿರುವುದನ್ನು ಇಂದು ಕಾಣಬಹುದು. ಆದರೆ ಇಂತಹ ಅಧ್ಯಯನಗಳಿಂದ ಭಿನ್ನ ಸಮುದಾಯಗಳ ನಡುವಿನ ಸಂಬಂಧ, ವೈವಿಧ್ಯಪೂರ್ಣವಾದ ಜೀವನ, ಇಂತಹ ವಿಶಿಷ್ಟತೆಯನ್ನು ಹೊಂದಿರುವ ಸಮುದಾಯಗಳ ಮೂಲ ಆಯಾಮಗಳು ಕಣ್ಮರೆಯಾಗುತ್ತಿವೆ. ಅಂತಹ ಸಮುದಾಯಗಳಲ್ಲಿ ಒಂದಾದ ಪಾಂಚಾಳರ ಸಂಸ್ಕೃತಿಯನ್ನು ಕುರಿತು ಸಂಶೋಧನೆ ಮಾಡುವುದು ಈ ಮಹಾಪ್ರಬಂಧದ ಮುಖ್ಯ ಭಿತ್ತಿಯಾಗಿದೆ.

ಬಡಿಗ, ಕಮ್ಮಾರ, ಅಕ್ಕಸಾಲಿಗ, ಶಿಲ್ಪಗಾರ, ಕಂಚುಗಾರ ಹೀಗೆ ಐದು ವೃತ್ತಿಗಳನ್ನು ಮಾಡುವವರು ಪಾಂಚಾಳರೆಂದು ಗುರುತಿಸಿಕೊಳ್ಳುವರು. ಪಾಂಚಾಳರು ಇತರೆ ಸಮುದಾಯಗಳ ಜೊತೆ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದರು ಎಂಬುದಕ್ಕೆ ಅನೇಕ ಪುರಾವೆಗಳು ದೊರೆಯುತ್ತವೆ. ಉದಾಹರಣೆಗೆ ಕೂಸು ಹುಟ್ಟಿದರೆ ಆಚಾರಿ ಬೇಕು ಸತ್ತರೆ ಆಚಾರಿ ಬೇಕು' ಎಂಬ ನುಡಿಮುತ್ತು ಪಾಂಚಾಳರ ಪ್ರಯತ್ನವನ್ನು, ಸಮಾಜೋಪಯೋಗಿ ಗುಣವನ್ನು ಹೇಳುತ್ತದೆ.

ಪಾಂಚಾಳರ ಪುರಾಣಗಳು, ಕಾವ್ಯಗಳು, ಜನಪದ ಹಾಡುಗಳು, ಆಚರಣೆಗಳನ್ನು ಸಂಗ್ರಹ ಮಾಡಲಾಗಿದೆ. ಮೌನೇಶ್ವರ, ವೀರಭದ್ರೇಶ್ವರ, ಕಾಳಿಕಾಂಬೆ, ದ್ಯಾಮವ್ವ, ಮುಂತಾದ ದೈವ ಹಾಗೂ ದೇವತೆಗಳ ಪವಾಡಗಳನ್ನು ಸಂಗ್ರಹಿಸಿ ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಜೊತೆಗೆ ವೈದ್ಯಕೀಯ ಹಾಗೂ ಸಾಮಾಜಿಕ ಪರಿಸರಗಳಲ್ಲಿ ಪಾಂಚಾಳರ ಉಪಕರಣಗಳು ಪಡೆದುಕೊಂಡ ನೆಲೆಗಳನ್ನು ನಿರ್ವಚಿಸಲಾಗಿದೆ.

ಉದಾಹರಣೆಗೆ ಬಡಿಗೇರ ಬಾಚಿಯನ್ನು ಪಕ್ಕಡಿಯಲ್ಲಿ ಉಸಿರು ಹಿಡಿದ ವ್ಯಕ್ತಿಗೆ ಇಳಿದು ತಗಲಿಸಿದರೆ ಆ ರೋಗ ನಿವಾರಣೆಯಾಗುತ್ತದೆ. ಕಮ್ಮಾರರ ಬಾನಿಯ ನೀರನ್ನು ಅಡಪು ಹತ್ತಿದ ದನಕರು, ಆಡು ಕುರಿಗಳಿಗೆ ಹಚ್ಚಿದರೆ ಅಡಪು ಉದುರುತ್ತದೆ. ಹೀಗೆ ಮುಂತಾದ ವಿವರಗಳು ಒಂದು ರೀತಿಯಲ್ಲಿ ಆಚರಣಾತ್ಮಕವಾಗಿ ಕಾಣುತ್ತವೆ. ಕಂಬಾರನ ಕಬ್ಬಿಣ ಒಂದು ಉತ್ಪಾದನಾ ಚಟುವಟಿಕೆಯನ್ನು ಸಂಕೇತಿಸುತ್ತದೆ. ಹಲಗೂರು ಪಾಂಚಾಳ ಸಾಂಪ್ರದಾಯಿಕ ಕುಲುಮೆಗಳಲ್ಲಿ ಕಬ್ಬಿಣವನ್ನು ಉತ್ಪಾದನೆ ಮಾಡಿ ಶ್ರೀರಂಗಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದ ಮೈಸೂರು ಒಡೆಯರಿಗೆ ಯುದ್ಧ ಸಲಕರಣೆಯನ್ನು ಮಾಡಿಕೊಟ್ಟು ಶ್ರೀಮಂತರಾಗಿದ್ದರು ಎಂದು ತಿಳಿದುಬರುತ್ತದೆ.

ಕಮ್ಮಾರಿಕೆಯ ವೃತ್ತಿಯಿಂದ ಗೃಹ ನಿರ್ಮಾಣ, ಗೃಹ ಬಳಕೆಯ ಸಾಮಾನು, ಬೇಟೆಯ ಉಪಕರಣಗಳು, ಯುದ್ಧ ಸಾಮಗ್ರಿಗಳು, ಧಾರ್ಮಿಕತೆ ಮುಂತಾದ ಕಡೆಗಳಲ್ಲಿ ಕಮ್ಮಾರಿಕೆ ವೃತ್ತಿಯು ಮುಖ್ಯ ಉಪಯೋಗವಾಗುತ್ತವೆ. ೧೬, ೧೭ನೇ ಶತಮಾನದಲ್ಲಿ ಆಗಿ ಹೋದ ಪವಾಡ ಪುರುಷ ಮೌನೇಶ್ವರರು ಹಿಂದು ಮುಸ್ಲಿಮರ ಭಾವೈಕ್ಯತೆಗಾಗಿ ಶ್ರಮಿಸಿ ಸಾಧನೆ, ಮಾಡಿರುವ ಇವರ ಅದ್ಭುತ ಸಾಮಾಜಿಕ ಪವಾಡವನ್ನು ವಿವರಿಸಲಾಗಿದೆ. ಮೌನೇಶ್ವರರು ಮಾನವ ಧರ್ಮವನ್ನು ಎತ್ತಿ ಹಿಡಿದಿದ್ದರು

ಎಂಬುದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ. ತಿಂಥಿಣಿ ಮೌನಪ್ಪಯ್ಯನ ಬಹುಪಾಲು ವಚನಗಳು ಕಮ್ಮಾರಿಕೆ ಸಂಸ್ಕೃತಿ ಮತ್ತು ಉಪಕರಣಗಳನ್ನು ಉಲ್ಲೇಖಿಸುತ್ತವೆ. ಕಮ್ಮಾರನಾಗಿದ್ದ ಮೌನಪ್ಪಯ್ಯ ಅದೇ ಪರಿಸರದಲ್ಲಿ ಬೆಳೆದವನಾಗಿದ್ದರಿಂದ ತನ್ನ ವಚನಗಳಲ್ಲಿ ವೃತ್ತಿಯ ಉಪಕರಣಗಳನ್ನು ಆಧ್ಯಾತ್ಮಿಕ ಚಿಂತನೆಗೆ ಹೋಲಿಕೆ ಮಾಡಿ ಬರೆದ ವಚನಗಳು ದೊರೆಯುತ್ತವೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣದ ನೆಲೆಗಳನ್ನು ಕೇಂದ್ರವಾಗಿರಿಸಿಕೊಂಡಿದೆ. ಅದಕ್ಕಾಗಿ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಸೃಷ್ಟಿಯಾದ ಪಾಂಚಾಳ ಕುರಿತು ಲಿಖಿತ ಮತ್ತು ಮೌಖಿಕ ಆಕರಗಳನ್ನು ಪ್ರಧಾನವಾಗಿ ಅವಲಂಬಿಸಲಾಗಿದೆ. ಆ ಸಮುದಾಯದ ಹಿರಿಯರು ನಾಗರಿಕರ ಅನುಭವಗಳನ್ನು ಪ್ರಸ್ತುತ ವಿಷಯಕ್ಕೆ ಬಳಕೆ ಮಾಡಿಕೊಳ್ಳಲಾಗಿದೆ. ಸಂದರ್ಶನದ ಮೂಲಕ ಮಾಹಿತಿ ಸಂಗ್ರಹಿಸಿ ಈ ಪ್ರಬಂಧಕ್ಕೆ ಪೂರಕವಾಗಿ ಅಳವಡಿಸಿ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಮಾಹಿತಿ ಕ್ರೋಡೀಕರಣ ಮತ್ತು ವಿಶ್ಲೇಷಣೆ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ ಈ ಮಹಾಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಆಕರಗಳ ಕ್ರೋಢೀಕರಣ ಮತ್ತು ವಿಶ್ಲೇಷಣೆಯ ಮೂಲಕ ಈ ಪರಿಕಲ್ಪನೆಯನ್ನು ಚರ್ಚಿಸಲಾಗಿದೆ. ಅದಕ್ಕಾಗಿ ಕ್ಷೇತ್ರಕಾರ್ಯ ಮಾಡಿ ಪ್ರಮುಖ ವಿದ್ವಾಂಸರು ಮತ್ತು ಕಲಾವಿದರನ್ನು ಸಂಪರ್ಕಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಸಂಗ್ರಹಿತ ಮಾಹಿತಿಯನ್ನು ವಿವಿಧ ಅಧ್ಯಾಯಗಳಲ್ಲಿ ಪೂರಕ ಮಾಹಿತಿಯೊಂದಿಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪ್ರಕಟಿತ ಹಾಗೂ ಅಪ್ರಕಟಿತ ಆಕರಗಳನ್ನು ಗಮನಿಸಲಾಗಿದೆ. ಆ ಮೂಲಕ ಅಧ್ಯಯನಕ್ಕೆ ಬೇಕಾದ ರಾಚನಿಕ ಸ್ವರೂಪವೊಂದನ್ನು ಸಿದ್ಧಪಡಿಸಿ ಕೊಳ್ಳಲಾಗಿದೆ.

**ಅಧ್ಯಾಯ ಒಂದು**

ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಸ್ವರೂಪ, ಇದುವರೆಗೂ ಬಂದಿರುವ ಪಾಂಚಾಳರಿಗೆ ಸಂಬಂಧಿಸಿದ ಕೃತಿಗಳು ಮತ್ತು ಲೇಖನಗಳು ಪತ್ರಿಕೆಗಳು ಎಂ.ಫಿಲ್ ಕಿರುಪ್ರಬಂಧಗಳು ಪಿಎಚ್.ಡಿ. ಮಹಾಪ್ರಬಂಧಗಳು ಕುರಿತು ಸಮೀಕ್ಷೆ ಮಾಡಲಾಗಿದೆ. ಬಹುಮುಖವಾಗಿ ಪಾಂಚಾಳರ ವೃತ್ತಿ ಕ್ರಿಯೆ ಕಲೆ, ಜ್ಞಾನ ಮತ್ತು ಇತರೆ ಚಟುವಟಿಕೆಗಳಲ್ಲಿ ತೊಡಗಿಕೊಂಡ ಸಂಗತಿಗಳ ಕುರಿತ ಒಂದು ಸ್ಥೂಲ ಚರ್ಚೆ ಮಾಡಲಾಗಿದೆ.

**ಅಧ್ಯಾಯ ಎರಡು**

ಪಾಂಚಾಳ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆ ಎನ್ನುವ ಈ ಅಧ್ಯಾಯದಲ್ಲಿ ಮಾನವನ ಆಹಾರ ಸಂಗ್ರಹಣೆ ನೆಲೆಯಿಂದ ಆಹಾರ ಉತ್ಪಾದನೆ ಮತ್ತು ವಿನಿಮಯ ಪ್ರಕ್ರಿಯೆಯಲ್ಲಿ ಪಾಂಚಾಳರು ಕಬ್ಬಿಣದ ಆವಿಷ್ಕಾರದಿಂದ ಶುರುವಾಗಿ ಮನುಷ್ಯ ನಾಗರಿಕತೆಯ ಬೆಳವಣಿಗೆಗೆ ಪಾಂಚಾಳರ ಪಾತ್ರ

ಮಹತ್ವ ಎಂದು ಚರ್ಚಿಸಿದ್ದೇನೆ. ಪೌರಾಣಿಕ ನೆಲೆಗಳು ಯಾವುದೇ ಒಂದು ಜನಾಂಗ ಮತ್ತು ವೃತ್ತಿ ಹುಟ್ಟಬೇಕಾದರೆ ಅದಕ್ಕೆ ಕೆಲವು ಅನಿವಾರ್ಯವಾದ ಕಾರಣಗಳಿರುತ್ತವೆ. ಒಂದು ಸಮಾಜ ಕೆಲವು ಆಚರಣೆಗಳು ಪ್ರಕೃತಿ ನಿಯಮದಂತೆ ರೂಪಿತವಾಗಿರುತ್ತವೆ. ಅದೇರೀತಿಯಾಗಿ ಪಾಂಚಾಳರ ಪೌರಾಣಿಕ ನೆಲೆಗಳನ್ನು ಗಮನಿಸಿ, ಪಾಂಚಾಳರಿಗೆ ಸಂಬಂಧಿಸಿದಂತೆ ಹಲವು ಐತಿಹ್ಯಗಳನ್ನು ಚರ್ಚಿಸಿದ್ದೇನೆ. ಸಾಮಾಜಿಕ ಮತ್ತು ಮಾನವಶಾಸ್ತ್ರೀಯ ನೆಲೆಗಳನ್ನು ಕುರಿತು ಪುರಾಣ ಮತ್ತು ದಾರ್ಶನಿಕ ಆಕಾರಗಳನ್ನು ಆದರ್ಶಿಸಿ ಪಾಂಚಾಳರ ವೃತ್ತಿ ಮತ್ತು ಸಾಮಾಜಿಕವಾದಂತಹ ಮಾನವಶಾಸ್ತ್ರ ಪರಿಣತಿಯ ನೆಲೆಗಳಿಂದ ಪಾಂಚಾಳರ ಉಗಮ ಮತ್ತು ವಿಕಾಸವನ್ನು ಚರ್ಚಿಸಲಾಗಿದೆ.

**ಅಧ್ಯಾಯ ಮೂರು**

ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ನಿರ್ವಚನ ಎನ್ನುವ ಈ ಅಧ್ಯಾಯದಲ್ಲಿ ಪ್ರಾಚೀನ ಭಾರತೀಯ ಸಾಹಿತ್ಯ, ಪ್ರಾಚೀನ ಕನ್ನಡ ಸಾಹಿತ್ಯ ಎಂದು ವಿಭಾಗಿಸಿಕೊಂಡು ಕನ್ನಡ ಸಾಹಿತ್ಯದಲ್ಲಿ ಪಾಂಚಾಳರನ್ನು ಕುರಿತು ಪಂಪನಿಂದ ಮುದ್ದಣವರೆಗೂ ಬಂದಂತಹ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡಿ ದೊರೆತ ಮಾಹಿತಿಯನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಲಿಪಿ ಮಾಧ್ಯಮದ ಮೂಲಕ ಹುಟ್ಟಿ ಬಂದ ಸಾಹಿತ್ಯದಲ್ಲಿ ಒಂದು ಕಾವ್ಯ ಸಾಹಿತ್ಯ ಮತ್ತೊಂದು ದಾಖಲು ಸಾಹಿತ್ಯ ಗುಂಪಿಗೆ ಶಾಸನ, ಕಡತ, ಕೈಫಿಯತ್ತು, ಬಖೈರುಗಳು ಸೇರುತ್ತವೆ. ದಾಖಲೆಗಳ ಉಗಮಕ್ಕೆ ಕಾರಣ ನಡೆದ ಸಂಗತಿಗಳನ್ನು ಮುಂದಿನ ತಲೆಮಾರಿಗೆ ತಿಳಿಸಬೇಕೆಂಬುದು ಹಾಗೂ ಮನುಷ್ಯನ ಮಾತಿನಲ್ಲಿ ನಂಬಿಕೆ ಹೋದಾಗ ಅಂದರೆ ಅವನು ನುಡಿದಂತೆ ನಡೆದುಕೊಳ್ಳದಿದ್ದಾಗ, ಒಪ್ಪಂದವನ್ನು ದಾಖಲೆಯಾಗಿ ಹಿಡಿದಿಡುವ ಪ್ರಯತ್ನದ ಫಲ ಈ ದಾಖಲೆಗಳಾಗಿವೆ. ಪಾಂಚಾಳರನ್ನು ಕುರಿತು ದೊರೆತ ದಾಖಲೆಗಳನ್ನು ಚರ್ಚಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಪಾಂಚಾಳರು ತಾವು ನಿರ್ವಹಿಸುವ ವಿವಿಧ ರೂಪದ ದಾನ ಪಡೆದ ಹಾಗೂ ಪಡೆದುದರಲ್ಲಿ ಭಾಗಶಃ ತಿರುಗಿ ದಾನ ಮಾಡಿದ ಉಲ್ಲೇಖಗಳು ಕನ್ನಡ ಶಾಸನಗಳಲ್ಲಿ ದೊರೆಯುತ್ತವೆ. ಪಾಂಚಾಳರು ಸಾಮಂತರಾಗಿ ಮಂತ್ರಿಗಳಾಗಿ, ಭಂಡಾರಿಗಳಾಗಿ, ಕವಿಗಳಾಗಿ ಜ್ಯೋತಿಷಿಗಳಾಗಿ ಸಮಾಜದಲ್ಲಿ ಪಾಂಚಾಳರ ಪಾತ್ರ ಬಹುಮುಖ್ಯವಾಗಿತ್ತು ಎನ್ನುವುದನ್ನು ಹಲವಾರು ಶಾಸನಗಳ ಮೂಲಕ ಗುರುತಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ ನಾಲ್ಕು**

ಈ ಅಧ್ಯಾಯದಲ್ಲಿ ಕನ್ನಡ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳ ಪಾಂಚಾಳರು ಪ್ರಾತಿನಿಧ್ಯಗೊಂಡ ಬಗೆಗಳನ್ನು ಗೀತ ಪ್ರಧಾನ ಕಲಾ ಕೃತಿಗಳು, ಪ್ರಾಚೀನ ಕಾಲದಲ್ಲಿ ಪ್ರತಿಯೊಂದು ಧಾನ್ಯ ದವಸಗಳನ್ನು ಬೀಸುವ ಕಲ್ಲಿನಲ್ಲಿ ಒಳಕಲ್ಲಿನಲ್ಲಿ ಕುಟ್ಟಿ ಹಿಟ್ಟು ನುಚ್ಚು ಮಾಡುವ ಸಂದರ್ಭಗಳಲ್ಲಿ ಹಾಡುವ ಪದ್ಧತಿಯನ್ನು ನಮ್ಮ ಗ್ರಾಮೀಣ ಜನಪದರು ಬೆಳೆಸಿಕೊಂಡು ಬಂದಿದ್ದಾರೆ. ಬೀಸುವ ಕುಟ್ಟುವ ಹಾಡುಗಳನ್ನು ಪಾಂಚಾಳರು ಮತ್ತು ಪಾಂಚಾಳೇತರ ಮಹಿಳೆಯರ ಹಾಡುಗಳನ್ನು ಹಾಡಿದ್ದು ಕ್ಷೇತ್ರಕಾರ್ಯ ಸಮದರ್ಬದಲ್ಲಿ ಸಂಗ್ರಹಿಸಿ ಚರ್ಚಿಸಿದ್ದೇನೆ. ಜನಪದ ಕಥೆಗಳಲ್ಲಿ ವ್ಯಕ್ತಿಯ ಕಥೆಗಳು,

ವೃತ್ತಿಗೆ ಸಂಬಂಧಪಟ್ಟ ಕಥೆಗಳನ್ನು ಚರ್ಚಿಸಲಾಗಿದೆ. ಮತ್ತು ವಾದ್ಯ ಪ್ರದರ್ಶನ, ಪ್ರದರ್ಶನ ಕಲಾ ಪ್ರಕಾರಗಳನ್ನು ಅನುಲಕ್ಷಿಸಿ ಚರ್ಚಿಸಲಾಗಿದೆ.

**ಅಧ್ಯಾಯ ಐದು**

ಈ ಅಧ್ಯಾಯದಲ್ಲಿ ಪಾಂಚಾಳರ ಸಾಂಸ್ಕೃತಿಕ ಆಯಾಮಗಳ ಕುರಿತು ಕನ್ನಡ ಸಂಸ್ಕೃತಿ ಚಿಂತನೆಯನ್ನು ಸಾಮಾನ್ಯವಾಗಿ ಸಾಮಾಜಿಕವಾಗಿ ಉಚ್ಚ ಜಾತಿಯ ಪರಿಕಲ್ಪನೆಯಾಗಿ, ಪರಿಭಾವಿಸಲಾಗಿದೆ. ಉನ್ನತ ಆದರ್ಶಗಳನ್ನು ಪ್ರೇರಿಸಬಲ್ಲ ಭೌತಿಕ ಸ್ವಚ್ಛತೆಯನ್ನು ಹೊಂದಿರಬಲ್ಲ ಸುಸಂಸ್ಕೃತವಾಗಿ ಮಾತನಾಡಲು ಒಂದು ನಿರ್ದಿಷ್ಟ ಧರ್ಮಕ್ಕೆ ಮೀಸಲಾದ ಚಹರೆಗಳನ್ನು ಇಟ್ಟುಕೊಂಡು ಒಂದು ಆದರ್ಶಕ ಸಾಂಸ್ಕೃತಿಕ ನೆಲೆಗಳನ್ನು ಪ್ರತಿಪಾದಿಸಲಾಗಿದೆ.

**ಅಧ್ಯಾಯ ಆರು**

ಈ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ಹೇಳಲಾಗಿದೆ. ಅನುಬಂಧದಲ್ಲಿ ವೃತ್ತಿ ಪದಕೋಶಗಳು, ವಕ್ತೃಗಳ ವಿವರ, ಪರಾಮರ್ಶನ ಗ್ರಂಥಗಳು, ಛಾಯಾಚಿತ್ರಗಳನ್ನು ಅಡಕಗೊಳಿಸಲಾಗಿದೆ.

**೧.೨. ಅಧ್ಯಯನದ ಸಮೀಕ್ಷೆ**

'ಪಾಂಚಾಳರು' ಅಂದರೆ ಕಮ್ಮಾರ, ಬಡಿಗೇರ, ಅಕ್ಕಸಾಲಿಗ, ಕಂಚುಗಾರ ಮತ್ತು ಶಿಲ್ಪಗಾರರು. ಈ ವೃತ್ತಿ ಮಾಡುವವರನ್ನು ಪಾಂಚಾಳರು ಎಂದು ಕರೆಯುತ್ತಾರೆ. ವಿಶ್ವಕರ್ಮನಿಂದಲೇ ಈ ವಿಶ್ವ ಹುಟ್ಟಿದೆ. ಅವನಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ, ಸೂರ್ಯ ಮೊದಲಾದ ದೇವತೆಗಳೂ, ರಾಕ್ಷಸರೂ, ಗಂಧರ್ವರೂ, ಪಶುಪಕ್ಷಿಗಳು, ಸಕಲ ಜೀವಿಗಳು, ವಸ್ತುಗಳು ನಿರ್ಮಾಣವಾಗಿವೆ.

ವಿಶ್ವಕರ್ಮನ ಪಂಚಮುಖಗಳಿಂದ ಉದ್ಭವಿಸಿದ ಸಮುದಾಯವೇ ಪಾಂಚಾಳರು ಕರ್ತವ್ಯ ಪ್ರಜ್ಞೆಯುಳ್ಳವರಾಗಿದ್ದ ಪಾಂಚಾಳರು, ಹಳ್ಳಿಗಳಲ್ಲಿ ಅಲ್ಪಸಂಖ್ಯಾತರಾಗಿದ್ದರೂ ಸರ್ವರಿಗೂ ಅನಿವಾರ್ಯ ವಾಗಿದ್ದರು. ವ್ಯವಸಾಯ ಹಾಗೂ ಸೇವಾವೃತ್ತಿಯಂಥ ಉದ್ಯೋಗಗಳು ಕೇವಲ ವೃತ್ತಿಗಳಾಗಿರಲಿಲ್ಲ. ಅವು ಅವರ ಜೀವನಪದ್ಧತಿಗಳಾಗಿದ್ದವು.

ಬಡಿಗ, ಕಮ್ಮಾರ, ಲೋಹಕಾರ, ಶಿಲ್ಪಕಾರ, ಅಕ್ಕಸಾಲಿಗ ಹೀಗೆ ಐದು ವೃತ್ತಿಗಳನ್ನು ಅಧ್ಯಯನ ಮಾಡುವ ಮೂಲಕ ಪಾಂಚಾಳರೆಂದು ಗುರುತಿಸಿಕೊಳ್ಳುವರು. ಪಾಂಚಾಳರು ಇತರೆ ಸಮುದಾಯಗಳ ಜೊತೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದರು ಎಂಬುದಕ್ಕೆ ಅನೇಕ ಪುರಾವೆಗಳು ದೊರೆಯುತ್ತವೆ. ಉದಾಹರಣೆ ಕೂಸು ಹುಟ್ಟಿದರೆ ಆಚಾರಿ ಬೇಕು. ಸತ್ತರೆ ಆಚಾರಿ ಬೇಕು' ಎಂಬ ನುಡಿಮುತ್ತು ಪಾಂಚಾಳರ ಸಮಾಜೋಪಯೋಗಿ ಗುಣವನ್ನು ಹೇಳುತ್ತದೆ.

ಪ್ರಾಚೀನ ಸಾಹಿತ್ಯ ಕೃತಿಗಳಾದ ಪಂಪಭಾರತ, ಗದಾಯುದ್ಧ, ಶಬ್ದಮಣಿದರ್ಪಣ, ಸಿದ್ಧರಾಮಚಾರಿತ್ರ್ಯ, ಕುಮಾರರಾಮನ ಸಾಂಗತ್ಯ, ನಯಸೇನನ ಧರ್ಮಾಮೃತ, ಕನಕದಾಸರ ಮೋಹನ ತರಂಗಿಣಿ ಮುಂತಾದ ಸಾಹಿತ್ಯ ಕೃತಿಗಳಲ್ಲಿ ಪಾಂಚಾಳರ ಕುರಿತು ಮಾಹಿತಿ ದೊರೆಯುತ್ತದೆ. ಅಲ್ಲದೇ

ವಚನಕಾರರು, ತ್ರಿಪದಿಕಾರರು, ತತ್ವಪದಕಾರರು, ಪಾಂಚಾಳರ ವೃತ್ತಿಗಳ ಕುರಿತು ಉಪಕರಣಗಳ ಕುರಿತು ಸಮಾಜದಲ್ಲಿ, ಸಮುದಾಯದವರ ಜೊತೆಗೆ ಯಾವ ರೀತಿಯಾಗಿ ಬೆರೆತುಕೊಂಡಿದ್ದರು ಎಂಬುದರ ಉಲ್ಲೇಖಗಳಿವೆ. ಇಂತಹ ಅನೇಕ ಉದಾಹರಣೆಗಳು ಸಾಹಿತ್ಯದುದ್ದಕ್ಕೂ ಸಿಗುತ್ತವೆ. ಇಂತಹ ಸಮುದಾಯದ ಕುರಿತು ಅನೇಕ ಕೃತಿಗಳು ರಚನೆಯಾಗಿವೆ. ಹಾಗಾಗಿ ಅವುಗಳ ಕುರಿತು ಸಮೀಕ್ಷೆ ಮಾಡುವುದು ಸೂಕ್ತವೆನಿಸುತ್ತದೆ.

ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಕಟವಾಗಿರುವ ಡಾ.ದೇವೇಂದ್ರಕುಮಾರ ಹಕಾರಿ ಮತ್ತು ಡಾ.ಕೆ.ಆರ್. ಸಂಧ್ಯಾರೆಡ್ಡಿ ಅವರು ಸಂಪಾದಿಸಿರುವ 'ಗ್ರಾಮೀಣ ವೃತ್ತಿಗಳು' ಎಂಬ ಕೃತಿಯಲ್ಲಿ ಪಾಂಚಾಳರಿಗೆ ಸಂಬಂಧಿಸಿದ ಆರು ಲೇಖನಗಳಿವೆ. ಅವುಗಳೆಂದರೆ ಡಾ. ಸೈಯದ್ ಜಮೀರುಲ್ಲಾ ಷರೀಫ್ ಅವರ ಉತ್ತರ ಕನ್ನಡ ಜಿಲ್ಲೆಯ ಕಮ್ಮಾರಿಕೆ, ನರಸಿಂಹೇಗೌಡ ನಾರಣಾಪುರ ಅವರ 'ಚಿನಿವಾರಿಕೆ' ದಕ್ಷಿಣ ಕರ್ನಾಟಕದಲ್ಲಿ ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ 'ದಕ್ಷಿಣ ಕನ್ನಡದಲ್ಲಿ ಚಿನಿವಾರಿಕೆ', ಪ್ರೊ.ಎಂ.ಎಲ್.ನರಸಿಂಹಮೂರ್ತಿ ಅವರ ಕರ್ನಾಟಕದ ಬಡಿಗ ವೃತ್ತಿ ಹಾಗೂ ಆರ್.ಜಿ.ಶ್ಯಾನಭಾಗ ಅವರ ಉತ್ತರ ಕನ್ನಡದಲ್ಲಿ ಬಡಗಿತನ ಈ ಆರು ಲೇಖನಗಳಲ್ಲಿ ಪಾಂಚಾಳರಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಿದ್ದಾರೆ.

ಡಾ.ಸೈಯದ್ ಜಮೀರುಲ್ಲಾ ಷರೀಫ್ ಅವರ 'ಉತ್ತರ ಕನ್ನಡ ಜಿಲ್ಲೆಯ ಕಮ್ಮಾರಿಕೆ' ಎಂಬ ಲೇಖನದಲ್ಲಿ ಪಾಂಚಾಳರು ಎಂದರೆ ಕಬ್ಬಿಣ, ಕಟ್ಟಿಗೆ, ಚಿನ್ನ, ಕಂಚು ಹಾಗೂ ಕಲ್ಲಿನ ಕೆಲಸ ಮಾಡುವವರಿಗೆ ಪಾಂಚಾಳರು ಎಂದು ಗುರುತಿಸಿದ್ದಾರೆ. ಐದು ವೃತ್ತಿಗಳನ್ನು ನಿರ್ವಹಿಸುವ ಪ್ರತ್ಯೇಕ ವರ್ಗಗಳ ಜನರಿಗೆ ಪಾಂಚಾಳರು ಎಂದು ಹೆಸರು ಬಂದಿತು ಎಂದು ತಿಳಿಸಿದ್ದಾರೆ. ಪಾಂಚಾಳರ ಕೆಲಸಕ್ಕೆ ದೈಹಿಕ ಬಲವೇ ಬಂಡವಾಳ. ಇವರು ಶ್ರಮಜೀವಿಗಳಾಗಿರುತ್ತಿದ್ದರು. ಪಾಂಚಾಳರ ಮನೆಗಳಲ್ಲಿ ಹಿರಿಯರು ಆಚರಿಸುತ್ತಿದ್ದ ಸಂಪ್ರದಾಯಗಳು, ನಂಬುತ್ತಿದ್ದ ನಂಬಿಕೆಗಳು, ಮಾಡುತ್ತಿದ್ದ ವಸ್ತುಗಳು ಮರೆಯಾಗಿವೆ ಎಂದು ಹೇಳಿದ್ದಾರೆ.

ಕಮ್ಮಾರರು ಆಚರಿಸುವ ಹಬ್ಬಗಳು ದೀಪಾವಳಿ, ಸಂಕ್ರಾಂತಿ, ತುಳಸಿ ಪೂಜೆ ಮೊದಲಾದ ಹಬ್ಬಗಳನ್ನು ಆಚರಿಸುತ್ತಾರೆ. ತಾವು ಬಳಸುವ ವಸ್ತುಗಳಾದ ಅಡಿಗಲ್ಲು, ಘನ, ಇಕ್ಕಳ, ಚಾಣ, ಬರಗಲ್ಲು, ತಿದಿ, ಮತ್ತು ಚಕ್ರ ಇವುಗಳನ್ನೆಲ್ಲ ತೊಳೆದು ಚೊಕ್ಕಟಗೊಳಿಸಿ ಅವುಗಳಿಗೆ ಪೂಜೆ ಸಲ್ಲಿಸುತ್ತಾರೆ. ಅವರು ಬಳಸುವ ಕಚ್ಚಾ ಸಾಮಗ್ರಿಗಳು, ಸಾಧನಗಳು ಮತ್ತು ಉಪಕರಣಗಳು, ಕಮ್ಮಾರನ ಕೆಲಸಕ್ಕೆ ಅಡ್ಡಿಯಾಗುವ ಆತಂಕಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಪಾಂಚಾಳರ ಹಬ್ಬಗಳ ವಿವರಣೆಯ ಸಂದರ್ಭದಲ್ಲಿ ಬೇರೆ ಸಮುದಾಯದವರ ಜೊತೆಗೂಡಿ ಆಚರಿಸುವ ಹಬ್ಬಗಳ ಮಾಹಿತಿಯನ್ನು ತಿಳಿಸಿದ್ದಾರೆ.

ಕಮ್ಮಾರಿಕೆಯ ವೃತ್ತಿಯ ಸಂದರ್ಭದಲ್ಲಿ ಪಾಂಚಾಳರು ಅನುಸರಿಸುವ ಆಚರಣೆ ವಿಧಿ-ವಿಧಾನಗಳನ್ನು ವೃತ್ತಿ ಮತ್ತು ಕುಲದೇವತೆಗಳ ಹಬ್ಬಗಳಾದ ಶಿರಸಂಗಿ ಕಾಳಮ್ಮನ ಜಾತ್ರೆ, ತಿಂಥಿಣಿ ಮೌನೇಶ್ವರ ಜಾತ್ರೆ ಉತ್ಸವದ ಬಗ್ಗೆ ಉಲ್ಲೇಖ ಮಾಡಿಲ್ಲ.

ನರಸಿಂಹೇಗೌಡ ನಾರಾಯಣಪುರ ಅವರ 'ಚಿನಿವಾರಿಕೆ ದಕ್ಷಿಣ ಕರ್ನಾಟಕದಲ್ಲಿ' ಎಂಬ ಲೇಖನದಲ್ಲಿ ಆಯಗಾರರು ಎಂದರೆ ಗ್ರಾಮೀಣ ಸಮಾಜದ ಆಡಳಿತ ವ್ಯವಸ್ಥೆಯಲ್ಲಿ ರೈತರಿಗೆ ಮಾಡುತ್ತಿದ್ದ ವಿವಿಧ ರೀತಿಯ ಸೇವಾಕಾರ್ಯಗಳಿಗೆ ಪ್ರತಿಯಾಗಿ ವರ್ಷಕ್ಕೊಮ್ಮೆ ಹಡದೆ ಪಡೆಯುತ್ತಿದ್ದವರಿಗೆ ಆಯಗಾರರು ಎಂದು ಹೇಳಿದ್ದಾರೆ. ಆಯಗಾರರಿಗೆ ಇರುವ ಹಲವಾರು ಹೆಸರುಗಳನ್ನು ಗುರುತಿಸಿದ್ದಾರೆ. ಒಡವೆ ಆಭರಣಗಳನ್ನು ವಿಶ್ವಬ್ರಾಹ್ಮಣರು ತಯಾರಿಸಬೇಕು ಎಂಬ ನಿಯಮದ ಬಗ್ಗೆ ವಿವರಿಸಿದ್ದಾರೆ. ಜಗತ್ತನ್ನು ಸೃಷ್ಟಿಸಿದವನೆಂದೂ, ಪರಬ್ರಹ್ಮ ಸ್ವರೂಪನೆಂದೂ ವೇದಗಳಲ್ಲಿ ವರ್ಣಿತವಾಗಿರುವ 'ವಿಶ್ವಕರ್ಮ' ಅಕ್ಕಸಾಲಿಗ ವಂಶದ ಮೂಲಪುರುಷ ಪ್ರಾಚೀನ ಕಾಲದ ನಾಗರಿಕತೆಯನ್ನು ಗುರುತಿಸುವಾಗ ಅಕ್ಕಸಾಲಿಗರು ರಚಿಸಿರುವ ಆಭರಣ ವಿನ್ಯಾಸಗಳನ್ನು ಪರಿಗಣಿಸಲ್ಪಡುತ್ತದೆ. ರಾಜನು ಅಕ್ಕಸಾಲಿಗರನ್ನು ತಮ್ಮ ಅರಮನೆಯಲ್ಲಿ ಪುಕ್ಕಟೆಯಾಗಿ ಮನೆ ಕೊಟ್ಟು ವಜ್ರದ ಕೆಲಸವನ್ನು ಇವರಿಗೆ ವಹಿಸುತ್ತಿದ್ದನು.

ಚಿಕ್ಕಮನೆ ಆಚಾರ್ರು, ದೊಡ್ಡಮನೆ ಆಚಾರ್ರು, ಕುಲಾಚಾರ್ರು ಮತಾಚಾರ್ರು ಹಾಗೂ ಲಿಂಗಾಚಾರ್ರು ಎಂಬ ಜಾತಿಗಳು ಕಂಡುಬರುತ್ತವೆ. ಚಿಕ್ಕಮನೆ ಆಚಾರ್ರು ಮಾಂಸವನ್ನು ತಿನ್ನುವುದಿಲ್ಲ. ದೊಡ್ಡಮನೆ ಆಚಾರ್ರು, ಕುಲಾಚಾರ್ರು, ಮತಾಚಾರ್ರು ಮಾಂಸವನ್ನು ಸೇವಿಸುತ್ತಾರೆ. ಲಿಂಗಾಚಾರ್ರು ಇವರು ವೃತ್ತಿಯನ್ನು ಅವಲಂಬಿಸಿದ ಲಿಂಗಾಯತರು ಇವರು ಕೂಡ ಮಾಂಸವನ್ನು ತಿನ್ನುವುದಿಲ್ಲ. ಈ ಎಲ್ಲ ಜಾತಿಗಳಲ್ಲಿ ಚಿಕ್ಕಮನೆ ಆಚಾರ್ರು ಮಾತ್ರ ವೈದಿಕ ಪರಂಪರೆಯುಳ್ಳವರಾಗಿದ್ದಾರೆ ಎಂದು ತಿಳಿಸುತ್ತಾರೆ.

ಪಾಂಚಾಳರು ಹುಟ್ಟಿನಿಂದ ಹಿಡಿದು ಮರಣದವರೆಗೆ ಹಲವಾರು ವಿಧಿ ನಿಷೇಧಗಳನ್ನು ಕಲೆಹಾಕಿದ್ದಾರೆ. ಇದರ ಜೊತೆಗೆಯೇ ಚಿನ್ನ, ಬೆಳ್ಳಿ, ವಜ್ರವನ್ನು ತೂಕದ ಆಧಾರದ ಮೇಲೆ ಬೆಲೆ ಕಟ್ಟಲಾಗುತ್ತದೆ. ಅವುಗಳ ವಿವರವನ್ನು ಪ್ರಾಚೀನ ಕಾಲದಿಂದ ಆಧುನಿಕದವರೆಗೆ ವಿವರಣೆಯನ್ನು ನೀಡಿದ್ದಾರೆ.

ಅಕ್ಕಸಾಲಿಗರು ಆಭರಣಗಳನ್ನು ತಯಾರಿಸಲು ಬೇಕಾಗಿರುವ ಸಾಧನಗಳನ್ನು ಅವುಗಳ ಉಪಯೋಗ, ಕೆಲಸ ಮಾಡುವ ಸಂದರ್ಭದಲ್ಲಿ ಬೆಸುಗೆ ಹಾಕುವಾಗ ಬರುವ ಹೊಗೆಯಿಂದಾಗಿ ಅವರಿಗೆ ಕ್ಯಾನ್ಸರ್ ಬರುವ ಸಾಧ್ಯತೆ ಹೆಚ್ಚು ಎಂದು ತಿಳಿಸುತ್ತಾರೆ. ಪಾಂಚಾಳರು ಆಚರಿಸುವ ಹಬ್ಬ, ಸಾವು, ಸಂಸ್ಕಾರಕ್ಕೆ ಸಂಬಂಧಿಸಿದ ವಿಧಿ-ವಿಧಾನ, ಆರ್ಥಿಕ ಪರಿಸ್ಥಿತಿಗೆ ಸಂಬಂಧಿಸಿದಂತೆ ಸರ್ಕಾರದಿಂದ ಸಿಗುವ ಸವಲತ್ತುಗಳು, ಇಂದಿನ ಆಧುನಿಕ ಸಂದರ್ಭದಲ್ಲಿ ಸಾಂಪ್ರದಾಯಿಕ ವೃತ್ತಿ ನಶಿಸುತ್ತ ಬರುತ್ತದೆ. ಆಧುನಿಕತೆಗೆ ತಕ್ಕಂತೆ ಅವರ ವೃತ್ತಿ ಬದುಕಿನಲ್ಲಾದ ಮಾರ್ಪಾಡು ಇದಕ್ಕೆ ಸಂಬಂಧಿಸಿದಂತೆ ಅವರಲ್ಲಿಯ ಸಂಘ ಸಂಸ್ಥೆ ಸರ್ಕರದಿಂದ ಅವರಿಗೆ ವೃತ್ತಿ ತರಬೇತಿಗೆ ಇರುವ ಮಾಹಿತಿ ಮುಂತಾದ ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದರೆ, ಇನ್ನೂ ಹೆಚ್ಚಾಗಿ ಅಕ್ಕಸಾಲಿಗ ವೃತ್ತಿಯ ಮೇಲೆ ಬೆಳಕು ಚೆಲ್ಲಬಹುದಿತ್ತು ಎನಿಸುತ್ತದೆ.

ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ 'ದಕ್ಷಿಣ ಕನ್ನಡದಲ್ಲಿ ಚಿನಿವಾರಿಕೆ' ಲೇಖನದಲ್ಲಿ ಪ್ರಾಚೀನ ಕಾಲದಿಂದಲೂ ಮಾನವರು ತಮ್ಮ ದೇಹಸೌಂದರ್ಯವನ್ನು ಹೆಚ್ಚಿಸುವ ದೃಷ್ಟಿಯಿಂದ

ಬಗೆಬಗೆಯ ಅಲಂಕಾರ ಸಾಧನಗಳನ್ನು ಸೃಷ್ಟಿಸುತ್ತಲೇ ಬಂದಿರುವುದು ಎಂದು ವಿವರಿಸಿದ್ದಾರೆ. ಲೋಹದ ಸಂಶೋಧನೆಯಾಗುವ ಮೊದಲು ಮಾನವರು ಆಲಂಕಾರಿಕ ವಸ್ತುಗಳು ಯಾವುವು ಮತ್ತು ಚಿನ್ನದ ಸಂಶೋಧನೆಯಾದ ಬಳಿಕ ಚಿನ್ನದಿಂದ ಆಭರಗಳನ್ನು ತಯಾರಿಸುವ ಪದ್ಧತಿ ತಿಳಿಸಿದ್ದಾರೆ. ಸ್ತ್ರೀ ಪುರುಷರು ಪ್ರಾಚೀನ ಕಾಲದಲ್ಲಿ ಧರಿಸುತ್ತಿದ್ದ ಆಭರಣಗಳು ವೇದಗಳಲ್ಲಿ, ಪುರಾಣಗಳಲ್ಲಿ, ರಾಮಾಯಣ ಮಹಾಭಾರತಗಳಲ್ಲಿ ಚಿನ್ನ ಮತ್ತು ಚಿನ್ನಾಭರಣಗಳ ವರ್ಣನೆಯನ್ನು ಆಚಾರ್ಯ ಮತ್ತು ಆಚಾರಿ ಕುರಿತು ಪುರಾಣದ ಕಥೆಗಳ ವಿವರಣೆಯನ್ನು ನೀಡಿದ್ದಾರೆ.

ವಿಶ್ವಕರ್ಮನ ಐದು ಮಕ್ಕಳು ವೃತ್ತಿಯ ಮೂಲಕ ಗುರುತಿಸಿಕೊಂಡಿದ್ದಾರೆ. ಐದು ಮಕ್ಕಳಲ್ಲಿ ಅಕ್ಕಸಾಲಿಗರು ಒಬ್ಬರು. ಇವರ ಜೀವನಾವರ್ತನ ಆಚರಣೆಗಳು, ಆಚರಿಸುವ ಹಬ್ಬಗಳು, ಚಿನ್ನ ಬೆಳ್ಳಿ ಶುದ್ಧಿ ಮಾಡುವ ವಿಧಾನ ಉಪಯೋಗಿಸುವ ಉಪಕರಣಗಳು ಮತ್ತು ಉಂಟಾಗಿರುವ ತೊಂದರೆಗಳನ್ನು ವಿವರಿಸಿದ್ದಾರೆ. ಅಕ್ಕಸಾಲಿಗರ ಹಬ್ಬಗಳ ವಿವರಣೆಯನ್ನು ಮಾತ್ರ ಇದರಲ್ಲಿ ಕೊಟ್ಟಿದ್ದಾರೆ. ಯುಗಾದಿ ನಿಮಿತ್ತ ಕುಲದೇವತೆಯಾದ ಕಾಳಮ್ಮನ ಜಾತ್ರೆ, ಉತ್ಸವದ ಬಗ್ಗೆ ಮಾಹಿತಿ ನೀಡಬಹುದಿತ್ತು. ಈ ಚಿನಿವಾರಿಕೆಯ ಕೆಲಸದಿಂದ ಅವರ ಆರ್ಥಿಕ ಪರಿಸ್ಥಿತಿಯ ಬಗ್ಗೆ ಉತ್ತಮವಾಗಿದೆಯೋ ಇಲ್ಲವೋ ಅಕ್ಕಸಾಲಿ ಕೆಲಸದಿಂದ ಅವರಿಗೆ ಉಂಟಾಗಿರುವ ತೊಂದರೆಗಳನ್ನು ಹೇಗೆ ಪರಿಹರಿಸಿಕೊಳ್ಳಬಹುದು ಎಂಬೆಲ್ಲಾ ವಿಷಯದ ಕಡೆಗೆ ಲೇಖನದಲ್ಲಿ ಮಾಹಿತಿಯನ್ನು ಒದಗಿಸಬೇಕಿತ್ತು.

ಪ್ರೊ.ಎಂ.ಎಲ್.ನರಸಿಂಹಮೂರ್ತಿ ಅವರ 'ದಕ್ಷಿಣ ಕರ್ನಾಟಕದಲ್ಲಿ ಬಡಗಿ ವೃತ್ತಿ' ಎಂಬ ಲೇಖನದಲ್ಲಿ ಬಡಗಿ ಸಮುದಾಯದ ಸಂಕ್ಷಿಪ್ತ ಪರಿಚಯ, ಅವರು ಮೊದಲಿಗೆ ವೃತ್ತಿ ಮಾತ್ರವಾಗಿದ್ದ ಬಡಗಿ ಕಸುಬುತನ ನಂತರದಲ್ಲಿ ಜಾತಿಯಾಗಿ ರೂಪಗೊಂಡಿದೆ. ಅವರ ಕುಲದೇವರ ಬಗ್ಗೆ ಮತ್ತು ಅವರ ಮೂಲ ವೈದಿಕ ಆಚಾರಗಳನ್ನು ಅನುಸರಿಸುತ್ತಿದ್ದರ ಬಗ್ಗೆ ಮಾಹಿತಿ ನೀಡಿದ್ದಾರೆ. ಗಂಡುಮಗುವಾದರೆ ಉಪನಯನ, ಹೆಣ್ಣುಮಕ್ಕಳಾದರೆ ಋತುಮತಿಯಾದಾಗಿನ ಆಚರಣೆಗಳ ಬಗ್ಗೆ ವಿವರಣೆ ಕೊಟ್ಟಿದ್ದಾರೆ. ವೈದಿಕ ಆಚರಣೆಗಳನ್ನು ಅನುಸರಿಸುವವರು ಅವರು ಹುಟ್ಟಿನಿಂದ ಸಾಯುವ ತನಕ ಆಚರಿಸುವ ವಿಧಿವಿಧಾನಗಳ ಕುರಿತು ವಿವರಿಸಿದ್ದಾರೆ. ಸಾವು ಸಂಸ್ಕಾರಗಳಲ್ಲಿ ವೈದಿಕಶಾಹಿಯ ವಿಧಿವಿಧಾನಗಳನ್ನು ಅನುಸರಿಸುವ ವಿಷಯಗಳ ಬಗ್ಗೆ ಪ್ರಸ್ತಾಪಿಸುತ್ತಾರೆ.

ವ್ಯವಸಾಯ ಸಂಬಂಧಿತ ಪೀಠೋಪಕರಣಗಳು, ಗೃಹ ನಿರ್ಮಾಣ, ಗೃಹಬಳಕೆ, ಧಾರ್ಮಿಕ, ಕ್ರೀಡೆಗೆ ಶಾಲಾ ಕಾಲೇಜುಗಳಲ್ಲಿ ಬಳಸುವ ಇತರೆ ಸಿದ್ಧಪಡಿಸುವ ವಸ್ತುಗಳಿಗೆ ಸಂಬಂಧಿಸಿದ ಪಟ್ಟಿಯನ್ನು ನೀಡಿದ್ದಾರೆ. ಬಡಗಿತನಕ್ಕೆ ಬೇಕಾದ ಮರಗಳು, ಹೊನ್ನೆ, ಬೀಟೆ, ಮತ್ತಿ, ಹಲಸು, ಜಾಲಿ, ಮಾವು, ನೇರಳೆ, ಬೇವು ಮೊದಲಾದವು. ಸಾಧನ ಮತ್ತು ಉಪಕರಣಗಳು ಬಳಸುವ ಸಾಮಗ್ರಿಗಳು, ತಯಾರಿಕೆಯ ವಿವಿಧ ಹಂತಗಳು ಮತ್ತು ಪ್ರಕ್ರಿಯೆಗಳ ಬಗ್ಗೆ ತಿಳಿಸಿದ್ದಾರೆ.

ಬಡಗಿ ವೃತ್ತಿಯಿಂದ ದೊರಕುವ ಆದಾಯ, ಅವರ ಶ್ರಮ ಬಡಗಿ ಕೆಲಸಕ್ಕೆ ಸರ್ಕಾರಿ ಬ್ಯಾಂಕುಗಳಿಂದ ದೊರಕುವ ಸಾಲದ ಸೌಲಭ್ಯ, ಬಡಗಿತನಕ್ಕೆ ಉಪಯೋಗಿಸುವ ಕಟ್ಟಿಗೆಗಳನ್ನು

ಪರೀಕ್ಷಿಸುವ ವಿಧಾನ ಯಾವ ವಸ್ತುಗಳ ತಯಾರಿಕೆಗೆ ಯಾವ ಮರವನ್ನು ಬಳಸಿದರೆ ಸೂಕ್ತ ಎಂಬೆಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಬಹುದಿತ್ತು.

ಡಾ. ದಸ್ತಗೀರ ಅಲ್ಲಿಬಾಯಿ ಅವರ 'ಉತ್ತರ ಕರ್ನಾಟಕದ ಬಡಿಗ ವೃತ್ತಿ' ಎಂಬ ಲೇಖನದಲ್ಲಿ ಆಯಗಾರರ ವೃತ್ತಿಯಲ್ಲಿ ಪಾಂಚಾಳರು ಪ್ರಮುಖ ಪಾತ್ರ ವಹಿಸುತ್ತಾರೆ. ಭಾರತ ಹಳ್ಳಿಗಳ ದೇಶ ಮತ್ತು ಕೃಷಿಪ್ರಧಾನವಾದ ದೇಶ. ಇಲ್ಲಿ ಭೂಮಿಗೆ ಹೆಚ್ಚು ಮಹತ್ವ ಈ ಭೂಮಿಯ ಒಡೆಯನಾದ ರೈತನನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ವೃತ್ತಿಗಳು ರೂಪುಗೊಂಡಿರುತ್ತವೆ.

ಆಯಗಾರರಿಗೆ ವರ್ಷಕ್ಕೆ ಇಷ್ಟು ಎಂದು ನಿಗದಿ ಮಾಡಿದ ಪ್ರಕಾರ ಸುಗ್ಗಿಯಲ್ಲಿ ರೈತರು ತಮ್ಮ ಕಣದಲ್ಲಿಯೇ ರಾಗಿಯಿಂದ ಕಾಳು ಕಡಿಯನ್ನು ಸಲ್ಲಿಸುವ ಬಗ್ಗೆ ಮತ್ತು ಆ ಪದ್ಧತಿಯು ಕರ್ನಾಟಕದ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ರೂಢಿಯಲ್ಲಿದ್ದುದುರ ಕಂಡುಬರುವ ಬಗ್ಗೆ ವಿವರಿಸಿದ್ದಾರೆ. ಆಯಗಾರರಿಗೆ ಆಯ ಕೊಡುವುದರ ಜೊತೆಗೆ ವಿವಿಧ ಕಾಣಿಕೆ, ಸಂಭಾವನೆಗಳನ್ನು ಕೊಡುವುದಿದೆ. ಇವುಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ಧಾನ್ಯ, ವಸ್ತು ಅಥವಾ ಹಣದ ರೂಪದಲ್ಲಿ ನೀಡುತ್ತಿದ್ದರು. ಇಂತಹ ಕಾಣಿಕೆಗಳು ಊರಿಂದ ಊರಿಗೆ ಭಿನ್ನವಾಗಿರುತ್ತವೆ. ಅವು ತಲೆ ತಲಾಂತರದಿಂದ ಬಂದಿರುತ್ತವೆ. ಕುಟುಂಬಗಳಲ್ಲಿ ಪರಸ್ಪರ ಸುಖದುಃಖಗಳಲ್ಲಿ, ಧರ್ಮ ಕರ್ಮಗಳಲ್ಲಿ ಭಾಗಿಯಾಗಿಸುತ್ತವೆ. ಗ್ರಾಮಸಂಸ್ಕೃತಿಯ ಅಂಗವಾಗಿ ಬೆಳೆದು ಬಂದ ಆಯಗಾರರಲ್ಲಿ ಬಡಿಗೇರರು ಪ್ರಮುಖರು. ಇವರು ತಮ್ಮನ್ನು ವಿಶ್ವಬ್ರಾಹ್ಮಣರೆಂದು ಕರೆದುಕೊಳ್ಳುತ್ತಾರೆ. ಪೌರಾಣಿಕ, ಐತಿಹ್ಯ, ಶಾಸ್ತ್ರ ಪುರಾಣ ಹಾಗೂ ವೇದೋಪನಿಷತ್ತುಗಳ ಆಧಾರಗಳಿಂದ ಪುಷ್ಟೀಕರಿಸುತ್ತಾರೆ.

ಪಾಂಚಾಳ ಎಂಬ ಪದ ಕನ್ನಡದ ಶಾಸನಗಳಲ್ಲಿ ಬಳಕೆಯಾಗಿದೆ. ಕ್ರಿ.ಶ.೧೩೧೨ರ ಕೃಷ್ಣರಾಜಪೇಟೆ ಬೈರಾಪುರದ ಶಾಸನದಲ್ಲಿ ಪಾಂಚಾಳದವರಿಗೆ ಆಯ ಘಂಡಾಗ ಗದ್ದೆಯನ್ನು ಬೈರಾಪುರದ ಮಹಾಜನಗಳು ಕೊಟ್ಟಿರುವುದರ ಬಗ್ಗೆ ಉಲ್ಲೇಖವಿದೆ. ಪಾಂಚಾಳರಲ್ಲಿ ಸಗೋತ್ರ ವಿವಾಹ ಸಂಬಂಧ ಮಾಡುವ ಸಂಪ್ರದಾಯವಿಲ್ಲ. ಇವರು ಅಮಾವಾಸ್ಯೆ ದಿನ ತಮ್ಮ ವೃತ್ತಿ ಉಪಕರಣಗಳನ್ನು ಪೂಜಿಸಿ ನಂತರ ಆ ದಿನ ಕೆಲಸಕ್ಕೆ ಬಿಡುವು ಕೊಡುತ್ತಾರೆ. ಸಸ್ಯಾಹಾರಿಗಳಾದ ಇವರು ಹುಟ್ಟು, ಸಾವು ಮೊದಲಾದ ಸಂದರ್ಭಗಳಲ್ಲಿ ಮಡಿ, ಮೈಲಿಗೆ ಆಚರಿಸುತ್ತಾರೆ.

ಬಡಿಗೇರ ಮಾಡುವ ಕೆಲಸಗಳು ಸೂಕ್ಷ್ಮವಾದ ಕೆತ್ತನೆ ಕೆಲಸದ ಪರಿಕರಗಳನ್ನು, ಮಠದ ದೇವಸ್ಥಾನಗಳನ್ನು, ರಥಗಳನ್ನು ಮಾಡುವವರನ್ನು ಕುಶಲಬಡಗಿಗಳೆಂದು ಕರೆಯಬಹುದು. ಬಡಗಿ ಸಲ್ಲಿಸಿದ ಸೇವೆಗಾಗಿ ಬಡಗಿಗಳು ಆಯವನ್ನು, ಭೂಮಿಯನ್ನು ಪಡೆದ ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ.

ಬಡಿಗೇರ ವೃತ್ತಿಯ ಪ್ರಾಚೀನ ಸಂಪ್ರದಾಯಗಳು ಹಬ್ಬ ಹರಿದಿನಗಳು, ನಂಬಿಕೆ, ಆಚರಣೆಗಳು, ಅವರು ತಯಾರಿಸುವ ವಸ್ತುಗಳು ಬಳಸುವ ಸಾಧನ ಉಪಕರಣಗಳು, ಬಡಗಿತನದ ವಿವಿಧ ಹಂತಗಳು, ಬಡಗಿತನಕ್ಕೆ ಎದುರಾಗುವ ಅಡ್ಡಿ ಆತಂಕಗಳು ಬಡಗಿತನದಲ್ಲಿ ಕುಟುಂಬದ ಸಹಕಾರ

ಬಡಗಿತನದ ತರಬೇತಿ ಹಾಗೂ ವೃತ್ತಿ ಪಾರಿಭಾಷಿಕ ಪದಗಳ ಮೂಲಕ ಬಡಗಿತನದ ವೃತ್ತಿಯ ಬಗ್ಗೆ ಬೆಳಕನ್ನೂ ಹರಿಸಿದ್ದಾರೆ.

ಆರ್.ಜಿ. ಶ್ಯಾನುಭಾಗ ಅವರ 'ಉತ್ತರ ಕನ್ನಡದಲ್ಲಿ ಬಡಗಿತನ' ಎಂಬ ಲೇಖನದಲ್ಲಿ ಪುರಾಣ, ಜಾನಪದ ಇತಿಹಾಸ ಹಾಗೂ ಸಾಹಿತ್ಯ ಬಡಗಿತನವನ್ನು ಬಾಚಿ ಕಾಯಕವೆಂಬ ವಚನದಲ್ಲಿ ಉಲ್ಲೇಖಿಸಿದೆ. ಬಾಚಿಗೆ ಬಡಗಿತನದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಇದ್ದಿರುವುದೇ ಕಾರಣ. ಮರ ಕಡಿದು ಕೆತ್ತಿ ಗೃಹ ನಿರ್ಮಾಣದ ಮತ್ತು ಗೃಹೋಪಯೋಗಿ ಉಪಕರಣಗಳು ರೈತೋಪಯೋಗಿ ಉಪಕರಣಗಳು ಮುಂತಾದವುಗಳನ್ನು ಪಾರಂಪರಿಕವಾಗಿ ಮಾಡುತ್ತ ಬಂದಿರುವ ಕಸುಬಿಗೆ 'ಬಡಗಿತನ' ಎಂದು ಜಾನಪದ ಸಾಹಿತ್ಯದ ವ್ಯಾಖ್ಯಾನವಾಗಿದೆ. ಬಡಗಿತನ ಗ್ರಾಮೀಣ ಕಸಬು ಮನೆತನದ ಉದ್ಯೋಗ, ಪರಂಪರಾಗತ ವೃತ್ತಿ ಬಡಗಿಗಳು ವಿಶ್ವಕರ್ಮ ಸಮಾಜದವರೆಂದು ಕುಶಲ ಕೆಲಸಗಾರರಿಗೆ ಇದನ್ನೇ ವೃತ್ತಿನಾಮವಾಗಿ ಬಳಸುವರು. ವಿಶ್ವಕರ್ಮನನ್ನು ವೇದದಲ್ಲಿ ದೇವತೆ ಎಂಬ ಅರ್ಥದಲ್ಲಿ ಸಂಬೋಧಿಸಿದ್ದಾರೆ ಎಂದು ತಿಳಿಸುತ್ತಾರೆ.

ವಿಶ್ವಕರ್ಮನಿಗೆ ಸಾನಗ, ಸನಾತನ, ಅಹಭೂನ, ಪ್ರತ್ನ ಮತ್ತು ಸುಪರ್ಣರೆಂಬ ಪಂಚರ್ಷಿಗಳು ಮಾನಸ ಪುತ್ರರೆಂದು ಯಜುರ್ವೇದದಲ್ಲಿ ತಿಳಿಸುತ್ತಾರೆ. ಆಯಗಾರರಾದ ಬಡಗಿಯರು ತಮ್ಮ ಹಳ್ಳಿಗಳ ಅಗತ್ಯ ಕೆಲಸವನ್ನು ಪೂರೈಸುತ್ತಿದ್ದರು. ಆಯದಲ್ಲಿನ ಸ್ವಲ್ಪ ಭಾಗವನ್ನು ಬಡಗಿಯರು ದೇವರಿಗೆ ಕಾಣಿಕೆಯಾಗಿ ಸಲ್ಲಿಸುತ್ತಿದ್ದರು.

ಚಾಲುಕ್ಯ ಮತ್ತು ಹೊಯ್ಸಳರ ಕಾಲದಿಂದ ಬಡಗಿ ವೃತ್ತಿಯ ಮೇಲೆ ಬಡಗಿದೇಟೆ, ಕೊಡೆತಿವನ, ಅವರು ಉಪಯೋಗಿಸುವ ಕಚ್ಚಾವಸ್ತು ಹಾಗೂ ತಯಾರಿಸಿದ ಸಿದ್ಧವಸ್ತುಗಳ ಮೇಲೆ ತೆರಿಗೆಯನ್ನು ಹಾಕಲಾಗುತ್ತಿತ್ತು ಎಂದು ಲೇಖನದಲ್ಲಿ ತಿಳಿಸುತ್ತಾರೆ. ಅರಸರು ಹಾಗೂ ವಿಲಾಸಿ ವರ್ಗದವರ ಅಭಿರುಚಿಗನುಗುಣವಾಗಿ ಸೂಕ್ಷ್ಮವಾದ ಕೆತ್ತನೆ ಕೆಲಸ, ಪರಿಕರಗಳನ್ನು, ವಿಶೇಷವಾಗಿ ಮರದ ದೇವಸ್ಥಾನಗಳನ್ನು ಹಾಗೂ ರಥಗಳನ್ನು ಮಾಡುವವರನ್ನು ಕುಶಲ ಬಡಗಿಗಳೆಂದು ಕರೆದಿದ್ದಾರೆ.

ಬಡಗಿಗಳು ಬ್ರಹ್ಮಚಾರಿಗಳಾಗಿ ಭಕ್ತಿ ಭಜಕರಿಂದ ವಾರ್ಷಿಕ ಆದಾಯ ಮೂಲದಿಂದ ಭಿಕ್ಷೆ ಸ್ವೀಕರಿಸುತ್ತಿದ್ದರು. ಮಾಟ ಮಂತ್ರಗಳಲ್ಲಿ, ದೇವ ದೆವ್ವಗಳಲ್ಲಿ ಅಚಲ ನಂಬಿಕೆಯಿದ್ದರೂ ಹೋಮ ಹವನಗಳಲ್ಲಿ ಪ್ರಾಣಿಬಲಿಗೆ ಅವಕಾಶವನ್ನೇ ನೀಡುತ್ತಿರಲಿಲ್ಲ. ಈ ಸಮುದಾಯದಲ್ಲಿ ಬಹುಪತ್ನಿತ್ವ ಪ್ರಚಲಿತವಿತ್ತು. ವಿಧವಾವಿವಾಹಕ್ಕೆ ನಿಷೇಧವಿತ್ತು. ಪೂಜೆ–ಪುನಸ್ಕಾರ, ಗಣಹೋಮ ಹವನಗಳ ಮೂಲಕ ಆಚರಣೆ ಸಂಪ್ರದಾಯವನ್ನು, ಅಗಲಿರುವ ಹಿರಿಯರು ಕಿರಿಯರ ಆತ್ಮ ಸಂತೃಪ್ತಿಗೊಳಿಸುವ ಶ್ರದ್ಧೆ ಹಾಗೂ ಸರ್ವಪಿತ ಅಮಾವಾಸ್ಯೆಗಳನ್ನು ಆಚರಿಸುತ್ತಾರೆ ಎಂಬುದನ್ನು ತಿಳಿಸಿದ್ದಾರೆ.

ಪ್ರಾಚೀನ ಕಾಲಕ್ಕೆ ಸಂಬಂಧಿಸಿದಂತೆ ಅವರ ಆರ್ಥಿಕ ಪರಿಸರ ಸಭೆ ಸಮಾರಂಭಗಳಿಗೆ ಖರ್ಚು ಮಾಡುತ್ತಿದ್ದ ಹಣ, ಮನೆ ನಿರ್ಮಾಣಕ್ಕೆ ವಿನಿಯೋಗಿಸಿದ್ದ ಹಣ ಇವುಗಳ ಬಗ್ಗೆ ಮಾಹಿತಿ ನೀಡುತ್ತಾರೆ. ಆದರೆ ಆಧುನಿಕ ಸಂದರ್ಭದಲ್ಲಿ ಬಡಗಿ ವೃತ್ತಿಗೆ ಸಂಬಂಧಿಸಿದಂತೆ ಸರ್ಕಾರದಿಂದ

ಸಿಗುವ ಸೌಲಭ್ಯಗಳ ಗೌರವ ವೃತ್ತಿಯಿಂದ ಆರ್ಥಿಕತೆಯ ಸ್ವಾವಲಂಬನೆ ಗ್ರಾಮೀಣ ವೃತ್ತಿಗಳೆಲ್ಲಾ ಕ್ಷೀಣಿಸುತ್ತ ಆಧುನಿಕತೆಯ ಕಡೆಗೆ ಓಲುವುದಕ್ಕೆ ಕಾರಣವಾಗಿರುವ ಅಂಶಗಳ ಬಗ್ಗೆ ಲೇಖನದಲ್ಲಿ ಮಾಹಿತಿಯನ್ನು ನೀಡಿದ್ದಾರೆ.

ಡಾ. ವೀರೇಶ ಬಡಿಗೇರ ಅವರ 'ಅಡಿಗಲ್ಲು' ಎಂಬ ಕೃಷಿಯಲ್ಲಿ ಅಡಿಪೂಜೆ ಎಂಬ ಲೇಖನವಿದೆ. ಇದರಲ್ಲಿ ಅಡಿಗಲ್ಲು ಪೂಜೆ, ಕಂಬಾರ ಕುಲುಮೆ ಮತ್ತು ಮನೆಯಲ್ಲಿನ ಕ್ರಿಯೆಗಳ ಬಗ್ಗೆ ಚರ್ಚಿಸಿದ್ದಾರೆ. ವಿಶ್ವಕರ್ಮನ ಮಕ್ಕಳಾದ ಪಂಚಕರ್ಮಿಗಳಲ್ಲಿ 'ಮನು' ಮೊದಲನೆಯವನು. ಈತನೇ ಸೃಷ್ಟಿಕರ್ತ. ಕುಲುಮೆ ಹುಟ್ಟಿದ ಮೇಲೆಯೇ ಕುಲ ಹುಟ್ಟಿತು ಎನ್ನುವುದನ್ನು ತಿಳಿಸಿದ್ದಾರೆ.

ಬಡಿಗೇರ ಮನೆ ಮತ್ತು ಬಡಗಿ ಸಾಲಿಯಲ್ಲಿನ ಕ್ರಿಯೆಗಳು ಹಾಗೂ ಈ ಸಂದರ್ಭದ ಕೆಲವು ವಿಶೇಷ ಅಂಶಗಳ ಬಗ್ಗೆ ವಿವರಿಸುತ್ತಾರೆ. ಈ ಲೇಖನದ ಮುಖ್ಯ ಉದ್ದೇಶ ರೈತ ಮೊದಲ ಮಳೆ ಭೂಮಿಗೆ ಬಿದ್ದ ತಕ್ಷಣವೇ ತನ್ನ ಭೂಮಿಯನ್ನು ಬಿತ್ತಲಿಕ್ಕೆ ಪ್ರಾರಂಭಿಸುತ್ತಾನೆ. ಬಿತ್ತಲಿಕ್ಕೆ ಮುಖ್ಯವಾಗಿ ಕೂರಿಗೆ, ಕುಂಟೆ ರೆಂಟೆ, ಸೆಡ್ಡಿ, ಇತ್ಯಾದಿಗಳು ಬೇಕು. ಈ ರೈತಾಪಿ ಸಲಕರಣೆಗಳನ್ನು ರೈತ ಮಾಡಿಸಿಕೊಳ್ಳಲು ಪ್ರಾರಂಭಿಸುತ್ತಾನೆ. ಈ ಸಂದರ್ಭದ ಆಚರಣೆಗಳನ್ನು ಈ ಲೇಖನದಲ್ಲಿ ವಿವರಿಸಿದ್ದಾರೆ.

ಕಾ.ವಾ. ಆಚಾರ್ಯ ಅವರ 'ಸಾಹಿತ್ಯ ಮತ್ತು ವಿಶ್ವಕರ್ಮ ಸಂಸ್ಕೃತಿ' ಎಂಬ ಲೇಖನದಲ್ಲಿ ವಿಶ್ವಕರ್ಮರ ಸಂಸ್ಕೃತಿ ತಲೆತಲಾಂತರವಾಗಿ ಹರಿದುಬಂದ ಜೀವನದ ಸೊಗಸು ಎಂದು ವಿವರಿಸಿದ್ದಾರೆ. ಋಗ್ವೇದ ಕಾಲದ ಅರಸರ ಸಕಲ ತತ್ವಗಳು ಏಕಂಸತ್ ಸರ್ವಧರ್ಮ ಸಮನ್ವಯತೆ ಇವುಗಳಿಗೆಲ್ಲ ಆಧಾರ ಭೂತ, ವಿಶ್ವಕರ್ಮ ತತ್ವ ಎಂದು ಚರ್ಚಿಸಿದ್ದಾರೆ. ಅಥರ್ವಣಯಜ್ಞ ವ್ಯವಸ್ಥೆಯನ್ನು ಬಲಪಡಿಸಿದ ಅಥರ್ವಣನನ್ನು ಅಂಗೀರಸ ಕುಲದ ಪ್ರಥಮನೆಂದು, ಅಥರ್ವವೇದದೊಂದಿಗೆ ಸಂಬಂಧ ಹೊಂದಿರುವವನೆಂದು ವರ್ಣಿಸಿದ್ದಾರೆ.

ವೇದಕಾಲದಲ್ಲಿ ಶಿಲ್ಪಿಗಳಿಗೆ ಅತ್ಯುನ್ನತ ಸ್ಥಾನಮಾನ ಇತ್ತು. ಅಜಂತಾ, ಸಿಂಹಳದಿಂದ ಈಚೆಗೆ ಚಿತ್ರ-ಶಿಲ್ಪಕ್ಕಾಗಿ ಸವೇದ ವಿಶ್ವಕರ್ಮರನ್ನು ಗುರುತಿಸಿ ಮನು ಭಾರತಾರ್ಯರು ಪ್ರಥಮ ಅರಸ ಎಂದು ಪಂಚಶಿಲ್ಪಿಗಳಿಂದಲೇ ಭಾರತೀಯ ಸಂಸ್ಕೃತಿ ಅರಳಿತು ಎಂದು ತಿಳಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವ ಡಾ.ಡಿ.ಪಾಂಡುರಂಗಬಾಬು ಅವರ 'ಪಾಂಚಾಳ ವೃತ್ತಿ ಪದಕೋಶ' ಎಂಬ ಕೃತಿಯಲ್ಲಿ ಪಾಂಚಾಳರ ಐದು ವೃತ್ತಿಗಳನ್ನು ವಿಭಾಗಳಾಗಿ ವಿಂಗಡಿಸಿ ಈ ಪದಕೋಶವನ್ನು ವೃತ್ತಿನಿರತರನ್ನು ಖುದ್ದಾಗಿ ಅವರವರ ನೆಲೆಗಳಲ್ಲಿಯೇ ಸಂದರ್ಶಿಸಿ ಮಾಹಿತಿ ಪಡೆದು ಸಂಗ್ರಹಿಸಿದ್ದಾರೆ. ಐದು ವೃತ್ತಿಗಳೂ ಪ್ರತ್ಯೇಕ ವಿಭಾಗಗಳಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ವೃತ್ತಿಯ ಪದಗಳು, ಉಪಕರಣಗಳು, ಬಳಕೆ ನಿರ್ಮಾಣಗಳು, ವಿಧಗಳು, ತಯಾರಿಸುವ ಸಾಮಾನು, ವೃತ್ತಿ ಬಗೆಗಿರುವ ನಂಬಿಕೆ, ಮರಗಳಿಗೆ ಬರುವ ರೋಗ ನಿವಾರಣೆ, ನಿಷೇಧ, ಆಚರಣೆ, ದೈವ ಮತ್ತು ಸಂಕೀರ್ಣ ಪದಗಳು ಎಂದು ವರ್ಗಗಳಲ್ಲಿ ವಿಂಗಡಿಸಿಕೊಂಡಿದ್ದಾರೆ. ಪ್ರತಿಯೊಂದು ವೃತ್ತಿಯ

ಪದಪಟ್ಟಿಯನ್ನು 'ಅ'ಕಾರಾದಿಯಲ್ಲಿ ಸಂಯೋಜಿಸಿದ್ದಾರೆ. ಪ್ರತಿಯೊಂದು ಉಪಕರಣ ಪದಕ್ಕೂ ಅರ್ಥ ನೀಡಿದ್ದಾರೆ.

ಡಾ.ಎಸ್.ಎಸ್.ಅಂಗಡಿ ಅವರ 'ಬಡಗಿ ವೃತ್ತಿ ಪದಮಂಜರಿ' ಎಂಬ ಕೃತಿಯು ಬಡಗಿ ವೃತ್ತಿಗೆ ಸಂಬಂಧಪಟ್ಟ ಸಮಗ್ರ ಪದಗಳನ್ನು ಸಂಗ್ರಹಿಸಿ ಆ ಪದಗಳನ್ನು ಅವುಗಳ ವಿಶಿಷ್ಟತೆ ಮತ್ತು ವಿಂಗಡನೆ ಅರ್ಥ ವಿವರಣೆಯನ್ನು ಕೊಡುವ ನಿಘಂಟು ಕೃತಿ ಆಗಿದೆ. ಗ್ರಾಮೀಣ ಸಮುದಾಯದಲ್ಲಿ ಬಡಿಗೇರರ ಸ್ಥಾನಮಾನದ ಬಗೆಗೆ ವಿವರಿಸಿದ್ದಾರೆ. ಆಯ, ಆಯಗಾರ ಶಬ್ದಗಳ ಅರ್ಥ ಮತ್ತು ಸ್ವರೂಪ, ಬಡಗಿ ಶಬ್ದ ನಿಷ್ಪತ್ತಿ ಬಡಗಿಗಳ ಹುಟ್ಟಿದ ಬಗೆಗಿರುವ ಪುರಾಣಗಳು, ಐತಿಹ್ಯಗಳು ಬಡಗಿ ಬದುಕ, ರೈತರ ವೃತ್ತಿಯಲ್ಲಿ ಅವರ ಪಾತ್ರ ಮುಂತಾದ ಅಂಶಗಳನ್ನು ಚರ್ಚಿಸಿದ್ದಾರೆ.

ಬಡಿಗೇರ ವೃತ್ತಿಪದಗಳಿಗೆ ಸಂಬಂಧಿಸಿದ ಬಡಗಿಗಳ ವೃತ್ತಿಪದಗಳನ್ನು ಉಪಕರಣಗಳು, ಗೃಹೋಪಯೋಗಿ ವಸ್ತುಗಳು, ಕೃಷಿಸಂಬಂಧಿ ವಸ್ತುಗಳು, ಕ್ರಿಯಾಪದಗಳೆಂದು ವಿಂಗಡಿಸಿದ್ದಾರೆ. ಉಪಕರಣಗಳ ಕ್ರಿಯಾಪದಗಳಿಗೆ ಸಂಬಂಧಿಸಿದಂತೆ ಹೆಸರನ್ನು ಸೂಚಿಸಿ ಅದರ ಮುಂದೆ ಉಪಕರಣದಿಂದ ಮಾಡುವ ಕೆಲಸದ ಬಗ್ಗೆ ವಿವರಣೆ ನೀಡಿದ್ದಾರೆ. ಅನುಬಂಧ ಭಾಗದಲ್ಲಿ ಶಾಸನಗಳಲ್ಲಿ, ಹಂತಿ ಪದಗಳಲ್ಲಿ ಬಡಗಿ ವೃತ್ತಿ ಉಲ್ಲೇಖಿತವಾದ ಬಗ್ಗೆ ತಿಳಿಸಿದ್ದಾರೆ.

ಈ ಪದಕೋಶದಲ್ಲಿ ಬಡಗಿಯಲ್ಲಿ ಮುಖ್ಯವಾಗಿ ಬೇಕಾದ ಉಪಕರಣಗಳಾದ ಮಸಗಲ್ಲು, ಮಣಿ ಮತ್ತು ಗಿರಗೊಡ್ಡ, ಬಂಡಿಗೆ ಸಂಬಂಧಿಸಿದಂತೆ ಕುರಬದಕಟ್ಟು ಗಟ್ಟಿಯಕಟ್ಟು ಇಂತಹ ಅನೇಕ ಪದಗಳನ್ನು ಈ ವೃತ್ತಿ ಪದಕೋಶದಲ್ಲಿ ಸೇರಿಸಬಹುದಿತ್ತು.

ಡಾ.ಡಿ.ಸಿ.ರಾಜಪ್ಪ ಅವರ ಮೈಸುರು ರಾಜ್ಯದಲ್ಲಿ 'ವಾಣಿಜ್ಯ ಮತ್ತು ಕರಕುಶಲ ಕಲೆಗಳು' ಎಂಬ ಕೃತಿಯಲ್ಲಿ ಪಾಂಚಾಳರಿಗೆ ಸಂಬಂಧಿಸಿದ ಕರಕುಶಲ ಕಲೆಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಇದರ ಜೊತೆಗೆಯೇ ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಹನ್ನೊಂದು ಜಿಲ್ಲೆಗಳಲ್ಲಿ ಪಾಂಚಾಳರ ಜನಗಣತಿಗೆ ಸಂಬಂಧಿಸಿದಂತೆ ಹೆಣ್ಣು ಮಕ್ಕಳ ಸಂಖ್ಯೆ, ಗಂಡು ಮಕ್ಕಳ ಸಂಖ್ಯೆ ಅದರಲ್ಲಿ ಮಕ್ಕಳ ಸಂಖ್ಯೆ ಬಗ್ಗೆ ತಿಳಿಸುವುದಿಲ್ಲ. ಈ ಜನಸಂಖ್ಯೆಯವರೆಲ್ಲರೂ ಕೂಡ ಕರಕುಶಲ ಕಲೆಗಳಲ್ಲಿ ಭಾಗಿಯಾಗಿದ್ದಾರೆಯೇ ಎಂಬುದಕ್ಕೆ ಸ್ಪಷ್ಟತೆ ದೊರೆಯುವುದಿಲ್ಲ. ಮೈಸೂರು ರಾಜ್ಯದಲ್ಲಿ ಉಪಯೋಗಿಸುತ್ತಿದ್ದ ಆಭರಣ ಪಟ್ಟಿಯ ಹೆಸರುಗಳನ್ನು ಕೊಡುತ್ತಾರೆ. ವ್ಯಕ್ತಿಯು ಧರಿಸುವ ಆಭರಣಗಳ ರೀತಿ ನೀತಿನಿಂದ ಅವನ ಸಾಮಾಜಿಕ ಹಂತವನ್ನು ಗುರುತಿಸಬಹುದಿತ್ತು. ಪಾಂಚಾಳರಿಗೆ ಸಂಬಂಧಿಸಿದಂತೆ ಅಕ್ಕಸಾಲಿ, ಬಡಗಿ ಮತ್ತು ಕಮ್ಮಾರ ಕರಕುಶಲ ಕಲೆಗಳ ಬಗ್ಗೆ ಮಾತ್ರ ಮಾಹಿತಿ ದೊರೆಯುತ್ತದೆ. ಆದರೆ ಕಂಚುಗಾರ ಮತ್ತು ಶಿಲ್ಪಿಗೆ ಸಂಬಂಧಿಸಿದಂತೆ ಮಾಹಿತಿ ತಿಳಿಸಬಹುದಿತ್ತು.

ಡಾ.ಕೆ.ಎಸ್. ಕುಮಾರಸ್ವಾಮಿ ಅವರ 'ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರ್ಯರು' ಎಂಬ ಆಧುನಿಕಪೂರ್ವ ಕನ್ನಡ ಶಾಸನಗಳು ಅನುಲಕ್ಷಿಸಿ ಬರೆದ ಕೃತಿಯಲ್ಲಿ ಕೆಲವು ಪ್ರಾತಿನಿಧಿಕ ಕಲಾವಿದರ ಜೀವನ ಪುನಾರಚನೆಯ ಅಧ್ಯಯನವನ್ನು ಪರಿಚಯ ಮಾಡಿಕೊಡುತ್ತಾರೆ. ಶಿಲಾಶಾಸನ ಶಿಲ್ಪಿಗಳಾದ

ಪುಲಿಗೆರೆಯ ಬಮ್ಮೋಜನ ಮತ್ತು ಶ್ರವಣಬೆಳಗೊಳದ ಹೊಯ್ಸಳಾಚಾರಿಯ ಮನೆತನ, ಮೂರ್ತಿಶಿಲ್ಪಿಯಾದ ದಾಸೋಹದ ಮನೆತನ ಹಾಗೂ ತಾಮ್ರ ಶಾಸನಾಚಾರ್ಯನಾದ ವೀರಣ್ಣಾಚಾರ್ಯನ ಮನೆತನಗಳ ವಂಶಾವಳಿಯನ್ನು ಪರಿಚಯ ಮಾಡಿದ್ದಾರೆ. ಇವರ ಜೊತೆಗೆ ಶಿಲ್ಪಿಗಳ ಸಮಾಜವನ್ನು ಅಧ್ಯಯನ ಮಾಡಿದ್ದಾರೆ. ಅರ್ಥಿಕ ಸ್ಥಿತಿಗತಿ ಜೀವಿತದ ಆಯಗಾರಿಕೆ, ವ್ಯಕ್ತಿಗತ ದುಡಿಮೆ, ಆಚಾರಿಗಳ ಸಂಪಾದನೆ, ದೇವಸ್ಥಾನ ನಿರ್ಮಾಣದ ಆದಾಯ, ಕೃಷಿ ಕೆಲಸದ ಆದಾಯ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಪ್ರತ್ಯೇಕವಾದ ಅಧ್ಯಾಯಗಳಾಗಿ ವಿವರಿಸಿದ್ದಾರೆ.

ಈ ಕುಶಲಕೆಲಸಗಾರರಿಗೆ ವಿಧಿಸುತ್ತಿದ್ದ ತೆರಿಗೆ, ಇವರ ಅಂಗಡಿಗಳ ಮೇಲೆ ಹಾಕುತ್ತಿದ್ದ ತೆರಿಗೆ ಹಾಗೂ ಐದು ವೃತ್ತಿಯವರನ್ನು ಸಮಾವೇಶಗೊಳಿಸಿ ವಿಧಿಸುತ್ತಿದ್ದ ತೆರಿಗೆಯ ಕುರಿತಾದ ವಿಚಾರಗಳನ್ನು ಇಲ್ಲಿ ಚರ್ಚಿಸುತ್ತಾರೆ. ಒಟ್ಟಾರೆಯಾಗಿ ಈ ಕೃತಿಯು ಮಧ್ಯಕಾಲೀನ ಕರ್ನಾಟಕದ ಪಾಂಚಾಳರ ಸಮಾಜಕ್ಕೆ ಸೇರಿದ ಒಂದು ಅಧ್ಯಯನವಾಗಿದೆ.

ಡಾ.ಕರೀಗೌಡ ಬೀಚನಹಳ್ಳಿ ಅವರು ಸಂಪಾದಿಸಿರುವ 'ಕರಕುಶಲ ಕಲೆಗಳು' ಎಂಬ ಕೃತಿಯಲ್ಲಿ ಪಾಂಚಾಳರ ವೃತ್ತಿಗೆ ಸಂಬಂಧಿಸಿದ ಲೇಖನಗಳಿವೆ. ಅಕ್ಕಸಾಲಿಗರ ಬಗೆ ಅ.ಲ.ನರಸಿಂಹನ್ ಅವರು ಬರೆದಿದ್ದಾರೆ. ಕಮ್ಮಾರಿಕೆ ಎಂಬ ಲೇಖನವನ್ನು ಸುಭಾಷ್ ಕಮ್ಮಾರ ಅವರು 'ಕಂಚು' ಎಂಬ ಲೇಖನವನ್ನು ಪಿ.ಕೆ. ಖಂಡೋಬಾ ಅವರು, 'ಪೀಠೋಪಕರಣಗಳು' ಎಂಬ ಲೇಖನವನ್ನು ಡಾ. ವೀರೇಶ ಬಡಿಗೇರ ಬರೆದಿದ್ದಾರೆ.

ಸಾಮಾಜಿಕ ಕರಕುಶಲಕಲೆಗಳಲ್ಲಿ ಅಕ್ಕಸಾಲಿಕೆ ಪ್ರಮುಖವಾದದು. ಅಕ್ಕಸಾಲಿಕೆ ವೃತ್ತಿಯಿಂದ ಅವರು ಪಡೆಯುತ್ತಿದ್ದ ಸಂಭಾವನೆ, ಗೌರವ ಬಿರುದುಗಳನ್ನು, ಅವರು ಕೊಡಬೇಕಿದ್ದ ತೆರಿಗೆಗಳ ಬಗ್ಗೆ ಕಲಾವಿದನ ಸ್ಥಾನ ಹಾಗೂ ಕಲಾಶಿಕ್ಷಣಕ್ಕೆ ಕೊಟ್ಟಂತಹ ಪ್ರಾಮುಖ್ಯತೆಯನ್ನು ಇದರಲ್ಲಿ ತಿಳಿಸಿದ್ದಾರೆ.

'ಕಮ್ಮಾರಿಕೆ' ಲೇಖನದಲ್ಲಿ ಕರಕುಶಲಕಲೆಗಳ ಬೆಳವಣಿಗೆಗೆ ಪಾಂಚಾಳರ ಕೊಡುಗೆ ಅತ್ಯಂತ ಪ್ರಮುಖವಾದದ್ದು. ಕೃಷಿ ಹಾಗೂ ಕೃಷಿಯೇತರ ಉಪಕರಣಗಳ ನಿರ್ಮಾತೃಗಳನ್ನೇ ಕಮ್ಮಾರ ಬಡಗಿಗಳೆಂದು ಕರೆದಿದ್ದಾರೆ. ಇವರು ಮೂಲತಃ ವಿಶ್ವಬ್ರಾಹ್ಮಣ ಕುಲದವರಾಗಿದ್ದರು ಎಂದು ತಿಳಿಸಿದ್ದಾರೆ.

ಅಕ್ಕಸಾಲಿಗರು ಕಂಚುಗಾರರು ಹಾಗೂ ಕಮ್ಮಾರರು ಕ್ರಿ.ಶ. ಆರಂಭದ ವೇಳೆಗೆ ಶಕ್ತಿ ಸಂಪ್ರದಾಯ ಆಚರಣೆಗಳು ಬಂದಿದ್ದವು. ಕ್ರಿ.ಶ. ೩೫೦ರಲ್ಲಿ ಮೆಗಾಸ್ತನೀಸ್. ಭಾರತದಲ್ಲಿ ಬೇಸಾಯ ಮಾಡುವ ರೈತರ ಬಗ್ಗೆ ಹೇಳುತ್ತಾನೆ. ಆದರೆ ಕೃಷಿ ಉಪಕರಣಗಳ ಬಗ್ಗೆ ಪ್ರಸ್ತಾಪವಿಲ್ಲ. ಇವುಗಳ ಬಗ್ಗೆ ವಿವರಗಳು ಸಿಗುವುದು ರಾಮಾಯಣ ಮಹಾಭಾರತದಲ್ಲಿ. ೧೨ನೇ ಶತಮಾನದ ವಚನಕಾರರು ಕಮ್ಮಾರಿಕೆಯ ಬಗ್ಗೆ ಅನೇಕ ಕಡೆಗೆ ಪ್ರಸ್ತಾಪ ಮಾಡಿದ್ದಾರೆ. 'ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ' ಎಂಬ ಉಲ್ಲೇಖಗಳನ್ನು ತಿಳಿಸಿದ್ದಾರೆ. ಸರ್ವಜ್ಞನ ತ್ರಿಪದಿಗಳಲ್ಲಿ ದಾಸರ ಕೀರ್ತನೆಗಳಲ್ಲಿ ಅನೇಕ ಕವಿಗಳ ಸಾಹಿತ್ಯ ಕೃತಿಗಳಲ್ಲಿ ಹಾಗೂ ಸಂತ ಮೌನೇಶ್ವರರ ವಚನಗಳಲ್ಲಿ ಕಮ್ಮಾರಿಕೆಯ ವೃತ್ತಿ ಹಾಗೂ ಕೃಷಿ ಉಪಕರಣಗಳ ಬಗ್ಗೆ ಉಲ್ಲೇಖಗಳು ಸಿಗುತ್ತವೆ ಎಂದು ತಿಳಿಸುತ್ತಾರೆ.

ಕಮ್ಮಾರಿಕೆಯ ಬಗ್ಗೆ ಜನಮನದಲ್ಲಿರುವ ಐತಿಹ್ಯಗಳು, ರಚನಾವಿಧಾನ, ನಂಬಿಕೆ ಆಚರಣೆಗಳು ಹಾಗೂ ಈ ಸಾಮಾಜಿಕ, ಧಾರ್ಮಿಕತೆಗೆ ಸಂಬಂಧಿಸಿದಂತೆ ಕಮ್ಮಾರಿಕೆಯ ಉಪಯೋಗ ಕುರಿತಂತೆ ಚರ್ಚಿಸುತ್ತಾರೆ.

'ಕಂಚು' ಎಂಬ ಲೇಖನದಲ್ಲಿ ತಾಮ್ರ ಮತ್ತು ತವರುಗಳ ಮಿಶ್ರ ಲೋಹವೇ 'ಕಂಚು' ಎಂದು ಹೇಳಿದ್ದಾರೆ. ಚಾರಿತ್ರಿಕ ಹಿನ್ನೆಲೆಯಲ್ಲಿ ಮಾನವನ ನಾಗರಿಕತೆ ಬೆಳೆದುಬಂದ ಪ್ರಮುಖ ಘಟ್ಟಗಳಾದ ಶಿಲಾಯುಗ, ಕಂಚಿನ ಯುಗ ಕಬ್ಬಿಣ ಯುಗ, ಯಂತ್ರ ಯುಗ ಎಂದು ಹೇಳಿದ್ದಾರೆ. ಶಿಲಾಯುಗ ಮತ್ತು ಕಬ್ಬಿಣ ಯುಗಗಳ ಮಧ್ಯದ ಅವಧಿಯಲ್ಲಿ ಕಂಚಿನ ತಯಾರಿಕೆ ಪ್ರಾರಂಭವಾಯಿತೆಂದು ತಿಳಿದುಬಂದಿದೆ.

ಕ್ರಿಸ್ತಪೂರ್ವ ಮೂವತ್ತು ಶತಮಾನಗಳಷ್ಟು ಹಿಂದೆಯೇ ಕಂಚನ್ನು ಕರಗಿಸಿ ಆಯುಧಗಳನ್ನು ತಯಾರಿಸುವ ಕ್ರಮ ಭಾರತದಲ್ಲಿ ಇತ್ತೆಂಬ ವಿಚಾರವು ಮೆಹೆಂಜೋದಾರೋದಲ್ಲಿ ನಡೆಸಿದ ಉತ್ಖನನದಿಂದ ತಿಳಿದುಬಂದಿರುವ ಬಗ್ಗೆ ವಿವರಿಸಿದ್ದಾರೆ.

ಕಂಚನ್ನು ವಿಗ್ರಹಗಳಿಗೆ, ಶಿಲ್ಪಕಲಾಕೃತಿಗಳಿಗೆ, ದೇವಸ್ಥಾನದ ಬಾಗಿಲುಗಳಿಗೆ ಹಾಗೂ ದೀಪಸ್ತಂಬ ಮೊದಲಾದವುಗಳಿಗೆ ಅತ್ಯಗತ್ಯವಾಗಿ ಉಪಯೋಗಿಸಲಾಗುತ್ತಿತ್ತು. ಕಂಚಿಗೆ ಸಂಬಂಧಿಸಿದಂತೆ ಇತರೆ ಸಮುದಾಯದವರು ಇಟ್ಟುಕೊಂಡು ಬಂದಂತಹ ನಂಬಿಕೆ ಆಚರಣೆಗಳನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ.

'ಪೀಠೋಪಕರಣಗಳು' ಎಂಬ ಲೇಖನದಲ್ಲಿ ಕಟ್ಟಿಗೆ ಕಲೆಯ ಹುಟ್ಟು, ವೇದಾಗಮಗಳಲ್ಲಿ ಮರಗೆಲಸದ ಉಲ್ಲೇಖ, ಋಗ್ವೇದದಲ್ಲಿ ಮರಗೆಲಸಗಾರನ ಉಲ್ಲೇಖ ಮತ್ತು ತಕ್ಷಣಿ, ವರ್ಧಕಿ ಎನ್ನುವ ಪದಗಳನ್ನು ಈ ಲೇಖನದಲ್ಲಿ ತಿಳಿಸಿದ್ದಾರೆ. ವೇದದಲ್ಲಿ ರಥ, ಪಲ್ಲಕ್ಕಿ, ಹಡಗುಗಳ ನಿರ್ಮಾಣ ಕುರಿತಾದ ವಿವರಗಳು ಸಿಗುವುದರ ಬಗ್ಗೆ ತಿಳಿಸಿದ್ದಾರೆ.

ಪೀಠೋಪಕರಣಗಳ ತಯಾರಿಕೆ ಮತ್ತು ಬಡಗಿ ಕೆಲಸದ ಬಗ್ಗೆ ವಿವರಿಸಿದ್ದಾರೆ. ಬಡಗಿತನ ಕಲೆ ದೈಹಿಕ ಪರಿಶ್ರಮವುಳ್ಳ ಕಲೆಯಾಗಿದೆ. ಯಂತ್ರೋಪಕರಣಗಳಿಲ್ಲದ ಕಾಲದಲ್ಲಿ ಬಡಗಿಯೇ ಕೆತ್ತಿ ಕೊರೆದು ಕಟ್ಟಿಗೆಯನ್ನು ವಸ್ತುವಿನ ತಯಾರಿಕೆಗೆ ತಂದುಕೊಳ್ಳುತ್ತಿದ್ದರ ಬಗ್ಗೆ ತಿಳಿಸಿದ್ದಾರೆ.

ಬಡಗಿ ಕೆಲಸಗಾರರು ಸ್ವತಂತ್ರರಾಗಿರುತ್ತಾರೆ ಸಾರ್ವತ್ರಿಕರಾಗುತ್ತಾರೆ. ಕುಲಭೇದವಿಲ್ಲದ ಕೆಲಸ ನಿರ್ವಹಿಸುತ್ತಾರೆ. ಈ ಕಸುಬು ತಂದೆಯಿಂದ ಮಗನಿಗೆ ಹಸ್ತಾಂತರವಾಗುತ್ತ ಹೋಗುತ್ತದೆ ಮತ್ತು ಬಳಸುವ ಕಟ್ಟಿಗೆಗಳ ಬಗ್ಗೆ ವಿವರಿಸಿದ್ದಾರೆ. ಒಟ್ಟಾರೆಯಾಗಿ ಈ ನಾಲ್ಕು ಲೇಖನಗಳನ್ನು ಗಮನಿಸಿದಾಗ ಇದರಲ್ಲಿ ಕರಕುಶಲಕಲೆಗಳು ಎಂದಿನಿಂದ ಪ್ರಾರಂಭವಾದವು ಅವುಗಳಿಗೆ ಇದ್ದ ಬೆಲೆ, ಅವುಗಳಿಂದ ಪಡೆಯುತ್ತಿದ್ದ ಸಂಭಾವನೆ, ಗೌರವಗಳನ್ನು ಕುರಿತು ತಿಳಿಸಿದ್ದಾರೆ.

ಈ ಕುಶಲಕಲೆಗಳಿಗೆ ಇರುವ ಆರ್ಥಿಕ ಪರಿಸರ ವ್ಯವಸ್ಥೆ, ಅವುಗಳನ್ನು ಕಲಿಸುವ ಸಂಸ್ಥೆಗಳು ಈ ವೃತ್ತಿಗಳಿಗೆ ನೀಡಿದ ಬಿರುದು ಗೌರವಗಳ ಬಗ್ಗೆ ಮಾಹಿತಿಯನ್ನು ನೀಡಬಹುದಿತ್ತು.

'ಕಾಳಿಕಾ ಸಂದೇಶ' ಎಂಬ ಮಾಸಪತ್ರಿಕೆ ಪ್ರಧಾನ ಸಂಪಾಕದರಾದ ಜಗನ್ನಾಥ ಬಡಿಗೇರ, ಶಿರಸಂಗಿ, ಗೌರವ ಸಂಪಾದಕರಾದ ಡಾ.ಎಸ್.ಕೆ.ಜೋಶಿ, ಧಾರವಾಡ ಇವರು ಪಾಂಚಾಳರಿಗೆ ಸಂಬಂಧಿಸಿದಂತೆ ಮಹತ್ವದ ಲೇಖನಗಳನ್ನು ಸಂಪಾದಿಸಿ ಈ ಕಾಳಿಕಾ ಸಂದೇಶ ಸಂಚಿಕೆಯನ್ನು ಪ್ರತಿ ತಿಂಗಳು ಪ್ರಕಟಿಸುತ್ತಿದ್ದಾರೆ. ಇದರಲ್ಲಿ ಪ್ರಕಟವಾಗಿರುವ ಲೇಖನಗಳೆಂದರೆ ಕಾ.ವಾ.ಆಚಾರ್ಯ ಅವರ 'ವಿಶ್ವಕರ್ಮ ಸಂಸ್ಕೃತಿ' ವಿ.ಡಿ. ಪತ್ತಾರ ಅವರ ವಿಶ್ವಕರ್ಮರ ಕಲೆಗಳು, ಡಾ.ವೀರೇಶ ಬಡಿಗೇರ ಅವರ ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಅನುಸಂಧಾನ, ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ಯ ಅವರ ಸಾಹಿತ್ಯದಲ್ಲಿ ಪಂಚಶಿಲ್ಪಿ, ವ್ಹಿ.ಜಿ.ದೀಕ್ಷಿತ ಅವರ 'ಶಾಸನಗಳಲ್ಲಿ ಶಿರಸಂಗಿ ಮತ್ತು ಪಾಂಚಾಳರ ಕುಲದೇವತೆ ಶ್ರೀ ಕಾಳಿಕಾದೇವಿ', ಪಿ.ಜಿ. ಆಚಾರ್ಯ ಅವರ 'ನಾವು ವಿಶ್ವಬ್ರಾಹ್ಮಣರು', ಡಾ.ಹೆಚ್.ಬಿ.ದೊರೆಸ್ವಾಮಿ ಅವರ 'ವಿಶ್ವಬ್ರಾಹ್ಮಣ ಸಾಹಿತ್ಯದ ಪುನರುಜ್ಜೀವನ ಅತ್ಯಂತ ಅಗತ್ಯ', ಡಾ.ಎಸ್.ಕೆ.ಜೋಶಿ ಅವರ 'ವಿಶ್ವಕರ್ಮ ಸಂಸ್ಕೃತಿ', ನಾ.ಬಾ. ಚಂದ್ರಶೇಖರಾಚಾರ್ಯ ಅವರ 'ವಿಶ್ವಕರ್ಮ ಪೂಜೆ ಮತ್ತು ಅದರ ಸಂಕೇತ' ಎಂಬ ಲೇಖನಗಳಿವೆ. ಒಟ್ಟಾರೆಯಾಗಿ ಈ ಕಾಳಿಕಾ ಸಂದೇಶ ಸಂಚಿಕೆಯ ವಿಶ್ವಕರ್ಮರ ಮೂಲ ಸಂಸ್ಕೃತಿ, ಪ್ರಗತಿ, ಆಚರಣೆಗಳು, ಶಿಕ್ಷಣ ಹಾಗೂ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ತಿಳಿಸುವ ಮಹತ್ವದ ಪತ್ರಿಕೆಯಾಗಿದೆ.

ಧಾರವಾಡ ಜಿಲ್ಲೆ ಗ್ಯಾಸೆಟಿಯರ್‌ನಲ್ಲಿ ಪಾಂಚಾಳರ ಬಗ್ಗೆ ಕುರಿತಾದ ಮಾಹಿತಿ ದೊರೆಯುತ್ತದೆ. ಹುಬ್ಬಳ್ಳಿ ಗದಗಗಳಲ್ಲಿ ಗ್ರಾಮಾಂತರ ಕುಶಲಕಲೆಗಾರರ ತರಬೇತಿ ಕೇಂದ್ರಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಹೊಳೆ ಆಲೂರಿನ ವಿಶ್ವಕರ್ಮದವರು ಕುಶಲಕರ್ಮಕ್ಕೆ ಹೆಸರಾದವರ ಮತ್ತು ಅವರು ಕುಶಲ ಕಲಾತ್ಮಕ ವಸ್ತುಗಳಿಗೆ ಬಳಸುವಂತಹ ಕಟ್ಟಿಗೆಯ ಬಗ್ಗೆ ವಿವರಿಸಿದ್ದಾರೆ. ಅವರ ಕಲೆಯಲ್ಲಿ ನವಿಲು ಕುಣಿತ, ಚಕ್ರ, ರುದ್ರಾಕ್ಷಿ ಪದಕ, ಗಿಳಿ ಮುಂತಾದವುಗಳು ಅಂದವಾಗಿ ಮೂಡಿಬಂದಿರುವ ಬಗ್ಗೆ ತಿಳಿಸಿದ್ದಾರೆ. ಧಾರವಾಡ ಜಿಲ್ಲೆಯ ಪ್ರಮುಖ ಕುಶಲಕರ್ಮಿಗಳ ಹೆಸರನ್ನು ಹೆಸರಿಸಿದ್ದಾರೆ.

ಧಾರವಾಡ, ಬೆಳಗಾವಿ, ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳ ಗ್ಯಾಸೆಟಿಯರ್‌ನಲ್ಲಿ ವಿಶ್ವಕರ್ಮರ ಮಾಹಿತಿ ಉಲ್ಲೇಖವಾಗಿದೆ. ಕಾಳಮ್ಮ ವಿಶ್ವಕರ್ಮನನ್ನು ಹುಟ್ಟಿಸಿದಳು, ಅವನಿಗೆ ವಿರಾಟ ಪುರುಷನೆಂತಲೂ ಕರೆಯುತ್ತಾರೆ. ಆ ವಿರಾಟ ಪುರುಷನಿಂದ ಐದು ಮಕ್ಕಳು ಜನಿಸಿದ ಬಗ್ಗೆ ಮತ್ತು ಅವರ ವೃತ್ತಿಯ ವಿವರಣೆ ನೀಡಿದ್ದಾರೆ. ಬ್ರಾಹ್ಮಣರ ಉಡುಗೆ ತೊಡುಗೆಯ ಮತ್ತು ವಿಶ್ವಕರ್ಮರ ಉಡುಗೆ-ತೊಡುಗೆಯ ವ್ಯತ್ಯಾಸವನ್ನು ಗುರುತಿಸಿದ್ದಾರೆ. ವಿಶ್ವಕರ್ಮರ ಗುರುವಿನ ಬಗ್ಗೆ ಮತ್ತು ಅವರ ಸಂಸ್ಕಾರಗಳ ಬಗ್ಗೆ ತಿಳಿಸಿದ್ದಾರೆ.

ಸೂರ್ಯನಾಥ ಯು.ಕಾಮತ್ ಅವರ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೨'ರಲ್ಲಿ ಬಡಗಿಗಳು ಮತ್ತು ಕಮ್ಮಾರ, ಅಕ್ಕಸಾಲಿಗರ ಬಗ್ಗೆ ಮಾಹಿತಿ ನೀಡಿದ್ದಾರೆ. ಬಡಗಿ ವೃತ್ತಿ ಒಳಗೊಂಡಿರುವ ವಸ್ತುಗಳನ್ನು ಹೆಸರಿಸಿದ್ದಾರೆ. ಇವರು ಸ್ವತಂತ್ರವಾಗಿ ಕೆಲಸ ನಿರ್ವಹಿಸುತ್ತಾರೆ ಮತ್ತು ಅವರ ಆದಾಯದ ಬಗ್ಗೆ ತಿಳಿಸಿದ್ದಾರೆ.

ಕಮ್ಮಾರರು ಕೈಯಿಂದ ಅಥವಾ ಯಂತ್ರಗಳಿಂದ ಕಾಯಿಸಿ ಬಡಿಯವುದು, ನಕ್ಷೆಗನುಗುಣವಾಗಿ ಲೋಹದಲ್ಲಿ ಗುರುತು ಮಾಡುವುದು ಮತ್ತು ಸ್ವಯಂ ಚಾಲಿತ ಯಂತ್ರಗಳನ್ನು ತಯಾರಿಸುವ ಕುರಿತು ಮತ್ತು ಅವರ ಗಳಿಕೆಯ ಬಗ್ಗೆ ಮಾಹಿತಿ ನೀಡಿದ್ದಾರೆ.

ಅಕ್ಕಸಾಲಿಗರು ರತ್ನಗಳನ್ನು ಗುರುತಿಸಿ ಗಾತ್ರವನ್ನು ಪರೀಕ್ಷಿಸಿ ಅಮೂಲ್ಯ ಲೋಹದ ಸಾಮಗ್ರಿಗಳಿಗೆ ಅವುಗಳನ್ನು ಜೋಡಿಸುವುದು ಮತ್ತು ಚಿನ್ನ ಹಾಗೂ ಬೆಳ್ಳಿ ಕೆಲಸದಲ್ಲಿ ನಿರತರಾಗಿರುವ ಬಗ್ಗೆ ವಿವರಿಸಿದ್ದಾರೆ. ಹೀಗೆ ಕರ್ನಾಟಕದ ಎಲ್ಲಾ ಜಿಲ್ಲೆಗಳ ಗ್ಯಾಸೆಟಿಯರ್‌ಗಳಲ್ಲಿ ಪಾಂಚಾಳರ ಬಗ್ಗೆ ಮಾಹಿತಿ ದೊರೆಯುತ್ತದೆ. ಪಾಂಚಾಳರನ್ನು ವಿಶ್ವಬ್ರಾಹ್ಮಣ, ವಿಶ್ವಕರ್ಮ ಎಂದು ಕರೆಯುವುದುಂಟು. ಇವರು ವಿಶೇಷವಾಗಿ ಅವರವರ ಪರಂಪರಾಗತ ಕಲಾಕೌಶಲ್ಯಕ್ಕೆ ಪ್ರಸಿದ್ಧರಾಗಿದ್ದಾರೆ. ಚಿನ್ನ, ಬೆಳ್ಳಿ, ಕಾಷ್ಠ, ಕಬ್ಬಿಣ, ಶಿಲ್ಪ, ತಾಮ್ರದ ಕೆಲಸವನ್ನು ಕೈಗೊಳ್ಳುವ ಇವರಿಗೆ ಮುಖ್ಯವಾಗಿ ಕಮ್ಮಾರ–ಮಯ, ಬಡಗಿ–ಮನು, ಕಂಚುಗಾರ–ತ್ವಷ್ಟ, ಅಕ್ಕಸಾಲಿಗ–ವಿಶ್ವಜ್ಞ ಹಾಗೂ ಶಿಲ್ಪಿಗಾರ–ಶಿಲ್ಪಿ ಎಂಬ ಋಷಿಗಳ ಮಕ್ಕಳಾದ ಇವರಿಗೆ ಸನಾತನ, ಸನಗಾಸ್ಯ, ಅಹಭೂವನ, ಪ್ರಾತ್ನಸ್ಯ ಹಾಗೂ ಸುಪರ್ಣಸ್ಯ ಎಂಬ ಗೋತ್ರಗಳಿವೆ. ಇವರು ಕನ್ನಡ ಭಾಷಿಕರು. ಇವರಲ್ಲಿ ಉಪನಯನ ಪದ್ಧತಿ ರೂಢಿಯಿದೆ. ವಿಧವಾವಿವಾಹ ಹಾಗೂ ವಿವಾಹ ವಿಚ್ಛೇದನಗಳು ಆಚರಣೆಯಲ್ಲಿಲ್ಲ. ಇವರು ಸಸ್ಯಾಹಾರಿಗಳು, ಹುಟ್ಟು–ಸಾವು ಸಂದರ್ಭದಲ್ಲಿ ಸೂತಕ ಆಚರಿಸುತ್ತಾರೆ. ಕಾಳಿಕಾದೇವಿ, ಮೌನೇಶ್ವರ ಇವರ ದೈವಗಳು. ಈ ಎಲ್ಲ ಮಾಹಿತಿಯನ್ನು ಕರ್ನಾಟಕದ ಎಲ್ಲ ಜಿಲ್ಲೆಗಳ ಗ್ಯಾಸೆಟಿಯರ್‌ಗಳಲ್ಲಿ ತಿಳಿಸಿದ್ದಾರೆ.

ಶ್ರೀನಿವಾಸಾಚಾರಿ ಬಿ. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಎಂ.ಫಿಲ್ ಪದವಿಯ ಬಡಗಿತನದ ದೇಶಿಯ ತಂತ್ರಜ್ಞಾನ ಎಂಬ ಕಿರುಪ್ರಬಂಧವು ಒಟ್ಟು ಒಂಬತ್ತು ಅಧ್ಯಾಯಗಳಿಂದ ಕೂಡಿದೆ. ಕಿರುಪ್ರಬಂಧವು ಬಡಗಿತನಕ್ಕೆ ಸಂಬಂಧಿಸಿದಂತೆ ದೇಸಿಯತೆಯ ಮೂಲಕ ಕೃಷಿ, ಸಾಮಾಜಿಕ ರಚನೆ, ಕೆಲಸದಲ್ಲಿ ಮನೆಯ ಮಕ್ಕಳು ತೊಡಗಿಕೊಳ್ಳುವಿಕೆ, ಅವರ ಮೇಲೆ ಬಂದಿರುವ ಗಾದೆ, ಒಗಟುಗಳು ಮತ್ತು ಜಾನಪದಗಳ ಬಗ್ಗೆ ತಿಳಿಸುತ್ತಾರೆ. ಬಡಗಿಗಳು ಮಾಡುವ ವಸ್ತು ಮತ್ತು ಉಪಕರಣ ಹಾಗೂ ಅವರ ಗುಣವನ್ನು ತುಂಬಾ ಸೊಗಸಾಗಿ ಜನಪದದ ಮೂಲಕ ವಿವರಿಸಿದ್ದಾರೆ. ತ್ರಿಪದಿಗಳಲ್ಲಿ ಬಡಗಿಯ ಸೇವೆ ಸಂಬಂಧ ಹಾಗೂ ಆತನ ಬಗೆಗಿರುವ ಮೆಚ್ಚುಗೆ ಹಾಡಿನ ಮೂಲಕ ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಕಿರುಪ್ರಬಂಧವು ಬಡಗಿತನದ ಬಗ್ಗೆ ಬೆಳಕು ಚೆಲ್ಲುತ್ತದೆ. ಇದರ ಜೊತೆಗೆ ಬಡಿಗೇರ ತಯಾರಿಸುವ ಪೀಠೋಪಕರಣಗಳು, ಕೆಲಸದಿಂದ ಸಿಗುವ ಹಣ ಮತ್ತು ಬೇರೆ ಸಮುದಾಯದವರು ಬಡಗಿ ವೃತ್ತಿಯನ್ನು ಮಾಡತೊಡಗಿದ್ದಾರೆ. ಇದರಿಂದ ಮೂಲ ಬಡಗಿಗಳಿಗೆ ಆಗುವ ತೊಂದರೆಗಳು, ರೈತಾಪಿ ಸಲಕರಣೆಗಳೆಲ್ಲ ಮಾರುಕಟ್ಟೆಯಲ್ಲಿ ಲಭಿಸುವುದರಿಂದ ಇವರಿಗೆ ಆಗುವ ನಷ್ಟ ಮತ್ತು ಬಡಿಗ ಸಮುದಾಯದವರಿಗೆ ಮತ್ತು ಬೇರೆ ಸಮುದಾಯದವರಿಗೆ ಊಟ, ಧಾರ್ಮಿಕ ಸಭೆ ಸಮಾರಂಭಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಸಾವಿನ ಸಂಸ್ಕಾರಗಳಲ್ಲಿ ಅನುಸರಿಸುವ ಸಂಪ್ರದಾಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿಬಹುದಿತ್ತು.

ಶ್ರೀನಿವಾಸಾಚಾರಿ ಬಿ. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ 'ಪಾಂಚಾಳ ಜಾನಪದ' ಎಂಬ ಮಹಾಪ್ರಬಂಧದಲ್ಲಿ ಜಾನಪದರಲ್ಲಿ ಪಾಂಚಾಳರ ಸ್ಥಾನಮಾನ ಕುರಿತಂತೆ ಒಟ್ಟು ಎಂಟು ಅಧ್ಯಾಯಗಳ ಮೂಲಕ ಸಂಶೋಧನೆ ಮಾಡಿದ್ದಾರೆ.

ಪಾಂಚಾಳ ಸಮುದಾಯದ ಮೌಖಿಕ ಇತಿಹಾಸವನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಪಾಂಚಾಳ ಸಮುದಾಯಕ್ಕೆ ಸಂಬಂಧಿಸಿದಂತೆ ಐದು ವೃತ್ತಿಯ ಉಪಕರಣಗಳ ಪಟ್ಟಿಯನ್ನು ನೀಡಿದ್ದಾರೆ. ಸಮುದಾಯದ ಆಚರಣೆಗಳು ಮತ್ತು ನಂಬಿಕೆ ಕುರಿತಂತೆ ಮನುಷ್ಯಕೇಂದ್ರಿತ ಆಚರಣೆ ಮತ್ತು ನಂಬಿಕೆಗಳು, ನಿಸರ್ಗಕೇಂದ್ರಿತ ಆಚರಣೆ ಮತ್ತು ನಂಬಿಕೆಗಳು, ವೃತ್ತಿಕೇಂದ್ರಿತ ಆಚರಣೆ ಮತ್ತು ನಂಬಿಕೆಗಳು ಹಾಗೂ ದೈವಕೇಂದ್ರಿತ ಆಚರಣೆ ಮತ್ತು ನಂಬಿಕೆಗಳೆಂದು ವಿಂಗಡಿಸಿಕೊಂಡು ಸಂಶೋಧನೆ ಕೈಗೊಂಡಿದ್ದಾರೆ. ಪ್ರಾಚೀನ ಕಾಲಕ್ಕೆ ಸಂಬಂಧಿಸಿದಂತೆ ಆಯಾ ಪದ್ಧತಿಯ ಸ್ಥಾನಮಾನವನ್ನು ವಿವರಿಸುತ್ತಾರೆ. ಸಮಾಜದ ಸಮಕಾಲೀನ ಅಸ್ತಿತ್ವ, ನಾಳಿನ ಸಾಧ್ಯತೆಗಳು ಮತ್ತು ದೇಶೀಯ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಾರೆ.

ಮಹಾಪ್ರಬಂಧದಲ್ಲಿ ಆಯತನಕ್ಕೆ ಸಂಬಂಧಿಸಿದಂತೆ ವಿವರಣೆ ನೀಡಿದ್ದಾರೆ. ಪ್ರಾಚೀನ ಕಾಲಕ್ಕೆ ಸಂಬಂಧಿಸಿದ ವಿವರಣೆಯನ್ನು ನೀಡುತ್ತಾರೆ. ಪ್ರಾಚೀನ ಸಂದರ್ಭದಲ್ಲಿ ಆಯದಿಂದ ಬಂದಂತಹ ದವಸ-ಧಾನ್ಯಗಳಿಂದ ಜೀವನ ನಡೆಸುತ್ತಿದ್ದರು. ಆಧುನಿಕ ಸಂದರ್ಭದಲ್ಲಿ ಆಯತನಕ್ಕೆ ಪ್ರಾಶಸ್ತ್ಯ ಇದೆ ಎಂಬೆಲ್ಲಾ ವಿಷಯಗಳನ್ನು ಚರ್ಚಿಸಬಹುದಿತ್ತು.

ಶೇಖರಾಚಾರಿ ಕೆ. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ' ಎಂಬ ಮಹಾಪ್ರಬಂಧದಲ್ಲಿ ಪಾಂಚಾಳರ ಬದುಕು, ಭಾಷೆ ಕುರಿತಂತೆ ಒಟ್ಟು ಆರು ಅಧ್ಯಾಯಗಳ ಮೂಲಕ ಸಂಶೋಧನೆ ಮಾಡಿದ್ದಾರೆ.

ಪಾಂಚಾಳರ ಸಮುದಾಯದ ಆಚರಣೆ, ಸಂಪ್ರದಾಯ, ನಂಬಿಕೆ, ವೃತ್ತಿ, ದೈವ ಇತ್ಯಾದಿ ಅಂಶಗಳನ್ನು ಭಾಷೆಯ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ಪಾಂಚಾಳ ಸಮುದಾಯವು ಪಾರಂಪರಿಕವಾಗಿ ದುಡಿಯುವ ಸಂಸ್ಕೃತಿಯ ಕಲೆ, ಕೌಶಲ್ಯಗಳನ್ನು ವೃತ್ತಿಯ ಅವಿಭಾಜ್ಯ ಅಂಗವಾಗಿಸಿಕೊಂಡಿದೆ. ವೃತ್ತಿಯ ಕಾರಣಕ್ಕಾಗಿ ರೂಪುಗೊಂಡಿರುವ ವಿಶಿಷ್ಟ ಭಾಷಿಕ ವಿವರಗಳನ್ನು ದಾಖಲಿಸಿ ವಿಶ್ಲೇಷಿಸಿದ್ದಾರೆ.

ಪಾಂಚಾಳರ ಮೂಲ ಇತಿಹಾಸವನ್ನು ಕುರಿತು ಮತ್ತು ಅದರಲ್ಲಿ ಶಾಸನಗಳಲ್ಲಿ ಪಾಂಚಾಳರು ಜನಪದ ಕಾವ್ಯಗಳಲ್ಲಿ ಪಾಂಚಾಳರು ಹಾಗೂ ಸಾಹಿತ್ಯ ಕೃತಿಗಳಲ್ಲಿ ಪಾಂಚಾಳರು ಎಂದು ವಿಭಾಗ ಮಾಡಿಕೊಂಡು ಉಲ್ಲೇಖಗಳನ್ನು ತಿಳಿಸಿದ್ದಾರೆ. ಪಾಂಚಾಳರ ಬದುಕು, ಭಾಷೆ ಕುರಿತಾದ್ದಾಗಿವೆ. ಭಾಷಾ ಬಳಕೆ ಸಮಾಜೋಭಾಷಿಕ ಅಧ್ಯಯನ ಎಂದು ವಿಭಾಗ ಮಾಡಿಕೊಂಡಿದ್ದಾರೆ.

ಪಾಂಚಾಳರ ದೈವ, ನಂಬಿಕೆ, ನಿಷೇಧ, ಆಚರಣೆಗಳು, ಅವರ ದೈವಗಳು ಮತ್ತು ಸಾಮಾನ್ಯ ಆಚರಣೆಗಳು ಸಾಮಾಜಿಕ ಹಬ್ಬಗಳು, ವೃತ್ತಿಸಂಬಂಧಿ ಹಬ್ಬ ಆಚರಣೆಗಳು, ನಂಬಿಕೆ ನಿಷೇಧಗಳು ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ಪಾಂಚಾಳ ಸಮುದಾಯದ ಈವರೆಗಿನ ಅಧ್ಯಯನದ ಸಮೀಕ್ಷೆಯಿಂದ ಅವರ ಪಾರಂಪರಿಕ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಸ್ಥೂಲವಾದ ಮಾಹಿತಿ ಸಿಗುತ್ತದೆ. ಊರಿನ ಯಾವುದೇ ಮುಖ್ಯ ಆಚರಣೆಗಳು ಮತ್ತು ಘಟನೆಗಳಲ್ಲಿ ಪಾಂಚಾಳರ ಉಪಸ್ಥಿತಿ ಇದ್ದೇ ಇರುತ್ತದೆ. ಹಿಂದಿನಿಂದಲೂ ಪಾಂಚಾಳರು ಯಾವುದೇ ಬಗೆಯ ಉನ್ನತ ಸ್ಥಾನಮಾನಗಳನ್ನು ಅನುಭವಿಸುತ್ತ ಬಂದಿದ್ದರೂ ಅವು ಸಮಾಜದ ಜೊತೆಗಿರುವ ನಿಕಟ ಸಂಬಂಧವನ್ನು ತಿಳಿಸುವಂತಹುಗಳಾಗಿವೆ.

ರೈತಾಪಿ ಜನಸಮುದಾಯದಿಂದ ಹಿಡಿದು ಎಲ್ಲ ಕುಶಲಕರ್ಮಿ ಸಮುದಾಯಗಳ ಮೇಲೆ ಬೇರೆ ಬೇರೆ ರೀತಿಯ ಪರಿಣಾಮವನ್ನು ಬೀರಿದೆ. ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರುವಂತೆ. ಇಂಥ ಕರಕುಶಲ ಸಮುದಾಯಗಳ ಆರ್ಥಿಕ ಪರಿಸ್ಥಿತಿ ಹಿಂದುಳಿಯುವಿಕೆಗೆ ಕಾರಣವಾಗಿವೆ. ಈ ಮೂಲಕಸುಬನ್ನು ನಂಬಿಕೊಂಡು ಜನಸಮುದಾಯ ತಮ್ಮ ಹೊಟ್ಟೆಪಾಡನ್ನು ನಿಭಾಯಿಸಿಕೊಳ್ಳುವುದು ಪ್ರಸ್ತುತ ಸಂದರ್ಭದಲ್ಲಿ ಸಾಧ್ಯವಾಗುತ್ತಿಲ್ಲ. ಈ ಕೈಗಾರೀಕರಣದಿಂದ ಮೊಟ್ಟಮೊದಲಿಗೆ ಪಾಂಚಾಳರ ಸಾಂಪ್ರದಾಯಿಕ ವೃತ್ತಿ ಸಲಕರಣೆಗಳು ಮೂಲೆಗುಂಪಾದವು. ಪಾಂಚಾಳರ ಹತ್ತಿರ ಬಂದು ಕೆಲಸ ಮಾಡಿಕೊಳ್ಳುತ್ತಿದ್ದ ರೈತಾಪಿ ಸಮುದಾಯಗಳು ಆಧುನಿಕ ಮಾರುಕಟ್ಟೆಯಲ್ಲಿ ದೊರಕುವ ಸಲಕರಣೆಗಳನ್ನು ಖರೀದಿಸಲು ಪ್ರಾರಂಭಿಸಿದರು. ಹೀಗಾಗಿ ಇದರ ಎದುರು ಪೈಪೋಟಿ ನಡೆಸುವುದು ಅಸಾಧ್ಯವಾಗಿದೆ. ಏಕೆಂದರೆ ಸ್ವಂತ ಬಂಡವಾಳ ಹೂಡಿ ಇದನ್ನೇ ಲಾಭದಾಯಿಕ ಉದ್ಯಮವನ್ನಾಗಿ ಮಾಡಿಕೊಳ್ಳಬಹುದಾದ ಸಿರಿವಂತಿಕೆ ಇಲ್ಲದಾಗಿದೆ. ಇಂತಹ ಸಮಸ್ಯೆಗಳಿಂದ ಸಮುದಾಯಗಳಲ್ಲಿ ಅಸಹಾಯಕತೆಯ ವಾತಾವರಣ ಮೂಡತೊಡಗಿದೆ.

ಅಧ್ಯಾಯ ಎರಡು

# ಪಾಂಚಾಳ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆ

ಮಾನವ ಚರಿತ್ರೆಯ ಉಗಮ ಮತ್ತು ವಿಕಾಸದಲ್ಲಿ ಪಾಂಚಾಳರ ಪಾತ್ರ ಅತಿ ಮಹತ್ವದ್ದಾಗಿದೆ. ಮಾನವನು ಆಹಾರ ಸಂಗ್ರಹಣೆ ನೆಲೆಯಿಂದ ಆಹಾರ ಉತ್ಪಾದನೆ ಮತ್ತು ವಿನಿಮಯ ಪ್ರಕ್ರಿಯೆಯಲ್ಲಿ ಪಾಂಚಾಳರ ಪ್ರಮುಖ ಪಾತ್ರವಿದೆ. ಕಬ್ಬಿಣದ ಆವಿಷ್ಕಾರದಿಂದ ಶುರುವಾಗುವಾಗ ಮನುಷ್ಯ ನಾಗರಿಕತೆಯ ಬೆಳವಣಿಗೆಯಲ್ಲಿ ಬಡಗಿ, ಕಮ್ಮಾರ, ಅಕ್ಕಸಾಲಿ, ಕಂಚುಗಾರ, ಶಿಲ್ಪಗಾರಗಳ ಪಾತ್ರ ಮಹತ್ವದ್ದಾಗಿದೆ. ಮಾನವ ಚರಿತ್ರೆಯನ್ನು ಇತಿಹಾಸಕಾರರು ನೇಗಿಲಿನ ಮೂಲಕ ಗುರುತಿಸುತ್ತಾರೆ. ಅಂದರೆ ಕೃಷಿ-ಉತ್ಪಾದನೆ ಚಟುವಟಿಕೆಗಳು ಹೆಚ್ಚಳವಾಗುವುದರಿಂದ ವಿಶೇಷವಾಗಿ ಬಡಗಿ, ಕಮ್ಮಾರರಂತಹ ವೃತ್ತಿಗಳ ಪಾತ್ರ ಪ್ರಮುಖವಾಯಿತು. ತಿಂತಿಣಿ ಮೌನೇಶ್ವರರು ಹೇಳುವಂತೆ

> ಬಡಗಿ ಕಮ್ಮಾರರು ಪೊಡವಿಗಧಿಕರ್ತರು
> ಬಡಿದು ಬತ್ತಿಸ ಆಯುಧವ ಮಾಡಿ
> ಸರ್ವರಿಗೆ ಕೊಡುವರಯ್ಯಾ ಬಸವಣ್ಣ'

ಕ್ರಿಯೆಯ ಜ್ಞಾನ ಮತ್ತು ಇಚ್ಛಾಶಕ್ತಿಯಿಂದಾಗಿ ಬಡಗಿ ಕಮ್ಮಾರರು ಈ ದೃಷ್ಟಿಗೆ ಪ್ರಾರಂಭವಾಗಿದ್ದಾರೆ. ಅಷ್ಟೇ ಅಲ್ಲದೆ, ತಮ್ಮ ಸೃಷ್ಟಿತತ್ವ ಎನ್ನುವ ಕುಲುಮೆ ಮತ್ತು ಅಡಿಗಲ್ಲಿನಲ್ಲಿ ಬಡಿದು ಬತ್ತಿಸ ಆಯುಧಗಳನ್ನು ಮಾಡಿ ಲೋಕದ ಜನರ ಕ್ರಿಯಾಶೀಲ ಹಾಗೂ ಸ್ವಾವಲಂಬಿ ಬದುಕಿಗೆ ಕಾರಣವಾಗಿದ್ದಾರೆ. ಇಲ್ಲಿ ಮುಖ್ಯವಾಗಿ ಪಾಂಚಾಳ ಕುಲದವನಾದ ಮೌನೇಶ್ವರ ಉದ್ಯೋಗ ಮತ್ತು ಅದಕ್ಕೆ ಬೇಕಾದ ಆಯುಧಗಳನ್ನು ಸೃಷ್ಟಿ ಮಾಡಿ ಕೊಡುವ ಮೂಲಕ ದೇಶೀಯ ಔದ್ಯೋಗಿಕ ಕ್ರಾಂತಿಗೆ ಕಾರಣವಾಗುತ್ತಾನೆ. ಅಂದರೆ ಇಡೀ ವಿಶ್ವಕರ್ಮತತ್ವವೇ ಬ್ರಹ್ಮಾಂಡವನ್ನು ಸೃಷ್ಟಿ, ಸ್ಥಿತಿ ಮತ್ತು ಲಯದ ಪರಿಕಲ್ಪನೆಗಳನ್ನು ನೀರು ಮತ್ತು ಬೆಂಕಿಯ ಹಿನ್ನೆಲೆಯಲ್ಲಿ ವೈಜ್ಞಾನಿಕವಾಗಿ ವ್ಯಾಖ್ಯಾನಿಸುತ್ತದೆ. ವಿಶ್ವಕರ್ಮತತ್ವ ಎನ್ನುವುದೇ ಅದೊಂದು ಪ್ರಕೃತಿತತ್ವ ಅದೊಂದು ಶೂನ್ಯತತ್ವ ಬಯಲುತತ್ವ ಹೀಗೆ ಮುಖ್ಯವೆನಿಸಿತ್ತು.

ಪಂಚಕಾರಕರು ಎನಿಸಿಕೊಳ್ಳುವ ಪಾಂಚಾಳರು ಈ ಜಗತ್ತನ್ನು ಲೋಹ, ಕಲ್ಲು, ಕಟ್ಟಿಗೆ ಮುಂತಾದ ಮಾಧ್ಯಮಗಳ ಮೂಲಕ ಮೂರ್ತಿ ಕಲಿಸಿಕೊಟ್ಟರು. ಅಷ್ಟೇ ಅಲ್ಲದೇ ವಿವಿಧ ಬಳಕೆ ಉಪಕರಣಗಳನ್ನು ಮಾಡಿ ಕೊಡುವ ಮೂಲಕ ಮನುಷ್ಯರಲ್ಲಿ ಕ್ರಿಯಾಶೀಲ ಗುಣಗಳನ್ನು ಬೆಳೆಸುತ್ತಾರೆ.

ಹೀಗೆ ಪ್ರಕೃತಿಗೆ ಸಂಸ್ಕೃತಿಯ ರೂಪ ಕೊಡುವ ಮೂಲಕ ಅದನ್ನು ಬದುಕಿನ ತತ್ವವನ್ನಾಗಿಸಿಕೊಂಡರು. ಇಂತಹ ಅದಮ್ಯ ಸೃಷ್ಟಿಶೀಲ ಪ್ರಜ್ಞೆಯಿಂದಾಗಿ ಸಮಾಜದ ಎಲ್ಲ ವರ್ಗಗಳಿಗೂ ಅಗತ್ಯವಾದರು.

**೨.೧. ಧಾರ್ಮಿಕ ನೆಲೆಗಳು**

ಚರಿತ್ರೆಯಲ್ಲಿ ಹಿಂದು ವಿಶ್ವಕರ್ಮರೆಂದು ಸಾಮುದಾಯಿಕವಾಗಿ ಗುರುತಿಸಿಕೊಳ್ಳುತ್ತಿರುವ ಪಾಂಚಾಳರ ಕುರಿತು ಪುರಾಣ ಕಥೆಗಳ ಸಂಕೇತಗಳು ಅಭ್ಯಸನೀಯವಾಗಿವೆ. ಹಿರಿಯ ವಿದ್ವಾಂಸರಾದ ಡಾ.ಶಂಬಾ ಜೋಶಿಯವರು ಶೈವ ಸಂಪ್ರದಾಯಕ್ಕೆ ಸೇರಿದ ಪಾಂಚಾಳರು ಹಿಂದು ವಿಶ್ವಕರ್ಮ ಬ್ರಾಹ್ಮಣರೇ ಎಂದು ಗುರುತಿಸಿಕೊಳ್ಳುತ್ತಾರೆ ಎನ್ನುವ ಮಹತ್ವದ ಮಾತನ್ನು ಹೇಳುತ್ತಾರೆ. ಅವರೇ ಗುರುತಿಸುವಂತೆ ವಿಶ್ವಕರ್ಮನಿಗೆ **ಪ್ರಭಾವಸು** ತಂದೆ, **ಭಾವನ** ಎನ್ನುವ ತಾಯಿ ಇದ್ದರು. ವಿಶ್ವಕರ್ಮ ದೇವತೆಯ ಹೆಸರಿನ ಹಿಂದೆ **'ಭೌವನ'** ಎಂಬ ವಿಶೇಷಣವು ಋಗ್ವೇದಲ್ಲಿ ಇದೆ. ವಿಶ್ವಕರ್ಮನ ಸಹೋದರಿ **'ವಿವಶ್ವತಿ'** ತೈತ್ತೀರಿಯಾ ಸಂಹಿತಿಯ ವಿಶ್ವರೂಪನು ತ್ವಷ್ಟರೂಪನು. ಇವನು ದೇವರ ಪುರೋಹಿತನು. 'ವಿರೋಚನೆ' ಈತನ ತಾಯಿ. ವಿಶ್ವಕರ್ಮ ಸಂಪ್ರದಾಯದ ಬ್ರಾಹ್ಮಣರಲ್ಲಿ ಮಂತ್ರಸಿದ್ಧರು, ಬ್ರಹ್ಮಜ್ಞರು ಆಗಿದ್ದರು. ದೇವಾಸುರರಿಬ್ಬರಿಗೂ ಇವರ ಜ್ಞಾನಶಕ್ತಿಯ ಅವಶ್ಯಕತೆ ಇತ್ತು. ಆದ್ದರಿಂದ ಹಿಂದಿನ ಕಾಲದಲ್ಲಿ ಸಮಾಜ ಸುಧಾರಣೆ ಕಾರ್ಯ ಮಾಡುವಲ್ಲಿ ಪಾಂಚಾಳರು ಮಹತ್ವದ ಪಾತ್ರವಹಿಸಿದರು

ಡಾ.ಶಂಬಾ ಜೋಶಿಯವರು ಗುರುತಿಸುವಂತೆ 'ವಿಶ್ವಕರ್ಮರು ವೇದಪೂರ್ವ ಕಾಲದಲ್ಲಿ ಇದ್ದರು. ಸೈಂಧವ ಸಂಸ್ಕೃತಿಯು ವೇದಪೂರ್ವಕಾಲದ್ದು ಎಂಬುದು ನಿಜವಿದ್ದರೆ ಅಲ್ಲಿಯ ವಾಸ್ತುಶಿಲ್ಪ ಕುಶಲಕಲೆಗಳನ್ನು ಸೃಜಿಸುವ ಈ ವಿಶ್ವಕರ್ಮರು ಈ ದೇಶೀಯರೆ. ಇವರು ಇಂದ್ರ ವಿರೋಧಿಗಳಾಗಿದ್ದರು. ವಿಶ್ವರೂಪ ನಿರ್ಮಾಣ ಶಕ್ತಿಯ ಪ್ರತೀಕವಾದ ವಿಶ್ವರೂಪನು ಸಿದ್ಧಸ್ತರಾದ ಈ ವಿಶ್ವಕರ್ಮ ಸಾಂಪ್ರದಾಯದವರು ಪೂರ್ವಜರು ಆರ್ಯರಿಗಿಂತಲೂ ಮುಂಚೆಗೆಯಿಂದಲೇ ಈ ದೇಶದಲ್ಲಿ ಇದ್ದರು ಎಂಬುದು ಊಹೆಗೆ ಅವಕಾಶ ದೊರೆಯುತ್ತದೆ. ವಿಶ್ವರೂಪನು ಇಂದ್ರದ್ವೇ ಆಗಿದ್ದನು ಎಂಬ ಕಥೆಯಿಂದ ಯಂತ್ರ-ಮಂತ್ರಗಳಲ್ಲಿ ಅಸೂರರ ಪಕ್ಷಪಾತಿ ಆಗಿದ್ದನು ಎಂಬ ಕಥಾಭಾಗವು ಈ ಊಹೆಯನ್ನು ಪುಷ್ಟೀಕರಿಸುತ್ತವೆ.'[೧] ವೇದ ವಾಜ್ಞಯದಲ್ಲಿ ವಿಶ್ವಕರ್ಮ ನಾಮವು ಪ್ರಸಿದ್ಧವಾಗಿದೆ. ಅಲ್ಲಿ ಪ್ರಕಟವಾದ ಅನಂತನಾಮಗಳಲ್ಲಿ ವಿಶ್ವಕರ್ಮನ ನಾಮವೇ ಪ್ರಪ್ರಥಮವಾದದ್ದು. ವೇದಗಳಲ್ಲಿ ವಿವಿಧ ನಾಮಗಳಿಂದ ವಿವಿಧ ರೂಪಗಳಿಂದ ದೇವತೆಗಳು ಸ್ಥಪಿಸಿದ್ದರು. ಆ ಎಲ್ಲ ನಾಮರೂಪಗಳು ವಿಶ್ವಕರ್ಮನನ್ನು ಕುರಿತದ್ದಾಗಿವೆ. ಮಹಾದೇವನಾದ ವಿಶ್ವಕರ್ಮನೆಂದರೆ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗಳು ಆಗುತ್ತವೆ. ಅವನು ಸಕಲ ಜೀವಿಗಳ ಚೇತನ ಸ್ವರೂಪನಾಗಿದ್ದಾನೆ. ಸಕಲರೂಪರ ತಂದೆಯಾಗಿದ್ದಾನೆ ಇತ್ಯಾದಿ ಅವನ ಅನಂತ ಮಹಿಮೆಗಳನ್ನು ವೇದಶಾಸ್ತ್ರಗಳಲ್ಲಿ ತಿಳಿಸಲಾಗಿದೆ.

ವಿಶ್ವಕರ್ಮನಿಂದ ರಚಿತವಾದ ಒಂದು ಸೂತ್ರವು ಋಗ್ವೇದದ ೧೦ನೇ ಮಂಡಲದಲ್ಲಿ ಇದೆ. ವಿಶ್ವಕರ್ಮನು ಸೃಷ್ಟಿಕರ್ತನೆಂದು ಇಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಇವನು ವಿಶ್ವತೋಮುಖಕರನು. ಕಾಲಿಂದ

ಸ್ವರ್ಗವನ್ನು ಕೈಯಿಂದ ಭೂಲೋಕವನ್ನು ನಿರ್ಮಿಸುತ್ತಾನೆ. ಋಗ್ವೇದದ ೧ನೇ ಮತ್ತು ೧೦ನೇ ಮಂಡಲದಲ್ಲಿ ವಿಶ್ವ ನಿರ್ಮಾಣ ಮತ್ತು ಸಂರಕ್ಷಣದ ಏಕಮಯ ಅಧಿಕಾರಿ ಯಾರು ಎಂಬ ವಿವಾದಗಳು ಪ್ರತಿಧ್ವನಿಸಿದಾಗ ವಿಶ್ವಕರ್ಮನೆ ಇವುಗಳ ಏಕಮಯ ಅಧಿಕಾರಿ ಎನ್ನುವ ತೀರ್ಮಾನವಾಗುತ್ತದೆ. ವಿಶ್ವಕರ್ಮ ಹೆಸರಿನ ಪ್ರಜಾಪತಿ ಬ್ರಹ್ಮಾಂಡದ ಪ್ರಜಾಪತಿ. ಹೀಗೆ ಇಂತಹ ಹೆಸರುಗಳು ಪ್ರಾಚೀನ ಕಾಲದ ಪುರಾಣ ಕಥೆಗಳಲ್ಲಿ ಉಲ್ಲೇಖಗೊಂಡಿವೆ. ಯಜುರ್ವೇದದಲ್ಲಿ ಬ್ರಹ್ಮಾಂಡ ಮಧ್ಯದಲ್ಲಿ ಮೊದಲನೆಯವನಾಗಿ ವಿಶ್ವಕರ್ಮನು ಉತ್ಪನ್ನನಾದನು. ಇಂತಹ ಪ್ರಥಮ ದೇವನಾದ ವಿಶ್ವಕರ್ಮನನ್ನು ಸೃಷ್ಟಿಕರ್ತನೆಂದು, ಚತುರ್ಮುಖನೆಂದು ಪುರಾಣೋಕ್ತಿಗಳು ಸಾರಿ ಹೇಳುತ್ತವೆ. ವಾಯುಪುರಾಣದಲ್ಲಿ ವಟವೃಕ್ಷದ ಕೆಳಗೆ ದಿವ್ಯ ಸಿಂಹಾಸನಾಸೀನರಾಗಿ ಮಹರ್ಷಿಗಳಿಂದ ಸೇವೆಯನ್ನು ಹೊಂದುತ್ತಾ ದೇವತೆಗಳಿಂದ ಉಪಾಸಿತನಾಗಿ ಐದು ಮುಖಗಳನ್ನು, ಹತ್ತು ಭುಜಗಳನ್ನು ಹೊಂದಿ ಲಕ್ಷ್ಮೀ ಸರಸ್ವತಿಯರಿಂದ ತೊಳೆಯಲ್ಪಟ್ಟ ಪಾದದ್ವಯವುಳ್ಳವನಾಗಿ ಎದೆಯಲ್ಲಿ ಬ್ರಹ್ಮ ವಿದ್ಯಾಧಿದೇವತೆಯಾದ ಉಮೆಯನ್ನು ಧರಿಸಿದವನಾಗಿ ರತ್ನಾಹಾರ ಕೇಯೂರ, ಕಟಕ ಕುಂಡಲಾದಿಗಳಿಂದ ಅಲಂಕರಿಸಲ್ಪಟ್ಟು ಪ್ರಕಾಶಿಸುವವನಾಗಿ ಭಸ್ಮಧಾರಣೆಯನ್ನು ಮಾಡಿಕೊಂಡವನ್ನಾಗಿ ದೇವತೆಗಳಿಗೆ ಒಡೆಯನಾಗಿ ಭಕ್ತರಿಗೆ ವರಪ್ರಧಾನ ಮಾಡುವವನಾಗಿ ಟಂಕಾದ್ಯಾಯುಧಗಳನ್ನು ಧರಿಸಿದವನಾಗಿದ್ದರು.

ಯಜುರ್ವೇದದಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳುಳ್ಳವನು ವಿಶ್ವಕರ್ಮ. ಇಂತಹ ವಿಶ್ವಕರ್ಮನು ತನಗೆ ಸತ್ಯ ಸಂಕಲ್ಪಾದಿಗಳೇ ಸಾಧನಗಳಾದ ಕಾರಣ ಮನಸಂಕಲ್ಪ ಮಾತ್ರದಿಂದಲೇ ಪ್ರಪಂಚವನ್ನು ಸಂಹರಿಸಿದನು. ಆ ಪ್ರಪಂಚವನ್ನು ಪುನಃ ಹೊಸದಾಗಿ ಸೃಷ್ಟಿಸತಕ್ಕವನು, ಪೋಷಿಸತಕ್ಕವನು ಆಗಿ ಎಲ್ಲಕ್ಕೂ ಅಧಿಕನಾಗಿ ಸರ್ವೋತ್ಕೃಷ್ಟನಾದವನು ಸರ್ವಜ್ಞನಾದವನು.

ಯಜುರ್ವೇದದಲ್ಲಿ ಎಲ್ಲೆಲ್ಲಿಯೂ ಕಣ್ಣುಗಳುಳ್ಳವನಾಗಿ ಮುಖವುಳ್ಳವನಾಗಿ ಎಲ್ಲೆಲ್ಲಿಯೂ ಬಾಹುಗಳುಳ್ಳವನಾಗಿ ಪಾದಗಳುಳ್ಳವನಾಗಿ ಸ್ವಯಂ ಪ್ರಕಾಶನಾಗಿ ಅದ್ವಿತೀಯನಾಗಿಯೂ ಇರುವ ಆ ವಿಶ್ವಕರ್ಮನು ಸರ್ವ ವ್ಯಾಪಕನಾಗಿದ್ದಾನೆ. ಶಿವಗೀತೆಯಲ್ಲಿ ವೇದ ಮತ್ತು ಉಪನಿಷತ್ತಿನಲ್ಲಿ ಸ್ತುತಿಗೊಂಡ ವಿಶ್ವಕರ್ಮ ರೂಪವೇ ವರ್ಣಿತವಾಗಿ ವಿಶ್ವತೋಮುಖ ವಿಶ್ವತೋಭಾವ ವೃತ ವಿಶ್ವತಸ್ಪಾತ್ ಎಂದು ವರ್ಣಿಸಲ್ಪಟ್ಟಿದೆ.

ಸ್ಕಂದ ಪುರಾಣದಲ್ಲಿ ಪರಬ್ರಹ್ಮವೇ ವಿಶ್ವಕರ್ಮ ಸ್ವರೂಪ ವಿಶ್ವಕರ್ಮನೇ ಪರಶಿವನೆಂದು ವಿವರಿಸಲಾಗಿದೆ. ಹೀಗೆ ಶಿವಾತ್ಮಕವಾದ ಈ ವಿಶ್ವಕರ್ಮ ಶಬ್ದವನ್ನು ಸಾಯಣಾಚಾರ್ಯರು ತಮ್ಮ ವೇದ ಭಾಷ್ಯದಲ್ಲಿ ಯೋ ವಿಶ್ವಕರ್ಮ ಪರಮೇಶ್ವರ ಎಂಬ ಸಮುಚಿತವಾದ ಅರ್ಥವನ್ನು ಬರೆದದ್ದು ಸಾರ್ಥಕವೇ ಆಗಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ 'ತಮಿಶ್ವರಾಣಾಂಪರಮಂ ಮಹೇಶ್ವರಾಮ' ಎಂದು ಈಶ್ವರರಲ್ಲಿ ಶ್ರೇಷ್ಠನಾದ ಮಹೇಶ್ವರನಾಗಿದ್ದಾನೆ ಎಂಬುದಾಗಿ ಆ ಮಹಿಮನ ಈಶ್ವರತ್ವನ್ನು ಚೆನ್ನಾಗಿ ತಿಳಿಸಲಾಗಿದೆ. ಶ್ವೇತಾಶ್ವತರೋಪನಿಷತ್ತಿಗಳನ್ನು ಶಂಕರಾಚಾರ್ಯರು ಭಾಷ್ಯ ಬರೆದಿದ್ದಾರೆ. ಅವರು ತಮ್ಮ ವೇದಾಂತ ಶಾಸ್ತ್ರಗಳಲ್ಲೂ ಬ್ರಹ್ಮಸೂತ್ರ ಭಾಷೆದಲ್ಲೂ ವಿಷ್ಣು ಸಹಸ್ರನಾಮ ಭಾಷ್ಯದಲ್ಲೂ

ಶ್ವೇತಾಶ್ವತರೋಪನಿಷದ್ವಾಕ್ಯಗಳನ್ನು ಬಹಳವಾಗಿ ಬಳಸಿ ಪ್ರಮಾಣೀಕರಿಸಿದ್ದಾರೆ. ಶ್ವೇತಾಶ್ವತರೋಪನಿಷತ್ ವಿಶ್ವಕರ್ಮನು ಸೃಷ್ಟಿಯಾದ ಸಕಲ ವ್ಯಾಪಾರವನ್ನು ನಡೆಸುವವನು ಸರ್ವವ್ಯಾಪಕನು ಯಾವಾಗಲೂ ಜನರ ಉದರದಲ್ಲಿ ನೆಲೆಸಿರುವನು, ನೀರಿರುವ ಸ್ಥಳಗಳಲ್ಲಿ ಇರುವವನು ಹುಟ್ಟು ಸಾವುಗಳಿಗೆ ಕಾರಣ ಸಂಸಾರವನ್ನು ಪಾರ್ಶ್ವವನ್ನು ಕತ್ತರಿಸಲು ಸಾಮರ್ಥ್ಯವಾಗಿರುವ ಬುದ್ಧಿಯಿಂದಲೂ ಮನಸ್ಸಿನಿಂದಲೂ ಪ್ರಕಾಶಿಸುವಂತನಾಗಿದ್ದಾನೆ. ಸೂರ್ಯ ಪ್ರಕಾಶಕ್ಕಿಂತಲೂ ವಿಶ್ವಕರ್ಮನ ಸ್ವರೂಪವು ಶ್ರೇಷ್ಠವಾದುದು. ಪುರಾತನವಾದ ಪ್ರಜ್ಞಾಶಕ್ತಿಯು ಅವನಿಂದಲೇ ಹುಟ್ಟಿತು.

ಒಬ್ಬನೇ ದೇವನಾದ ವಿಶ್ವಕರ್ಮನು ಸಕಲ ಜೀವಿಗಳಲ್ಲೂ ರಹಸ್ಯವಾಗಿ ನೆಲೆಸಿದ್ದಾನೆ. ಸರ್ವ ವ್ಯಾಪಕನಾದ ಅವನು ಸರ್ವಪ್ರಾಣಿಗಳಲ್ಲಿಯೂ ಅಂತರಾತ್ಮವಾಗಿದ್ದಾನೆ. ಹೀಗೆ ಜೀವಿಗಳ ಎಲ್ಲ ಕಾರ್ಯಗಳಿಗೂ ವಿಶ್ವಕರ್ಮನು ಸಾಕ್ಷಿಯಾಗಿದ್ದನು. ಯಾವ ಕರ್ಮಗಳಿಗೂ ಅಂಜದೆ ಸರ್ವ ಸ್ವತಂತ್ರದವನಾಗಿದ್ದಾನೆ.

ಮೂಲಸ್ತಂಭ ಪುರಾಣದಲ್ಲಿ ಸಮಸ್ತವನ್ನು ನಿರ್ಮಿಸುವವನು ವಿಶ್ವಕರ್ಮನು ಜಗತ್ತಿಗೆಲ್ಲ ಗುರುವಾಗಿದ್ದಾನೆ ಎಂದು ಹೇಳಲಾಗಿದೆ. ಸ್ಕಂದಪುರಾಣದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎನ್ನುವ ಪುರುಷಾರ್ಥಗಳಲ್ಲಿ ಮತ್ತು ವೇದಗಳಲ್ಲಿ ಆಚಾರ್ಯತ್ವವನ್ನು ವಹಿಸುವ ಮೂಲಕ ಮಹಾಮಹಿಮನಾದ ವಿಶ್ವಕರ್ಮನೆ ಜಗತ್ತಿಗೆ ಗುರುವೆಂದು ವಿಶ್ಲೇಷಿಸಲಾಗಿದೆ. ಈ ಅರ್ಥದಲ್ಲಿ ವಿಶ್ವಕರ್ಮನೆ ಜಗತ್ತಿಗೆ ಪ್ರಥಮಾಪದೇಶಕನಾಗಿ ಗುರುವಾಗಿದ್ದಾನೆ ಎಂದು ಸ್ಪಷ್ಟಪಡಿಸಲಾಗಿದೆ. ಇಂತಹ ವಿಶ್ವಕರ್ಮನಿಂದಲೇ ಪಂಚಕಾರಕರು ಪಂಚವೃತ್ತಿಗಳು, ಪಾಂಚಾಳರು ಮುಂತಾದ ಕರ್ಮ ಮತ್ತು ಜ್ಞಾನ ಪ್ರಜ್ಞಾನವಾದ ಶಿಲ್ಪಿಗಳು ಉದ್ಭವವಾಗುತ್ತಾರೆ.

ವಿಶ್ವಕರ್ಮನ ಪರ್ಯಾಯನಾಮವಾದ ತ್ವಷ್ಟ, ಶಿಲ್ಪಿ, ರಥಕಾರ, ಸ್ಥಪತಿಗಳು, ಬ್ರಹ್ಮಕರ್ಮ ನಿರತರವಾಗಿರುವ ವಿಷಯಗಳು ವೇದದಲ್ಲಿ ಉಕ್ತವಾಗಿದ್ದರು. ಅದಾವುದನ್ನು ಕಣ್ಣೆತ್ತಿ ನೋಡುವ ಅಸುಯಾಂದಾರಾದ ಕುಸ್ತಿಪಂಡಿತರು, ತ್ವಷ್ಟಿವೇ ಮೊದಲಾದ ಶಿಲ್ಪಬ್ರಾಹ್ಮಣರನ್ನು ಶೂದ್ರರೆಂದು ಕರೆಯುವ ರೂಢಿಯನ್ನು ತಮ್ಮ ಸಾಹಿತ್ಯದಲ್ಲಿ ತಂದಿರುವನು.[೨]

ಯಜುರ್ವೇದದಲ್ಲಿ 'ವಿಶ್ವಕರ್ಮನಸ್ಸಮ ವರ್ತತ್ತಾವಿತಸ್ತತ್ವಷ್ಟಾ ವಿಧದ ದೃಪಮೇಲೆ' ಎಂದರೆ ಸರ್ವ ಪ್ರಪಂಚ ವ್ಯಾಪಾರಿಯುತವಾದ ವಿಶ್ವಕರ್ಮನ ದೇಶೆಯಿಂದ ಹುಟ್ಟಿದ ತ್ವಷ್ಟದೇವನು ವಿಶ್ವಕರ್ಮ ದೇವನು ಸ್ವರೂಪವನ್ನು ಪಡೆದವರಾಗಿದ್ದಾರೆ. ತ್ವಷ್ಟದೇವ ವಿಶ್ವಕರ್ಮ ದೇವನ ಮಗನಾಗಿದ್ದನು. ತ್ವಷ್ಟ(ಪ್ರಜಾಪತಿ-ವಿಶ್ವಕರ್ಮ) ದೇವತೆಗಳ ಶಿಲ್ಪಿ ಎಂದು ಅಥರ್ವೇದದಲ್ಲಿ ಹೇಳಿದೆ[೩].

ಗೋತ್ರ ಪ್ರವದರ್ಪದಲ್ಲಿ ಭೃಗು ಮತ್ತು ಅಂಗಿರಸ ಋಷಿಗಳ ಅಂಶದ ಮೂಲ ಪುರುಷನನ್ನಾಗಿ ತ್ವಷ್ಟನನ್ನು ಚಿತ್ರಿಸಲಾಗಿದೆ. ತ್ವಷ್ಟನ ಪುತ್ರನಾದ ವಿಶ್ವರೂಪನು ದೇವತೆಗಳಿಗೆ ಪುರೋಹಿತನಾದನು. ಇಂತಹ ವಿಶ್ವರೂಪನ ತಂದೆಯಾದ ತ್ವಷ್ಟನು ವಿಶ್ವಬ್ರಾಹ್ಮಣರಾಗಿ ಶ್ರೇಷ್ಠನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಶ್ರೀಮದ್ ಭಾಗವತದಲ್ಲಿ ದ್ವಾರಕಾಪಟ್ಟಣದ ಶಿಲ್ಪ ನೈಪುಣ್ಯ ವಿಜ್ಞಾನದ ತಂತ್ರಜ್ಞಾನನಾಗಿ ತ್ವಷ್ಟನನ್ನು

ವರ್ಣಿಸಲಾಗಿದೆ. ತ್ವಷ-ದೀಪ್ತಾ ಎಂಬ ಧಾತುವಿನಿಂದ ಕರ್ತೃದಲ್ಲಿ ತೃಚ್ ಪ್ರತ್ಯಯಾಂತವಾಗಿ ಅಂದರೆ ಋಕಾರಾಯಿತವಾಗಿ ತ್ವಷ್ಟ ಶಬ್ದವು ನಿಷ್ಪನ್ನವಾಗಿರುತ್ತದೆ. ತ್ವಷ್ಟ ಎಂದರೆ ಪ್ರಕಾಶಿಸುವವನು ಎಂದರ್ಥ.

ಶಿಲ್ಪ ಎಂದರೆ ತಂತ್ರಜ್ಞಾನ ಮತ್ತು ವಿಜ್ಞಾನ ಎಂದು ಋಗ್ವೇದವು ಹೇಳುತ್ತದೆ. 'ಸುರುಪಕೃತ್ನು ಮಾತೆಯೇ ಸುದುಘಾವಿವ ಗೊಮ ಹೇ। ಜುಹೋ ಮಸಿ ದ್ಯವಿದ್ಯವಿ' ಅಂದರೆ ಸುಂದರ ರೂಪವನ್ನು ನಿರ್ಮಿಸುವನು ಎಂದರ್ಥ. ತೈತ್ತಿರೀಯ ಬ್ರಾಹ್ಮಣದಲ್ಲಿ ಪ್ರಜಾಪತಿಯಾದ ಶಿಲ್ಪಿಯು ಯಾವ ಶಿಲ್ಪ ಕೌಶಲ್ಯಗಳಿಂದ ವಿಸ್ತಾರವಾದ ಈ ಭೂಮಿಯನ್ನು ಗಟ್ಟಿಯಾಗಿ ನಿಲ್ಲುವಂತೆ ಮಾಡಿದನೋ ಹಾಗೆ ತನ್ನ ಶಿಲ್ಪ ಕೌಶಲ್ಯದಿಂದ ಸುತ್ತಲೂ ಸೂರ್ಯ, ಚಂದ್ರ, ನಕ್ಷತ್ರ ಮೊದಲಾದವುಗಳಿಂದ ಸುಂದರ ರೂಪವುಳ್ಳನನ್ನಾಗಿ ಮಾಡಿದನು. ಯಾವ ಶಿಲ್ಪ ಕೌಶಲ್ಯಗಳಿಂದ ಮಾತಾಡುತ್ತಿರುವ ಅನೇಕ ವಸ್ತುಗಳನ್ನಾಗಿ ಮಾಡಿದನೋ ಅಂತಹ ಶಿಲ್ಪಿ ಅವನೇ ವಿಶ್ವಕರ್ಮ ಪ್ರಜಾಪತಿಯಾಗಿದ್ದನು.

ವೇದೋಪನಿಷತ್ತುಗಳಲ್ಲಿ ಕಂಡುಬರುವ ಕ್ಷಣ ಮಾತ್ರದಲ್ಲಿ ಯಾವ ವಸ್ತುವನ್ನಾದವರೂ ಮನಸ್ಸಿನ ಸಂಕಲ್ಪ ಮಾತ್ರದಿಂದಲೇ ಅದ್ಭುತ ಶಿಲ್ಪಕಲಾ ಕೃತಿಗಳನ್ನು ನಿರ್ಮಿಸುವ ವಿಶ್ವಕರ್ಮನೇ ಶಿಲ್ಪಶಾಸ್ತ್ರದ ಆದ್ಯ ಪ್ರವರ್ತಕನಾಗಿದ್ದನು. ವಿಶ್ವಕರ್ಮನೇ ಕಶ್ಯಪ ಪ್ರಜಾಪತಿಯ ರೂಪದಿಂದ ಬ್ರಾಹ್ಮಣ ಗ್ರಂಥದಲ್ಲಿ ಕಾಣುತ್ತಿರುವನು. ಕಶ್ಯಪಾದಿ ಅನೇಕ ಮಹರ್ಷಿಗಳ ಹೆಸರಿನಿಂದ ಉಪಲಭ್ಯವಾಗಿರುವ ನೂರಾರು ಶಿಲ್ಪ ಗ್ರಂಥಗಳಲ್ಲಿ ಈಗ ವೇದಗಳಲ್ಲಿ ಉಲ್ಲೇಖವಾಗಿರುವ ಮಹತ್ವದ ಸಂಗತಿಗಳು ಕಾಣುವುದಿಲ್ಲ. ಈ ದೊರೆತಿರುವ ಕಾಶ್ಯಪ ಸಂಹಿತ, ಕಾಶ್ಯಪ ಶಿಲ್ಪಯುಕ್ತ ಕಲ್ಪದ್ರುಮ, ಯುಕ್ತಿ ಕಲ್ಪತರು, ಮಯಮತ, ಮಾನಸಾರ, ಮುಂತಾದ ಶಿಲ್ಪಗ್ರಂಥಗಳಲ್ಲಿ ಸಾಮಾನ್ಯವಾಗಿ ಶಿಲ್ಪ ಶಿಲ್ಪಿಯ ಲಕ್ಷಣ ಮಾನಸಾಧನ ಭೂಮಿ ಲಕ್ಷಣ, ಗ್ರಾಮ ಲಕ್ಷಣ, ನಗರ ಪಟ್ಟಣ, ಉದ್ಯಾನ ದೇವಾಲಯ, ಸ್ತಂಭ, ಪ್ರಸಾದ, ಆಯಾ, ಶಿಲಾ, ಮೂರ್ತಿಲಿಂಗ, ವಾಹನ, ರಥ, ಶಸ್ತ್ರಾಸ್ತ್ರ ಇತ್ಯಾದಿ ವಿಷಯಗಳನ್ನು ಅಷ್ಟು ವಿವರಿಸುತ್ತವೆ. ಈ ಗ್ರಂಥಗಳು ಆಗಮಗಳ ಪ್ರಭಾವಕ್ಕೆ ಒಳಗಾಗಿರುವ ರಚನೆಯಾಗಿರುವಂಥವು.

ಕಾಮಿಕಾದಿವಾತುಲಾಂತವಾಗಿ ೨೮ ಶಿವಾಗಮನಗಳು ಪಾಂಚಾತ್ರ ವೈಖಾನನವೆಂಬ ವೈಷ್ಣವ ಆಗಮಗಳಲ್ಲಿಯೂ ಶಾತೇ ಆಗಮಗಳಲ್ಲೂ ಜೈನ ಮತ್ತು ಬೌದ್ಧ ಆಗಮಗಳಲ್ಲೂ ಶಿಲ್ಪದ ಪಾತ್ರ ಅಸಾಧಾರಣವಾದುದು.

ಸಕಲ ಆಸ್ತಿಕ ಮತಗಳಿಗೂ ಆದಿಷ್ಠಾನ ಭೂತವಾಗಿದ್ದು ಆಯಾ ಮತಗಳಿಗೆ ಬೇಕಾದ ಉಪಸಾನ ಮೂರ್ತಿಗಳನ್ನು ರೂಪಿಸಿಕೊಟ್ಟು ವಿವಿಧ ಮತಗಳು ಅವರವರ ಮಾರ್ಗದಿಂದಲೇ ತಮ್ಮ ತಮ್ಮ ವಸ್ತುಗಳು ಚಿಂತಿಸಿ ಭಗವಂತನ ಸಾಕ್ಷ್ಯಾತ್ಕಾರ ಮಾಡಿಕೊಳ್ಳಲು ಆಶ್ರಯವನ್ನು ನೀಡಿ ಶಿಲ್ಪವು ಕಲ್ಪತರುವಾಗಿದೆ. ಭರತಖಂಡದ ನಾನಾ ಮೂಲೆಗಳಲ್ಲಿ ಕಂಗೊಳಿಸುತ್ತಿರುವ ಗುಡಿಗೋಪುರಗಳು ಸ್ತೂಪಗಳು, ಬಸದಿಗಳು, ಸೌಧಗಳು, ಇತ್ಯಾದಿಗಳು ಎಲ್ಲವೂ ಇಂತಹ ಅದ್ಭುತ ಶಿಲ್ಪ ಸ್ಮಾರಕಗಳಾಗಿವೆ. ಈ ಅರ್ಥದಲ್ಲಿ ಬೃಹತ್ ಸಂಹಿತೆಯು (ವರಾಹಮಿಹಿರ ೬ನೇ ಶತಮಾನ) ಶಿಲ್ಪವು ಕರ್ಮ ಮತ್ತು ಜ್ಞಾನ ಖಂಡಗಳಿಂದ ಕೂಡಿದ್ದು ಮಾನವನ ಶ್ರೇಯೋಭಿವೃದ್ಧಿಗಾಗಿ ಶ್ರೇಷ್ಠವಾದ ಮಾರ್ಗವನ್ನು

ತೋರಿಸಿಕೊಡುತ್ತದೆ. ಜ್ಞಾನಮಾರ್ಗದಲ್ಲಿ ಶಿಲ್ಪವು ತನ್ನ ಬೆಳಕನ್ನು ಚೆಲ್ಲಿ ಸಾಧಕನನ್ನು ಜೀವನ ಮುಕ್ತನನ್ನಾಗಿ ಮಾಡಿ ಬ್ರಹ್ಮಾನಂದ ಸುಖವನ್ನು ಹೊಂದಲು ಪ್ರೇರಣೆಯಾಗಿದೆ.

ಶಿಲ್ಪ ಶಬ್ದವು ಶೀಲ-ಸಮಾದೌ ಎಂಬ ಧಾತುವಿನಿಂದ ಹುಟ್ಟಿದೆ. 'ಶೀಲಂಸ್ವಭಾವೇ ಸದ್ವೃತ್ತೇ' ಶೀಲವೆಂದರೆ ಸಮಾಧಿ ಎಂದರ್ಥ. ಶೀಲವೆಂದರೆ ಒಳ್ಳೆಯ ಸ್ವಭಾವ, ಒಳ್ಳೆಯ ಆಚಾರ ಎಂದರ್ಥ. ಹೀಗೆ ಜ್ಞಾನ ಮತ್ತು ವಿಜ್ಞಾನಗಳಿಂದ ಮಣ್ಣು, ಕಲ್ಲು, ಚಿನ್ನ ವ್ಯತ್ಯಾಸಗಳನ್ನು ನೋಡದೇ ಒಂದೇ ಸಮನಾಗಿ ಭಾವಿಸಿದ ಸಾಧಕನನ್ನು ಶಿಲ್ಪಿ ಎಂದು ಭಗವದ್ಗೀತೆಯಲ್ಲಿ ಕರೆಯಲಾಗಿದೆ.

ರಥಕಾರರು ಎಂದರೆ ರಥಂ ಕರೋತಿತಿ ರಥಕಾಃ ರಥವನ್ನು ನಿರ್ಮಿಸುವವನು. ರಥಕಾರ ಕಠೋಪನಿಷತ್ತಿನಲ್ಲಿ 'ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವತ ಬುದ್ಧಿಸ್ತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಮೇವಚ, ಆತ್ಮನನ್ನು ರಥಕಾರನ್ನಾಗಿ ಶರೀರವನ್ನು ರಥವನ್ನಾಗಿ ಬುದ್ಧಿಯನ್ನು ಸಾರಥಿಯನ್ನಾಗಿ ಮನಸ್ಸನ್ನು ಕಡಿವಾಣವಾಗಿ ತಿಳಿ ಎಂಬ ಈ ಉಪನಿಷತ್ತಿನ ವಾಕ್ಯದಂತೆ ಶರೀರವೇ ರಥವಾಗಿದೆ. ಆತ್ಮನೇ ರಥಿಕನಾಗಿದ್ದಾನೆ. ಈ ಶರೀರ ರಥಕಾರನು ಪರಮಾತ್ಮನಾದ ವಿಶ್ವಕರ್ಮನೇ ಆಗಿದ್ದಾನೆ. ಅವನು ಸರ್ವ ದೇವರ ಸ್ವರೂಪವಾಗಿ, ಮಂಗಳವಾಗಿ ಇರುವ ಈ ದಿವ್ಯ ರಥವು ಪ್ರಪಂಚದ ಕ್ಷೇಮಕ್ಕಾಗಿ ನಿರ್ಮಿಸಿದ್ದಾನೆ. ರಥದ ಬಲ ಭಾಗದ ಚಕ್ರವನ್ನು ಸೂರ್ಯನಾಗಿ ಎಡಭಾಗದ ಚಕ್ರವನ್ನು ಚಂದ್ರನಾಗಿ ರಚಿಸಿದ ಕಾರಣ ಸರ್ವಪ್ರಪಂಚದ ಸ್ವರೂಪನಾದ ವಿಶ್ವಕರ್ಮನೇ ದಿವ್ಯರಥಕಾರನಾಗಿದ್ದಾನೆ.

ಸ್ಥಪತಿಃ ಸ್ಥಪತಿಯು ತಿಷ್ಠಂತ್ಯಸ್ಮಿನ್ನರ್ಥಾಃ ಇತಿಸ್ಥಃ ಸ್ಥಶ್ಚಾಸೌಪತಿಶ್ಚ ಸ್ಥಪತಿಃ ಎಂದು ರೂಪನಿಷ್ಪತ್ತಿ ಅರ್ಥಗಳು(ಪ್ರಯೋಜನಗಳು) ಇವನಲ್ಲಿದೆ. ಆದ್ದರಿಂದ 'ಸ್ಥಃ' ಎಂದು ರೂಪವಾಗಿವೆ. ಅರ್ಥರೂಪನು ಒಡೆಯನು ಆಗಿದ್ದಾನೆ. ಆದ್ದರಿಂದ ಸ್ಥಪತಿಃ ಎಂದು ರೂಪವಾಗಿದೆ.

'ನಾಮಲಿಂಗಾನುಶಾಸನದಲ್ಲಿ ಸಗೀಷ್ಪತೀಷ್ಟ್ಯಾಸ್ಥಪತಿ' ಬೃಹಸ್ಪತಿಯಾಗವನ್ನು ಮಾಡುವವನು ಸ್ಥಪತಿ ಯಜುರಾರಣ್ಯಕದಲ್ಲಿ 'ವಾಚಸ್ಪುತಿ ವಿಶ್ವಕರ್ಮಬುತ' ಅಂದರೆ ವಾಚ್ಯಸ್ಪತಿ ಬೃಹಸ್ಪತಿ ಎಂದರ್ಥ. ಬೃಹಸ್ಪತಿ' ಎಂದರೆ ವಿಶ್ವಕರ್ಮ ಎಂದರ್ಥ ಬೃಹಸ್ಪತಿ ಯಾಗವನ್ನು ಮಾಡುವನು ಸ್ಥಪತಿ ಎಂದು ಕರೆಯಿಸಿಕೊಳ್ಳುತ್ತಾರೆ. ಸ್ಥಪತಿ ಎಂದರೆ ಕರ್ತೃ ಪ್ರಯೋಜಿತ ಎಂದರ್ಥ.

**ಸ್ಥಪತಿ ವಿಶ್ವಕರ್ಮ ಬ್ರಾಹ್ಮಣ**

ವೇದಾದಿಶಾಸ್ತ್ರ ಪುರಾಣ ಪ್ರಮಾಣಗಳನ್ನು ಅಲೋಕಿಸಿದಾಗ ವಿಶ್ವಕರ್ಮನು ಸರ್ವಾಂರ್ಯಾಮಿ ಯಾಗಿದ್ದು ಆತನೇ ಪರಮಾತ್ಮನಾಗಿದ್ದಾನೆ. ಸರ್ವವು ಸಕಲವು ಅವನಿಂದಲೇ ನಿರ್ಮಾಣವಾಗಿವೆ ಮತ್ತು ಸಂರಕ್ಷಿಸಲ್ಪಟ್ಟಿದೆ. ಅವನ ವಂಶಜರಾದ ತ್ವಷ್ಟ ಶಿಲ್ಪಿ, ರಥಾಕಾರ, ಸ್ಥಪತಿಗಳು ಸರ್ವೋತ್ಕೃಷ್ಟರಾದ ವಿಶ್ವಕರ್ಮ ಬ್ರಾಹ್ಮಣರಾಗಿದ್ದಾರೆ.

ಎಲ್ಲಿ ಕರ್ಮವಿದೆಯೋ ಅಲ್ಲಿ ವಿಶ್ವಕರ್ಮನಿರುತ್ತಾನೆ. ವಿಶ್ವಕರ್ಮನಿಲ್ಲದ ಪ್ರಪಂಚವಿರಲು ಸಾಧ್ಯವಿಲ್ಲ. ಅದು ಕಾಣಿಸುವುದಿಲ್ಲ ಮತ್ತು ಕೇಳಿಸುವುದಿಲ್ಲ. ಹೀಗಾಗಿ ವಿಶ್ವಕರ್ಮ ಪ್ರಕಟಿಸದಿದ್ದರೆ ಎಲ್ಲವೂ

ನಿರಾಕಾರ. ಈ ಸ್ವಯಂಬು ವಿಶ್ವಕರ್ಮನೇ ಅಷ್ಟ ವಸ್ತುಗಳನ್ನು ಸೃಷ್ಟಿಸಿ ಪೃಥ್ವಿಯಲ್ಲಿಯೂ ಏಕಾದಶ ರುದ್ರರನ್ನು ಸೃಷ್ಟಿಸಿ ಅಂತಹ ದ್ವಾದಶರನ್ನು ಸೃಷ್ಟಿಸಿ ದ್ವಿಲೋಕದಲ್ಲಿಯೂ ವಿಶ್ವದೇವತೆಗಳನ್ನು ಸೃಷ್ಟಿಸಿ ದಿಗ್‌ರಕ್ಷಕನಾಗಿಯೂ ಸ್ಥಾಪಿತನಾಗಿದ್ದಾನೆ.

ಈ ಎಲ್ಲಾ ಸೂತ್ರಗಳ ಪ್ರಕಾರ ಸ್ವಯಂ ವಿಶ್ವಕರ್ಮನು ಸಮಸ್ತ ಚರಾಚರಾದಿ ಪ್ರಪಂಚದ ಪರಮಾತ್ಮರ ಶಕ್ತಿಯಾಗಿದ್ದಾನೆ. ಚೈತನ್ಯನಾಗಿದ್ದಾನೆ. ವಿಶ್ವದ ಸಮಸ್ತ ಕರ್ಮದ ಕರ್ತೃ ಮತ್ತು ಚಾತೃ ವಿಶ್ವಕರ್ಮನೆಂದೇ ಸ್ತುತಿಸಲಾಗಿದೆ. ಈ ಅರ್ಥದಲ್ಲಿ ವಿಶ್ವಕರ್ಮ ಬ್ರಾಹ್ಮಣರ ಮೂಲ ಪುರುಷ ಸ್ವಯಂ ವಿಶ್ವಕರ್ಮನೇ ಆಗಿದ್ದಾನೆ. ಆ ಸ್ವಯಂ ವಿಶ್ವಕರ್ಮನನ್ನು ಮುಖದವರೇ ಮನ್ವಾದಿ ಪಂಚ ಬ್ರಹ್ಮರ್ಷಿಗಳು ಇವರಿಗೆ ಬ್ರಹ್ಮ, ವಿಷ್ಣು, ಇಂದ್ರ, ಸೂರ್ಯ ಪರ್ಯಾಯನಾಮಗಳಿದ್ದವು. ಈ ಪಂಚಶಿಲ್ಪಿ ಬ್ರಹ್ಮರ್ಷಿಗಳಾದ ಮನು, ಮಯ, ತ್ವಷ್ಟ, ಶಿಲ್ಪ, ವಿಶ್ವಜ್ಞರ ಪಾತ್ರೆರೆ ಸಾನಾನ ಶಿಲ್ಪರ್ಷಿ, ಸನಾತನ ಶಿಲ್ಪರ್ಷಿ, ಅಹಭೂನ ಶಿಲ್ಪರ್ಷಿ, ಪ್ರತ್ಯಸುಶಿಲ್ಪರ್ಷಿ ಹಾಗೂ ಸುಪರ್ಣಸ್ಯ ಶಿಲ್ಪಿಗಳು ಇವರು ವಿಶ್ವಕರ್ಮ ಬ್ರಾಹ್ಮಣರ ಶಾಖ ಪ್ರವರ್ತಕರಾಗಿರುತ್ತಾರೆ. ಶಿಲ್ಪ ಬ್ರಾಹ್ಮಣರ ೧೨೫ ಗೋತ್ರಗಳನ್ನು ಮುಂದುವರಿಸಿಕೊಂಡು ಹೋಗುತ್ತಿರುತ್ತಾರೆ.

### ೨.೨. ಪೌರಾಣಿಕ ನೆಲೆಗಳು

ಯಾವುದೇ ಒಂದು ಸಮುದಾಯ ಮತ್ತು ವೃತ್ತಿ ಹುಟ್ಟಬೇಕಾದರೆ ಅದಕ್ಕೆ ಕೆಲವು ಅನಿವಾರ್ಯವಾದ ಕಾರಣಗಳಿರುತ್ತವೆ. ಒಂದು ಸಮಾಜ ವ್ಯವಸ್ಥೆಯಲ್ಲಿ ಕೆಲವು ಆಚರಣೆಗಳು ಪ್ರಕೃತಿ ನಿಯಮದಂತೆ ರೂಪಿತವಾಗಿರುತ್ತವೆ. ಅದೇ ರೀತಿಯಾಗಿ ಪಾಂಚಾಳರ ಪೌರಾಣಿಕ ನೆಲೆಗಳನ್ನು ಗಮನಿಸಬೇಕಾಗಿದೆ. ಅಂತದೊಂದು ಪಾಂಚಾಳರಿಗೆ ಸಂಬಂಧಿಸಿದಂತೆ ಹಲವು ಐತಿಹ್ಯಗಳಿವೆ.

ಶಿವಸ್ವರೂಪಿಯಾದ ವಿಶ್ವಕರ್ಮರಿಂದಲೇ ಈ ಜಗತ್ತು ಸೃಷ್ಟಿಯಾಯಿತು ಎಂದು ವಿಶ್ವಕರ್ಮರಲ್ಲಿರುವ ವಿಶ್ವಕರ್ಮ ಪುರಾಣ ಮತ್ತು ಮೂಲಸ್ತಂಭ ಪುರಾಣಗಳು ಹೇಳುತ್ತವೆ. ನಂತರ ತಾನು ಇಡೀ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಗಾಳಿ, ಬೆಂಕಿ, ನೀರು, ಭೂಮಿ, ಆಕಾಶಗಳನ್ನು ಸೃಷ್ಟಿಸಿದ ಈತನು ನಂತರ ಮನುಷ್ಯರನ್ನು ಸೃಷ್ಟಿಸಿ ಅವರ ವಾಸಕ್ಕೆ ಯೋಗ್ಯವಾದ ಮನೆ, ವ್ಯವಸಾಯಕ್ಕೆ ಬೇಕಾದ ಉಪಕರಣಗಳು ಮುಂತಾದವುಗಳನ್ನು ಸೃಷ್ಟಿಸಿಕೊಡುತ್ತಾನೆ ಎನ್ನುವ ನಂಬುಗೆ ಪಾಂಚಾಳ ಸಮುದಾಯದಲ್ಲಿದೆ.

ಪಾಂಚಾಳರ ಮೂಲಪುರುಷನಾದ ವಿಶ್ವಕರ್ಮನಿಗೆ ಐದು ಮುಖಗಳು. ಆ ಐದು ಮುಖಗಳಿಂದ ಮನು, ಮಯ, ತ್ವಷ್ಟಿ, ಶಿಲ್ಪಿ, ದೈವಜ್ಞರು ಐದು ಮುಖಗಳನ್ನು ಹೊತ್ತು ಹುಟ್ಟಿದ ವಿಶ್ವಕರ್ಮನು ಒಂದೊಂದು ಮುಖಕ್ಕೂ ಒಂದೊಂದು ಕೆಲಸವನ್ನು ವಹಿಸಿಕೊಡುತ್ತಾನೆ. ಮನು ಲೋಹ ಕೆಲಸ, ಮಯ ಬಡಗಿ ಕೆಲಸ, ತ್ವಷ್ಟಿ ಕಂಚಿನ ಕೆಲಸ, ಶಿಲ್ಪಿ ಕಲ್ಲಿನ ಕೆಲಸವನ್ನು, ದೈವಜ್ಞನು ಚಿನ್ನದ ಕೆಲಸವನ್ನು ನಿರ್ವಹಿಸುವಂತೆ ನಿರ್ದೇಶಿಸುತ್ತಾನಂತೆ.

'ಮನು ನಾಮಕವಾದ ಶಿವನು ಆದಿಶಕ್ತಿಯೊಡಗೂಡಿ ವಿಶ್ವಕರ್ಮನ ಪೂರ್ವ ಮುಖದಲ್ಲಿ ಜನಿಸಿದನು. ಮಯ ನಾಮಕವಾದ ವಿಷ್ಣುವು ಇಚ್ಛಾಶಕ್ತಿಯುಕ್ತನಾಗಿ ದಕ್ಷಿಣದ ಮುಖದಲ್ಲಿ ಜನಿಸಿದನು.

ತ್ವಷ್ಟ ನಾಮಕವಾದ ಚತುರ್ಮುಖಿ ಬ್ರಹ್ಮನು ಕ್ರಿಯಾಶಕ್ತಿಯೊಡಗೂಡಿ ಪಶ್ಚಿಮದ ಮುಖದಲ್ಲಿ ಹುಟ್ಟಿದನು. ಶಿಲ್ಪಿ ನಾಮಕವಾದ ಇಂದ್ರನು ಮಯಾ ಶಕ್ತಿಯೊಡಗೂಡಿ ಉತ್ತರ ಮುಖದಲ್ಲಿ ಜನಿಸಿದನು' ಎಂದು ವಿಶ್ವಕರ್ಮ ಪುರಾಣದಲ್ಲಿ ಹೇಳಲಾಗಿದೆ.[೪]

**ಮನು(ಸಾನಗ)**

ಈ ಮಹರ್ಷಿಯು ಲೋಹಶಿಲ್ಪಿ. ಈತನ ಸಂಶೋಧನೆ ಕಬ್ಬಿಣ, ನೇಗಿಲು, ಹಾರೆ, ಪಿಕಾಸಿ, ಬೀಗ, ಖಡ್ಗ, ಚೂರಿ, ಕಬ್ಬಿಣಗಾಣ, ಕೃಷಿ ಉಪಕರಣಗಳು ರಾಟೆ ಮೊದಲಾದ ಆಶ್ಚರ್ಯಕರ ಯಂತ್ರಗಳ ಸೃಷ್ಟಿ.

**ಮಯ(ಸನಾತನ)**

ಈ ಮಹರ್ಷಿಯು ಕಾಷ್ಠಶಿಲ್ಪಿ. ಈತನ ಕೆಲಸ ಮರ, ರಥ, ಪಾಲಕಿ, ಹಡಗು, ದೋಣಿ, ಬಾಗಿಲು, ಕೃಷಿ, ಉಪಕರಣಗಳು ಮರದಲ್ಲಿ ದೇವಾನುದೇವತೆಗಳ ವಿಗ್ರಹಗಳು ಮುಂತಾದವು ಮಯ ಮಹರ್ಷಿಯ ಕೊಡುಗೆಗಳು.

**ತ್ವಷ್ಟ(ಅಹಭೂನ)**

ಈ ಮಹರ್ಷಿಯ ಎರಕಶಿಲ್ಪಿ. ಈತನ ಕೆಲಸ ಕಂಚು, ಹಿತ್ತಾಳೆ, ದೇವಾಲಯಗಳ ಪ್ರಭಾವಳಿ, ಕಳಸ, ಘಂಟೆ, ಧೂಪದಾರತಿ, ಉತ್ಸವ, ಮೂರ್ತಿಗಳು ಯಜ್ಞಕ್ಕೆ ಬೇಕಾಗುವ ಪಾತ್ರೆಗಳು, ದಿನಬಳಕೆಯ ಪಾತ್ರೆಗಳು, ಇವುಗಳಲ್ಲದೆ ಅಹಭೂವನ ಮಹರ್ಷಿ ಆಯುರ್ವೇದ ಖಗೋಳಶಾಸ್ತ್ರ ಬಲ್ಲವನು.

**ಶಿಲ್ಪಿ(ಪ್ರತ್ನ)**

ಈ ಮಹರ್ಷಿಯು ಶಿಲಾಶಿಲ್ಪಿ. ಈತನ ಕೆಲಸ ಶಿಲೆಯಲ್ಲಿ ಗಂಡು ಶಿಲೆ, ಹೆಣ್ಣು ಶಿಲೆ, ನಪುಂಸಕ ಶಿಲೆ ಎಂಬ ಪ್ರಭೇದಗಳಿದ್ದು ಅವುಗಳನ್ನು ಕಂಡುಹಿಡಿದು ದೇವಾನುದೇವತೆಗಳ ವಿಗ್ರಹಗಳನ್ನು ತಯಾರಿಸುವುದು. ದೇವಾಲಯಗಳ ನಿರ್ಮಾಣ, ಆಣೆಕಟ್ಟುಗಳು, ಕೋಟೆ, ಅರಮನೆ, ಮೊದಲಾದವುಗಳ ನಿರ್ಮಾಣ ಶಿಲಾಶಿಲ್ಪಿಯದು.

**ವಿಶ್ವಜ್ಞ(ಸುಪರ್ಣ)**

ಈ ಮಹರ್ಷಿಯು ಚಿನ್ನ, ಬೆಳ್ಳಿ, ಶಿಲ್ಪಿ; ಈತನ ಕೆಲಸ ಚಿನ್ನ, ಬೆಳ್ಳಿ, ಸಿಂಹಾಸನ, ಕಿರೀಟ, ರತ್ನಾಭರಣಗಳು, ಚಿನ್ನದ ರಥ, ದೇವರ ಮೂರ್ತಿಗಳು, ಮಹಿಳೆಯರಿಗೆ ಮಂಗಳಕರವಾದ ತಾಳಿ, ಕಾಲುಂಗರ, ಓಲೆ, ಕಂಠೀಹಾರ, ಮೊದಲಾದ ಆಭರಣಗಳ ನಿರ್ಮಾಣ ಸುಪರ್ಣ ಮಹರ್ಷಿಯ ಸೃಷ್ಟಿ

ವಿಶ್ವಕರ್ಮರು ತಮ್ಮ ವೃತ್ತಿಯಲ್ಲಿ ಬಳಸುತ್ತಿರುವ ಎಲ್ಲ ವಸ್ತುಗಳನ್ನು 'ಕಾಳಿ' ಎಂದೇ ಕರೆಯುತ್ತಾರೆ. ತಿದಿಯನ್ನು ಸಿಂಹಾಸನವೆಂದು, ಬೆಂಕಿಯನ್ನು ಕಾಳಿ ಎಂದೂ, ಅಡಿಗಲ್ಲನ್ನು ಈಶ್ವರನೆಂದು ಸುತ್ತಿಗೆಯನ್ನು ಶಿವನ ಢಮರುಗವೆಂದು, ಇಕ್ಕಳವನ್ನು ಆದಿಶಕ್ತಿ ಎಂದು ಕಬ್ಬಿಣದ ಕೊಲನ್ನು ತ್ರಿಶೂಲವೆಂದೂ ತಿಳಿದುಕೊಂಡಿದ್ದಾರೆ[೫].

ವಿಶ್ವಕರ್ಮ ಪುರಾಣದಲ್ಲಿ ವಾಸ್ತುಶಿಲ್ಪದ ಸಂಪೂರ್ಣ ನಿರ್ದೇಶನದ ವಿವರಣೆ ದೊರೆಯುತ್ತದೆ. ವಿಶ್ವದಲ್ಲಿ ಈ ಭೂತಲದ ಮೇಲೆ ಎಷ್ಟೆಲ್ಲ ಸೃಷ್ಟಿ ಕಾರ್ಯಗಳಿರುತ್ತವೆಯೋ ಅಲ್ಲಿ ಅವುಗಳ ಸೃಷ್ಟಿಕರ್ತ ವಿಶ್ವಕರ್ಮನು ಮಾತ್ರ ಆಗಿರುತ್ತಾನೆ. ಅರ್ಥಾತ್ ವಿಶ್ವದಲ್ಲಿ ಸಂಪಾದಿಸುವಂತಹ ಸಂಪೂರ್ಣ ಕಾರ್ಯಗಳಿಗೆ ಅವನೇ ಆದಿದೇವನಾಗಿರುತ್ತಾನೆ. ಅವನಿಲ್ಲದೇ ಯಾವುದೇ ಪ್ರಕಾರದ ಆವಾಸ ಭವನ ಇತ್ಯಾದಿಗಳ ನಿರ್ಮಾಣದ ಕಲ್ಪನೆಯನ್ನು ಮಾಡಲಾಗದು. ಈ ಭಗವಾನ್ ವಿಶ್ವಕರ್ಮನ ಉಪಾಸನೆಯನ್ನು ದೇವತೆಗಳು ಹಾಗೂ ಲೋಕಪಾಲಕರೂ ಮಾಡಿದ್ದಾರೆ. ಅವರೆಲ್ಲರೂ ತಮ್ಮ ಅಭೀಷ್ಟಗಳನ್ನು ಈಡೇರಿಸಿ ಕೊಂಡಿರುತ್ತಾರೆ. ಬ್ರಹ್ಮನೂ ಕೂಡ ಯಾವಾಗ ಸೃಷ್ಟಿಯ ರಚನೆಯಲ್ಲಿ ಪ್ರವೃತ್ತನಾಗುತ್ತಾನೋ ಆಗ ಅವನು ಲೋಕಗಳ ನಿರ್ಮಾಣಕ್ಕಾಗಿ ದೇವಶಿಲ್ಪಿ ವಿಶ್ವಕರ್ಮನ ನೆರವನ್ನು ತೆಗೆದುಕೊಳ್ಳುತ್ತಾನೆ. ಏಕೆಂದರೆ ಲೋಕಗಳ ನಿರ್ಮಾಣ ಕಾರ್ಯವನ್ನು ಯಾವುದೇ ದೇವತೆಗಳು ಮಾಡಲಾರರು. ವಿಷ್ಣುವು ವಿಶ್ವದ ಶಾಂತಿ ಪಾಲನೆಯ ಕಾರ್ಯದಲ್ಲಿ ತೊಡಗಿರುತ್ತಾನೋ ಆಗ ವಿಶ್ವಕರ್ಮನ ಸಹಯೋಗವನ್ನು ನಿರಂತರವಾಗಿ ಪಡೆದುಕೊಳ್ಳಬೇಕಾಗುತ್ತದೆ. ಪೃಥ್ವಿಯ ಸಮಸ್ತವರ್ಗ, ಗ್ರಾಮ, ಪರ್ವತ, ಇತ್ಯಾದಿಗಳಂತಹ ಸ್ಥಾನಗಳಿರುತ್ತವೆಯೋ ಅದರಲ್ಲಿ ದೇವಶಿಲ್ಪಿ ವಿಶ್ವಕರ್ಮನ ಪ್ರಭಾವವೇ ಕಾರ್ಯ ಮಾಡುತ್ತದೆ. ಒಂದು ವೇಳೆ ಯಾವುದೇ ಪುರ, ಗ್ರಾಮ ಪ್ರಸಾದ ಇತ್ಯಾದಿಗಳ ಯಾವುದೇ ಪ್ರಕಾರದ ನಾಶವಾಗುತ್ತಿದ್ದರೆ ಭಗವಾನ್ ವಿಶ್ವಕರ್ಮನೇ ಅವುಗಳ ಪುನಃ ನಿರ್ಮಾಣ ಮಾಡುವುದರಲ್ಲಿ ಸಮರ್ಥನಾಗಿರುತ್ತಾನೆ. ಶಂಕರನೋ ಆಗ ಅವನೂ ಕೂಡ ದೇವಶಿಲ್ಪಿ ವಿಶ್ವಕರ್ಮನನ್ನು ಈಗ ಮಹಾಪ್ರಳಯವು ಉಂಟಾಗುವುದು ಅವಶ್ಯಕವಾಗಿರುತ್ತದೆ ಎಂದು ಸಂತೋಷಗೊಳಿಸಿ ಪೂಜೆ ಮಾಡುವ ವಿಧಾನವನ್ನು ಕೂಡ ಹೇಳಿಕೊಟ್ಟಿದ್ದಾನೆ ಎಂದು ಹೇಳಲಾಗಿದೆ.

ಇದೇ ವಿಶ್ವಕರ್ಮ ಪುರಾಣದಲ್ಲಿ ದೇವರಾಜ ಇಂದ್ರನೂ ಕೂಡ ಮಳೆಯನ್ನು ಯಾವಾಗ ಬರುವಂತೆ ಮಾಡುತ್ತಾನೋ ಆಗ ವಿಶ್ವಕರ್ಮನ ಸಹಾಯವನ್ನು ತೆಗೆದುಕೊಳ್ಳಬೇಕಾಗುತ್ತದೆ. ವಾಯುವಿನಲ್ಲಿ ಪ್ರವಹನ ಶಕ್ತಿ, ಅಗ್ನಿಯಲ್ಲಿ ಪ್ರಜ್ವಲಿಸುವ ದಹನಶಕ್ತಿ, ಜಲದಲ್ಲಿ ನಿರಂತರವಾಗಿ ಹರಿಯುವ ಶಕ್ತಿಯೂ ಕೂಡ ವಿಶ್ವಕರ್ಮನ ಪ್ರಭಾವವಿಲ್ಲದೇ ಉಂಟಾಗಲಾರದು. ಸೂರ್ಯ, ಚಂದ್ರ, ಪೃಥ್ವಿ ಇತ್ಯಾದಿ ಎಲ್ಲವುಗಳ ಚಲನಶೀಲತೆಯೂ ಬೆಳಕು ಮತ್ತು ಪ್ರಭಾವ ಇತ್ಯಾದಿಗಳ ಕಾರಣವೂ ಅವನೇ ಆಗಿರುತ್ತಾನೆ. ಯಮರಾಜನೂ ಕೂಡ ತನ್ನ ದಂಡಾಧಿಕಾರದ ರಕ್ಷಣೆಗಾಗಿ ವಿಶ್ವಕರ್ಮನ ನೆರವನ್ನು ಪ್ರಾರ್ಥಿಸಬೇಕಾಗಿರುತ್ತದೆ. ಕಾಲಚಕ್ರದ ನಿರಂತರ ಚಲನೆ ಇರುವುದು ಕೂಡ ವಿಶ್ವಕರ್ಮನ ಪ್ರಭಾವದ ಮೇಲೆಯೇ ಅವಲಂಬಿಸಿರುತ್ತದೆ.[೬]

ಹೇಮಾದ್ರಿ ಖಂಡದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನು ಎಲ್ಲ ದೇವತೆಗಳಲ್ಲೂ ಹಿರಿಯನೆಂಬ ಸಂಕೇತವಾಗಿ ಗಡ್ಡ ಮೀಸೆ ಪಡೆದಿರುತ್ತಾನೆ. ಈತನಿಗೆ ಒಂದು ಮುಖ ಎರಡು ತೋಳಗಳು. ಈ ತೇಜೋ ಮೂರ್ತಿಯು ರಥದಲ್ಲಿ ಕುಳಿತಿರುವಂತೆ ಚಿತ್ರಿಸಬಹುದು. ಈತನು ಬಲಹಸ್ತದಲ್ಲಿ ಇಕ್ಕಳ ಎಡಹಸ್ತದಲ್ಲಿ ವರದ ಮುದ್ರೆಯನ್ನು ಧರಿಸುತ್ತಾನೆ ಎಂದು ಹೇಳಲಾಗಿದೆ.

ದೇವತಾಮೂರ್ತಿ ಪ್ರಕರಣದಲ್ಲಿ ವಿಶ್ವಕರ್ಮನು ನಾಲ್ಕು ತೋಳುಗಳು, ಮೂರು ಕಣ್ಣುಗಳು ಇರುವ ವಿಶ್ವಕರ್ಮ ಪರಮೇಶ್ವರನು ಚಂದ್ರನನ್ನು ಜಟಾಜೂಟದಲ್ಲಿ ಧರಿಸಿರುತ್ತಾನೆ. ನಾಲ್ಕು ಹಸ್ತಗಳಲ್ಲಿ ಅಕ್ಷಮಾಲೆ, ಸೃಕ್ ಪುಸ್ತಕ, ಕಮಂಡಲುಗಳನ್ನು ಧರಿಸಿರುತ್ತಾನೆ. ಒಂದೇ ಮುಖ ಮೂರು ಕಣ್ಣುಗಳು ಅಕ್ಷಯಮಾಲೆಯೊಂದೇ ಅಭಯ ಮುದ್ರೆಯನ್ನು ರೂಪಿಸುವ ಪರಿಪಾಟವಿದೆ.

ರೂಪ ಮಂಡನದಲ್ಲಿ ವಿಶ್ವಕರ್ಮನಿಗೆ ನಾಲ್ಕು ತೋಳುಗಳು ಅಕ್ಷಯಮಾಲೆ, ಪುಸ್ತಕ, ಶಂಖ, ಕಮಂಡಲ ಧರಿಸಿರುತ್ತಾನೆ. ಈತನಿಗೆ ಮೂರು ಕಣ್ಣುಗಳು ಒಂದು ಮುಖ. ಈತನ ವಾಹನ ಹಂಸ ಎಂಬ ವಿವರಣೆ ಇದೆ.

ವಿಶ್ವಂಭರ ವಾಸ್ತುಶಾಸ್ತ್ರದಲ್ಲಿ ವಿಶ್ವಕರ್ಮನ ಪ್ರತಿಯಾಗಿ ಬ್ರಹ್ಮನು ಹೇಳುತ್ತಾನೆ. 'ವಿಶ್ವಕರ್ಮ ನೀನು ಪೃಥ್ವಿ ಸ್ವರ್ಗಗಳಲ್ಲಿಯ ಉದ್ಯಾನ, ವಿಮಾನ, ದೇವಾಲಯ, ಯಂತ್ರ, ದುರ್ಗ, ವಾಪಿ, ಕೂಪ, ಆಯುಧ, ವಾಜೀಕರ್ಮದ ಹಾಗೂ ರಮಣೀಯ ಚಿತ್ರ ಇತ್ಯಾದಿಗಳನ್ನು ವಿವಿಧ ಸುವರ್ಣಾಧಿ ಧಾತುಗಳಿಂದ ಕರ್ಮ ಮಾಡುವಂತಹನಾಗಿರುವೆ, ನೀನು ಜಗತ್ತಿನ ಎಲ್ಲ ಕರ್ಮಗಳನ್ನು ತಿಳಿದವನಾಗಿರುತ್ತಿವೆ. ಆದ್ದರಿಂದ ನಿನಗೆ ವಿಶ್ವಕರ್ಮ ಎನ್ನುತ್ತಾರೆ' ಎಂದು ವಿಶ್ವಕರ್ಮನ ಸಾಮರ್ಥ್ಯವನ್ನು ವರ್ಣಿಸಿದೆ.

**ಶಿವಪುರಾಣ**

ಶಿವಪುರಾಣದಲ್ಲಿ ವಿಶ್ವಕ್ಕಾಗಿ ಅತ್ಯಂತ ಶೋಚನೀಯವಾದ ಮೂರು ಲೋಕಗಳಲ್ಲಿ ಶ್ರೇಷ್ಠ ಎಲ್ಲ ಜನರು ಹೊಗಳುವಂತಹ ದಿವ್ಯ ಸುವರ್ಣ ರಥವನ್ನು ಅತ್ಯಂತ ಆದರದಿಂದ ಹಾಗೂ ಮಹಾಪ್ರಯಾಸದಿಂದ ವಿಶ್ವಕರ್ಮನು ತಯಾರಿಸಿದನು. ರಥದ ದಕ್ಷಿಣ ಭಾಗದಲ್ಲಿ ಸೂರ್ಯ ಮತ್ತು ವಾಮ ಭಾಗದಲ್ಲಿ ಚಂದ್ರ ಇದ್ದಾರೆ ಎಂದು ಸುವರ್ಣ ರಥವನ್ನು ವರ್ಣಿಸಲಾಗಿದೆ.

ಬ್ರಹ್ಮ, ವಿಷ್ಣು, ಇಂದ್ರ, ಇತ್ಯಾದಿ ದೇವತೆಗಳು ತಮ್ಮ ತಮ್ಮ ದುಃಖ ನಿವಾರಣೆಗಾಗಿ ಲಿಂಗಗಳನ್ನು ನಿರ್ಮಿಸಿಕೊಡಬೇಕೆಂದು ದೇವಶಿಲ್ಪಿ ವಿಶ್ವಕರ್ಮನನ್ನು ಪ್ರಾರ್ಥಿಸಿದರು. ಆಗ ಆ ಮಹಾಶಿಲ್ಪಿಯು ಈ ಎಲ್ಲ ದೇವತೆಗಳಿಗೆ ಅವರವರ ಅಧಿಕಾರಕ್ಕೆ ಅನುಗುಣವಾಗಿ ಲಿಂಗಗಳನ್ನು ಮಾಡಿಕೊಟ್ಟನು. ಅಂದರೆ ಇಂದ್ರನಿಗೆ ಮಾಣಿಕ್ಯದಿಂದ, ಕುಬೇರನಿಗೆ ಸುವರ್ಣದಿಂದ, ಯಮನಿಗೆ ಗೋಮೇಧದಿಂದ, ವರುಣನಿಗೆ ಕೃಷ್ಣ ಮಣಿಯಿಂದ, ವಿಷ್ಣುವಿಗೆ ಇಂದ್ರನೀಲದಿಂದ, ಬ್ರಹ್ಮನಿಗೆ ಶ್ರಮಂತಕದಿಂದ, ವಿಶ್ವ ದೇವರಿಗೆ ಹಾಗೂ ಅಷ್ಟವಸುಗಳಿಗೆ ಬೆಳ್ಳಿಯಿಂದ, ವಾಯುವಿಗೆ ಹಿತ್ತಾಳೆಯಿಂದ, ಅಶ್ವಿನಿಕುಮಾರರಿಗೆ ಪಾರ್ಥಿವದಿಂದ, ಲಕ್ಷ್ಮಿಗೆ ಸ್ಫಟಿಕದಿಂದ, ಆದಿತ್ಯನಿಗೆ ತಾಮ್ರದಿಂದ, ಚಂದ್ರನಿಗೆ ಮುತ್ತಿನಿಂದ, ಅಗ್ನಿಗೆ ವಜ್ರದಿಂದ, ಬ್ರಾಹ್ಮಣ ಹಾಗೂ ಬ್ರಾಹ್ಮಣ ಸ್ತ್ರೀಯರಿಗೆ ವೃತ್ತಿಕೆಯಿಂದ, ದೈತ್ಯ ಹಾಗೂ ರಾಕ್ಷಸರಿಗೆ ಸಗಣಿಯಿಂದ, ಪಿಶಾಚಿಗಳಿಗೆ ಕಬ್ಬಿಣದಿಂದ, ದೇವಿಗೆ ಬೆಣ್ಣೆಯಿಂದ, ನಿರುತಿಗೆ ಕಟ್ಟಿಗೆಯಿಂದ, ಯೋಗಿಗಳಿಗೆ ಭಸ್ಮದಿಂದ, ಛಾಯಾದೇವಿಗೆ ಹಿಟ್ಟಿನಿಂದ, ಸರಸ್ವತಿಗೆ ರತ್ನದಿಂದ, ಯಕ್ಷರಿಗೆ ಮೊಸರಿನಿಂದ ಈ ಪ್ರಕಾರ ಎಲ್ಲ ದೇವತೆಗಳಿಗೂ ಲಿಂಗಗಳನ್ನು ಮಾಡಿಕೊಟ್ಟು ಮತ್ತು ಪೂಜಾ ವಿಧಾನವನ್ನು ಸಹ ಹೇಳಿಕೊಟ್ಟನು.

ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿ ಅವುಗಳನ್ನು ಪೂಜಿಸಿ ತಮ್ಮ ಅಭೀಷ್ಟಗಳನ್ನು ನೆರವೇರಿಸಿಕೊಂಡರು.[೬]

**ಲಿಂಗಪುರಾಣ**

ಲಿಂಗಪುರಾಣದಲ್ಲಿ ಅತ್ಯಂತ ತೇಜಸ್ವಿಯಾದ ಎಲ್ಲ ಲೋಕಗಳಲ್ಲಿ ದಿವ್ಯವಾದ ಮತ್ತು ದೇವ ಮಾನವರಿಗೆ ಪ್ರಿಯವಾದ ಶಂಕರನ ಸುವರ್ಣ ರಥವನ್ನು ಅತ್ಯಂತ ಪರಿಶ್ರಮದಿಂದ ಹಾಗೂ ಆದರದಿಂದ ವಿಶ್ವಕರ್ಮನು ನಿರ್ಮಿಸಿದನು ಎಂದು ಸುವರ್ಣ ರಥದ ಕುರಿತು ಬಣ್ಣಿಸಲಾಗಿದೆ.

ದೇವಶಿಲ್ಪಿಯಾದ ವಿಶ್ವಕರ್ಮನು ದ್ವಾರಕೆಯನ್ನು ನಿರ್ಮಿಸಿದಾಗ ಕೃಷ್ಣನು, ವಿಶ್ವಕರ್ಮನು ಪೂಜೆ ಮಾಡಿದನು. ಅಷ್ಟೇ ಅಲ್ಲದೇ ವಿಶ್ವಕರ್ಮ ಸಂತತಿಯ ಶಿಲ್ಪಿಗಳು ಆ ನಗರದಲ್ಲಿಯೇ ಇದ್ದು ಅದನ್ನು ಅಕ್ಷಯ ನಗರವನ್ನಾಗಿ ಮಾಡಲು ದ್ವಾರಕೆಯಲ್ಲೇ ಇಟ್ಟುಕೊಂಡನು. ಇಂದು ಉಡುಪಿಯಲ್ಲಿ ಪೂಜೆಗೊಳ್ಳುತ್ತಿರುವ ಶ್ರೀ ಕೃಷ್ಣನ ಪ್ರತಿಮೆಯನ್ನು ರುಕ್ಮಿಣಿಯ ಅಪೇಕ್ಷೆಯ ಮೇರೆಗೆ ನಿರ್ಮಿಸಿಕೊಟ್ಟವನೂ ದೇವಶಿಲ್ಪಿ ವಿಶ್ವಕರ್ಮನೇ ಆಗಿದ್ದಾನೆ.

ತಿರುಪತಿಯ ಶ್ರೀನಿವಾಸನ ಕಲ್ಯಾಣ ಪದ್ಮಾವತಿಯೊಂದಿಗೆ ನಡೆಯುವಾಗ ನಾರಾಯಣ, ಪುರದಲ್ಲಿ ಅನೇಕ ಭವನಗಳನ್ನು ಮತ್ತು ವಿವಾಹ ಮಂಟಪವನ್ನು ನಿರ್ಮಿಸಿದವನೂ ಕೂಡ ದೇವಶಿಲ್ಪಿ ವಿಶ್ವಕರ್ಮನೆ.

ಜಗನ್ನಾಥಪುರಿಯ ಕ್ಷೇತ್ರದಲ್ಲಿಯ ಜಗನ್ನಾಥ ಬಲಭದ್ರ ಮತ್ತು ಸುಭದ್ರ ಮೂರ್ತಿಗಳು ಸಹ ದೇವಶಿಲ್ಪಿ ವಿಶ್ವಕರ್ಮನೇ ನಿರ್ಮಿಸಿದ್ದಾನೆ. ಈ ಕುರಿತು ಒಂದು ರೋಚಕವಾದ ಕಥೆಯು ಇದೆ. ಪವಿತ್ರವಾದ ದಾರು ದೊರೆತ ಬಳಿಕವೂ ಯಾವ ಶಿಲ್ಪವು ವಿಷ್ಣುನ ಮೂರ್ತಿ ತಯಾರಿಸಲು ಮುಂದೆ ಬರಲಿಲ್ಲ. ಆಗ ಸಾಕ್ಷಾತ್ ಶ್ರೀ ವಿಶ್ವಕರ್ಮನೇ ವೃದ್ಧನ ವೇಷದಲ್ಲಿ ತನ್ನ ಷರತ್ತನ್ನು ಒಪ್ಪಿದರೆ ಮಾತ್ರ ಮೂರ್ತಿಯನ್ನು ತಯಾರಿಸಿಕೊಡುವುದಾಗಿ ಹೇಳುತ್ತಾನೆ. ಮೂರು ತಿಂಗಳೆಲ್ಲ ಮೂರ್ತಿಗಳನ್ನು ತಯಾರಿಸಿ ಕೊಡುತ್ತೇನೆ. ಆದರೆ ನಾನು ಮೂರ್ತಿ ತಯಾರಿಸುವ ಕಾರ್ಯಾಗಾರಕ್ಕೆ ಮೂರ್ತಿ ತಯಾರಾಗುವವರೆಗೂ ಯಾರು ಪ್ರವೇಶಿಸಬಾರದು ಎಂಬ ಷರತ್ತನ್ನು ಹಾಕುತ್ತಾನೆ. ಇದಕ್ಕೆ ರಾಜನು ಸಮ್ಮತಿಸಿ ರಾಣಿ ಗುಂಡಿ ಜಾಗ ಮಹಲಿನ ಬಳಿಯ ಜಾಗವೊಂದನ್ನು ನೀಡುತ್ತಾನೆ. ಮೂರ್ತಿ ತಯಾರಿಕೆ ಆರಂಭವಾಗುತ್ತದೆ. ಆದರೆ ಕೆಲದಿನಗಳ ನಂತರ ಇದ್ದಕ್ಕಿದ್ದ ಹಾಗೆ ಶಬ್ದವು ನಿಂತು ಹೋದಾಗ ರಾಣಿ ಗುಂಡಿ ಜಾಗ ಅನುಮಾನ ಶುರುವಾಗುತ್ತದೆ. ಆ ವೃದ್ಧ ಜೀವಂತವಾಗಿ ಇದ್ದಾನೋ ಇಲ್ಲವೋ ಎಂಬ ಅನುಮಾನ ಪರಿಹರಿಸಿಕೊಳ್ಳಲು ಹೋದಾಗ ಮೂರ್ತಿ ತಯಾರಿಕೆಯ ಜಾಗದಲ್ಲಿ ಆ ವೃದ್ಧ ಇರುವುದಿಲ್ಲ. ಆದರೆ ಅರೆಬರೆಯಾಗಿ ತಯಾರುಗೊಂಡ ಜಗನ್ನಾಥ, ಬಲಭದ್ರ, ಸುಭದ್ರ, ಮೂರ್ತಿಗಳು ಅಲ್ಲಿರುತ್ತವೆ. ರಾಜ-ರಾಣಿಗೆ ಮುಂದೇನು ಎಂಬ ಚಿಂತೆ ಆವರಿಸಿಕೊಂಡಾಗಲೇ ಆಕಾಶವಾಣಿಯಾಗಿ ವ್ಯರ್ಥವಾಗಿ ದುಃಖಿಸಬೇಡಿ ನಾವು ಇದೇ ರೂಪದಲ್ಲಿ ಇರಲು ಬಯಸುತ್ತೇವೆ.

ಪೂಜೆ ಪುನಸ್ಕಾರಗಳ ಮೂಲಕ ಪ್ರತಿಷ್ಠಾಪನೆಗೊಳಿಸಿ ಎಂಬ ಆದೇಶವಾಗುತ್ತದೆ. ಇದೇ ಹಿನ್ನೆಲೆಯಲ್ಲಿ ಇಂದಿಗೂ ಪುರಿಕ್ಷೇತ್ರದಲ್ಲಿ ಅರ್ಧಾಕೃತಿಯ ಮೂರ್ತಿಗಳೇ ಪೂಜಿಸಲ್ಪಡುತ್ತವೆ.[೮]

**ಪದ್ಮಪುರಾಣ ಭೂಖಂಡದಲ್ಲಿ**

ಶಂಕರನು ವಿಧಿಪೂರ್ವಕವಾಗಿ ವಿಶ್ವಕರ್ಮನ ಆರಾಧನೆ ಮಾಡಲು ಅವನು ಪ್ರಕಟನಾದನು. ಆಗ ಶಂಕರನು ಆತನಿಗೆ ವಿನಂತಿಸಿಕೊಂಡನು. ಹೇ ವಿಶ್ವಕರ್ಮನೇ ನಿನಗೆ ನಮಸ್ಕಾರಗಳು. ನೀನು ನನಗೆ ಬೇಕಾದಂತಹ ಮಂದಿರ ಹಾಗೂ ಅಲಂಕಾರಗಳು ಇತ್ಯಾದಿಯಾಗಿ ತಯಾರು ಮಾಡಿಕೊಂಡು, ನೀನು ಮಾಡಿದಂತಹ ಗೃಹಾಲಂಕಾರಾದಿ ಸುಖೋಪಭೋಗದ ಅಂಗೀಕಾರ ಮಾಡಿ ನಾನು ಈ ಲೋಕದಲ್ಲಿ ಹಾಗೂ ಪರಲೋಕದಲ್ಲಿ ನಾನಾ ಪ್ರಕಾರದ ಸುಖವನ್ನು ಭೋಗಿಸುವೆನು. ಈ ಪ್ರಕಾರ ಹೇಳಿ ಶಂಕರನು ಅಷ್ಟಾಕ್ಷರಿ ಮಂತ್ರದಿಂದ ವಿಶ್ವಕರ್ಮನನ್ನು ಬಹಳ ಭಕ್ತಿಯಿಂದ ಪೂಜೆ ಮಾಡಿದನು. ಆಗ ಪ್ರತ್ಯಕ್ಷನಾದ ದೇವಶಿಲ್ಪಿಯಾದ ವಿಶ್ವಕರ್ಮನು ಶಿವಪಾರ್ವತಿಯರ ಇಚ್ಛೆಯಂತೆ ಮಂದಿರವನ್ನು ನಿರ್ಮಿಸಿ, ಅಲಂಕಾರಾದಿಗಳನ್ನು ತಯಾರಿಸಿಕೊಟ್ಟನು. ಅವರ ಶಿಲ್ಪಚಾತುರ್ಯವನ್ನು ಕಂಡು ಶಂಕರನು ಶಿಲ್ಪಗಳು ಪೂರ್ತಿಯಾದ ನಂತರ ವಿಶ್ವಕರ್ಮನನ್ನು ನಿಮ್ಮ ಸಂತತಿ ಅಕ್ಷಯವಾಗಲಿ, ನಿಮ್ಮ ಕೀರ್ತಿ ವೃದ್ಧಿ ದಿಗಂತವಾಗಲಿ, ನಿಮ್ಮನ್ನು ಯಾರು ಸ್ಮರಿಸುತ್ತಾರೋ ಅವರಿಗೆ ಆಗಾಗ್ಗೆ ಸಂಪತ್ತು ಪ್ರಾಪ್ತವಾಗಲಿ ಈ ರೀತಿಯ ಸತ್ಕಾರದಿಂದ ಅವರನ್ನು ಬೀಳ್ಕೊಟ್ಟನು. ವಿಶ್ವಕರ್ಮ ನಿರ್ಮಿತ ಪ್ರಸಾದದಲ್ಲಿ ಇದ್ದು ಪಾರ್ವತಿಯ ಪುತ್ರೇಚ್ಛೆ ಬಯಕೆಯನ್ನು ಈಡೇರಿಸಿದನು.

ಮಾರ್ಕಂಡೇಯ ಪುರಾಣದಲ್ಲಿ, ದೇವಿಮಹಾತ್ಮೆಯಲ್ಲಿ, ಮಹಿಷಾಸುರ ವಧೆ ಕಥೆಯಲ್ಲಿ ಮಹಿಷಾಸುರನನ್ನು ವಧೆ ಮಾಡಲು ದೇವಿಯು ಸಾಕ್ಷಾತ್ ಪ್ರಕಟವಾದಾಗ ದೇವಶಿಲ್ಪಿ ವಿಶ್ವಕರ್ಮನು ಅವಳಿಗೆ ಮುಕುಟ, ಕುಂಡಲ, ರತ್ನಖಚಿತ ಕಂಕಣ, ಗೋಮಿ ಪಾಟಲಿ, ತೋಡಾ, ಬಿಳಿಯ ವಜ್ರದ ಬೈತಲೆ ಮಣಿ, ನೂಪುರ ಚಂದ್ರಹಾರ, ಕಂಠಾಭರಣ, ಇತ್ಯಾದಿ ಕೊರಳಲ್ಲಿಯ ಆಭರಣ, ಬಳೆಗಳಲ್ಲಿಯ ರತ್ನಮುದ್ರಿಕೆ ಇತ್ಯಾದಿ ಅಲಂಕಾರ ಮತ್ತು ಪರಶು ಮುಂತಾದ ಎಲ್ಲ ಶಸ್ತ್ರಾಸ್ತ್ರಗಳನ್ನು ತಯಾರಿಸಿ ಕೊಟ್ಟು ದೇವಿಯನ್ನು ಸಂತುಷ್ಟಗೊಳಿಸಿದನು ಎಂದು ವಿಶ್ವಕರ್ಮನ ಕೌಶಲ್ಯತೆಯನ್ನು ಹೊಗಳಲಾಗಿದೆ.

ಸ್ಕಂದಪುರಾಣ ಪ್ರಭಾಸ ಖಂಡದಲ್ಲಿ ಕೈಲಾಸ ಪರ್ವತದ ಮೇಲೆ ಶಂಕರನು ಪಾರ್ವತಿ, ಗಣಪತಿ ಹಾಗೂ ಸ್ಕಂದನೊಂದಿಗೆ ತೂಗು ಮಂಚದ ಮೇಲೆ ಕುಳಿತಿದ್ದನು. ಆ ತೂಗು ಮಂಚಕ್ಕೆ ಯಾವ ಆಧಾರವೂ ಇರಲಿಲ್ಲ. ಅವರು ಮಧ್ಯದಲ್ಲಿಯೇ ನಿಂತಿದ್ದರು. ಅದರ ಕಡೆಗೆ ಸ್ಕಂದನ ದೃಷ್ಟಿ ಹೋಯಿತು. ಆತನಿಗೆ ತುಂಬಾ ಆಶ್ಚರ್ಯವಾಯಿತು. ಇಷ್ಟರಲ್ಲಿ ಆತನ ದೃಷ್ಟಿಯ ಗಣಪತಿಯ ದಂತದ ಕಡೆಗೆ ಹೋಯಿತು. ಅದು ವಜ್ರ ವೈಢೂರ್ಯದಿಂದ ಅಲಂಕರಿಸಲ್ಪಟ್ಟಿತ್ತು. ಅದೇ ರೀತಿ ಪಾರ್ವತಿಯ ಕೊರಳಲ್ಲಿಯ ಹಾರವೂ ಸಹ ತುಂಬಾ ಮನೋಹರವಾಗಿತ್ತು. ಇವೆಲ್ಲವುಗಳನ್ನು ನೋಡಿ, ಹೇ ಈಶ್ವರ! ಇಂತಹ ದಿವ್ಯ ವಸ್ತುಗಳನ್ನು ಯಾರು ತಯಾರಿಸದ್ದಾರೆ? ಎಂದು ಕೇಳಿದನು.

ಆಗ ಶಂಕರನು ವಿಶ್ವಕರ್ಮ ಶಿಲ್ಪಿಯು ಸೃಷ್ಟಿಕರ್ತ ಎಂದು ಹೇಳಿದನು. ವಿಶ್ವಕರ್ಮನದು ನನ್ನದೇ ಅವತಾರ. ಅವನು ಸರ್ವ ಶಿಲ್ಪಗಳ ಪ್ರವರ್ತಕನಾಗಿದ್ದಾನೆ ಎಂದನು.

ಇದೇ ಪುರಾಣದ ಪ್ರಭಾಸ ಖಂಡದಲ್ಲಿ ಸೋಮೇಶ್ವರ ಪ್ರತಿಷ್ಠೆ ಮಹಾತ್ಮೆಯಲ್ಲಿ ವಿಶ್ವಕರ್ಮನು ಸೋಮೇಶ್ವರ ಪ್ರತಿಷ್ಠಾ ಯಜ್ಞದಲ್ಲಿ ಒಂದು ಯೋಜನೆ ದೂರದವರೆಗೆ ಯಜ್ಞ ಸ್ತಂಭ, ಮಂಟಪ ಮತ್ತು ಕುಂಡಲಗಳನ್ನು ತತ್ಕಾಲದಲ್ಲಿ ನಿರ್ಮಿಸಿದನು. ಮಂಟಪದಲ್ಲಿ ಸಹಸ್ರ ಕುಂಡಲಗಳಿದ್ದವು ಎಂದು ವಿವರಿಸಲಾಗಿದೆ.

ಸ್ಕಂದಪುರಾಣದ ನಾಗರಖಂಡದಲ್ಲಿ ವಾಸ್ತು ಕಥನದಲ್ಲಿ ಭಗವಾನ್ ವಿಶ್ವಕರ್ಮನು ಹಾಟಕೇಶ್ವರದಲ್ಲಿ ಆಶ್ರಮವನ್ನು ಸ್ಥಾಪಿಸಿ ವಾಸ್ತು ಪದವನ್ನು ವೈಶಾಖ ಶುಕ್ಲ ತೃತೀಯ ರೋಹಿಣಿ ನಕ್ಷತ್ರದ ಮೇಲೆ ಸ್ಥಾಪನೆ ಮಾಡಿದನು. ಈ ಕ್ಷೇತ್ರದರ್ಶನ ಮಾತ್ರದಿಂದಲೇ ಎಲ್ಲ ಪಾಪಗಳು ನಾಶವಾಗುತ್ತವೆ. ಗೃಹ, ಶಿಲ್ಪಕಲೆ, ಕೂಪದ, ಕುವಾಸ್ತು ಈ ಸಂಬಂಧದ ಎಲ್ಲ ದೋಷಗಳು ಅಲ್ಲಿ ದೂರವಾಗುತ್ತವೆ. ಅಲ್ಲಿಗೆ ಹೋಗಿ ಯಾರು ಯಥಾ ಪೂಜೆ ಮಾಡುತ್ತಾರೋ ಅವರಿಗೆ ರಾಜ್ಯ ಪದವಿ ಪ್ರಾಪ್ತವಾಗುವುದು ಎಂದು ಹೇಳಿದೆ.

ಇದೇ ಪುರಾಣದ ನಾಗರಖಂಡದಲ್ಲಿ ವಿಶ್ವಕರ್ಮನು ಶಾಸ್ತ್ರಗಳನ್ನು ಮಾಡಿದನು. ಬ್ರಹ್ಮ ದೇವರಿಗಾಗಿ ವಸ್ತ್ರಾಭರಣ, ವಿಷ್ಣುವಿಗಾಗಿ ಚಕ್ರ, ಶಂಕರನಿಗೆ ತ್ರಿಶೂಲ, ಇಂದ್ರನಿಗೆ ವಜ್ರಾಯುಧ, ಅಗ್ನಿಗೆ ಪರಶು ಮತ್ತು ಧರ್ಮರಾಜನಿಗೆ ದಂಡ ಇತ್ಯಾದಿ ಶಸ್ತ್ರಗಳನ್ನು ನಿರ್ಮಾಣ ಮಾಡಿಕೊಟ್ಟಿದ್ದಾನೆ. ಅಲ್ಲದೆ ಎಲ್ಲ ದೇವತೆಗಳಿಗೂ ಶಸ್ತ್ರಗಳನ್ನು ಮಾಡಿಕೊಟ್ಟಿದ್ದಾನೆ ಎಂಬ ವಿವರಣೆ ದೊರೆಯುತ್ತದೆ.[೮]

ವಾಯುಪುರಾಣದಲ್ಲಿ ಸ್ಥಪತಿ, ಸ್ಥಾಪಕಶ್ಚೈವ ಆಚಾರ್ಯೋ ವಿಶ್ವಕರ್ಮಣ ಎಂಬುದರಿಂದ ಸ್ಥಪತಿ–ಸ್ಥಾಪಕ ಆಚಾರ್ಯ ಈ ಮೂವರೂ ವಿಶ್ವಕರ್ಮ ವಂಶಜರು ಎಂದು ಹೇಳಿದೆ. ದೇವಾಚಾರ್ಯಸ್ತು ಮಹತೋ ಧೀಮತೋ ವಿಶ್ವಕರ್ಮಣ ಎಂದು ಹೇಳಿ ಮಹಾತ್ಮನು, ದಿವ್ಯಶ್ಯಾಲಿಯು ಆಗಿರುವ ವಿಶ್ವಕರ್ಮನು ದೇವತೆಗಳಿಗೆ ಆಚಾರ್ಯನಾದ ಎಂದು ತಿಳಿಸಿದೆ.[೯]

ಬ್ರಹ್ಮ ಪುರಾಣದಲ್ಲಿ ಪುರುಷೋತ್ತಮ ಕ್ಷೇತ್ರವರ್ಣನೆಯಲ್ಲಿ ದೇವಶಿಲ್ಪಿ ವಿಶ್ವಕರ್ಮನು ಉತ್ತಮ ಲಕ್ಷಣಯುಕ್ತ ಮೂರು ಮೂರ್ತಿಗಳನ್ನು ನಿರ್ಮಿಸಿ ಪುರುಷೋತ್ತಮ ಕ್ಷೇತ್ರದಲ್ಲಿ ಸ್ಥಾಪಿಸಿದ್ದಾನೆ ಎಂಬ ಉಲ್ಲೇಖವಿರುತ್ತದೆ.

ವಿಶ್ವಂಭರ ವಾಸ್ತುಶಾಸ್ತ್ರದಲ್ಲಿ ವಿಶ್ವಕರ್ಮನ ಪ್ರತಿಯಾಗಿ ಬ್ರಹ್ಮನು ಹೇಳುತ್ತಾನೆ. 'ವಿಶ್ವಕರ್ಮ ನೀನು ಪೃಥ್ವಿ, ಸ್ವರ್ಗಗಳಲ್ಲಿಯ ಉದ್ಯಾನ, ವಿಮಾನ, ದೇವಾಲಯ, ಯಂತ್ರ, ದುರ್ಗ, ವಾಪಿ, ಕೋಪ, ಆಯುಧ, ವಾಜೀಕರ್ಮದ ಹಾಗೂ ರಮಣೀಯ ಚಿತ್ರ ಇತ್ಯಾದಿಗಳನ್ನು ವಿವಿಧ ಸುವರ್ಣಾದಿ ಧಾತುಗಳಿಂದ ಕರ್ಮ ಮಾಡುವಂತಹನಾಗಿರುವೆ. ನೀನು ಜಗತ್ತಿನ ಎಲ್ಲ ಕರ್ಮಗಳನ್ನು ತಿಳಿದವನಾಗಿರುತ್ತೀಯ. ಆದ್ದರಿಂದ ನಿನ್ನನ್ನು ವಿಶ್ವಕರ್ಮ ಎನ್ನುತ್ತಾರೆ' ಎಂದು ವಿಶ್ವಕರ್ಮನ ಸಾಮರ್ಥ್ಯವನ್ನು ವರ್ಣಿಸಿದೆ.

ಮೂಲಸ್ತಂಭ ಪುರಾಣದಲ್ಲಿ ವಿಶ್ವಕರ್ಮನೇ ಜಗತ್ತಿಗೆ ಪ್ರಭುವು, ವಿಶ್ವಕರ್ಮನೇ ಜಗತ್ತಿನ ಗುರುವು, ವಿಶ್ವಕರ್ಮನೇ ಜಗತ್ತಿನ ಪ್ರಕಾಶವು ಈ ಜಗತ್ತೆಲ್ಲವೂ ವಿಶ್ವಕರ್ಮನೆ ಎಂದು ತಿಳಿಸುತ್ತದೆ.

ಚೋಳರಾಜ ಮತ್ತು ಪಾಂಚಾಳರ ಕಥೆಯಲ್ಲಿ ಪರಿಮಳ ಚೋಳನೆಂಬ ರಾಜನ ಬಳಿಗೆ ಒಂದೊಮ್ಮೆ ವ್ಯಾಸನು ಬಂದು ನಮ್ಮ ವಂಶಸ್ಥರನ್ನು ರಾಜರ ಬಳಿಯಲ್ಲಿ ಆಚಾರ್ಯರನ್ನಾಗಿ ಮಾಡಿಕೊಂಡರೆ ಭೂತ ಭವಿಷ್ಯ ಮತ್ತು ವರ್ತಮಾನ ಈ ತ್ರಿಕಾಲಗಳನ್ನು ಹೇಳುವನೆಂದು ಹೇಳುತ್ತಾನೆ. ಆಗ ಆ ರಾಜನು ತ್ರಿಕಾಲಗಳನ್ನು ಪಂಚಕೃತ್ಯಗಳನ್ನು ತಿಳಿಸಿ ಹೇಳುವ ಮಹಾಜ್ಞಾನಿ ಪಾಂಚಾಳರು ನಮ್ಮಲ್ಲಿ ಆಚಾರ್ಯರಾಗಿರುವುದುಂಟು. ಅದಕ್ಕಾಗಿ ನಿಮ್ಮ ಅಗತ್ಯವಿಲ್ಲವೆಂದು ಹೇಳಿ ಕಳುಹಿಸಿಬಿಟ್ಟ. ಆದಿಯಿಂದಲೂ ಪಾಂಚಾಳರೇ ಆಚಾರ್ಯರಾಗಿರುವುದರಿಂದ ತಮಗೆ ಇನ್ನೊಬ್ಬ ಆಚಾರ್ಯರ ಅವಶ್ಯಕತೆ ಇಲ್ಲವೆಂದು ರಾಜನು ತಿಳಿಸುತ್ತಾನೆ.

ಇದರಿಂದ ಅವಮಾನಿತನಾದ ವ್ಯಾಸನು ಕುತಂತ್ರದಿಂದ ಚೊಳರಾಜನ ದೂರದ ಸಂಬಂಧಿಯೊಬ್ಬನನ್ನು ಹುಡುಕಿ ಪಟ್ಟ ಕಟ್ಟುವ ಅಪೇಕ್ಷೆಯನ್ನು ತೋಡಿಕೊಳ್ಳುತ್ತಾನೆ. ಹಾಗೆಯೇ ಅತಿಯಾಸೆಗೆ ಒಳಗಾದ ಈ ಸಂಬಂಧಿಯು ರಾಜ್ಯವನ್ನು ಗೆಲ್ಲುವ ಕುತಂತ್ರವನ್ನು ವ್ಯಾಸನೊಂದಿಗೆ ಸೇರಿ ಮಾಡುತ್ತಾನೆ. ಚೋಳ ರಾಜನ ರಾಜ್ಯಕ್ಕೆ ದಂಡೆತ್ತಿ ಹೋದಾಗ ಬೆಟ್ಟದೋಪಾದಿಯಲ್ಲಿ ಕಬ್ಬಿಣದ ಗುಂಡುಗಳು ತಮ್ಮ ಮೇಲೆ ಬೀಳುವುದನ್ನು ಕಂಡು ಸೋಜಿಗಪಡುತ್ತಾನೆ.

ಆದರೆ ಈ ಗುಂಡುಗಳ ಎಸೆದಾಟಕ್ಕೆ ಹೆದರಿದ ವ್ಯಾಸನು ಮತ್ತು ಆತನ ಪಡೆಯು ತಾವು ಸೋತಿದ್ದಾಗಿ ಸ್ವಯಂ ಘೋಷಿಸಿಕೊಳ್ಳುತ್ತಾರೆ. ಇವರ ಮಾತಿಗೆ ಮನ್ನಣೆ ಕೊಟ್ಟು ಗುಂಡಿನ ಎಸೆತವನ್ನು ಚೋಳ ರಾಜನು ನಿಲ್ಲಿಸುತ್ತಾನೆ. ತಾನು ಎಂದೂ ನೋಡದ ಈ ಕಬ್ಬಿಣದ ಗುಂಡುಗಳು ಹೇಗೆ ಉತ್ಪತ್ತಿಯಾದವು ಮತ್ತು ಹೇಗೆ ದೊರೆತವು ಎಂದು ಕೇಳಲಾಗಿ ತಮ್ಮಲ್ಲಿಯ ಆಚಾರ್ಯನಾದ ವಿಶ್ವಕರ್ಮನೊಬ್ಬನನ್ನು ತೋರಿಸಿ, ಈ ಆಚಾರ್ಯನೇ ಇವುಗಳ ಸೃಷ್ಟಿಕರ್ತನು ನಮ್ಮ ಆಪತ್ಬಾಂಧವನೆಂದು ರಾಜನು ತಿಳಿಸುತ್ತಾನೆ. ಪಾಂಚಾಳನನ್ನು ನೋಡಿ ಇವನನ್ನು ಹೇಗಾದರೂ ಹಿಡಿಸಿ ಕೊಂದರೆ ರಾಜ್ಯವು ತನ್ನ ಕೈವಶವಾಗುವುದೆಂದು ಭಾವಿಸಿದ ವ್ಯಾಸನು ಮೋಸದಿಂದ ಪಾಂಚಾಳನನ್ನು ಹಿಡಿಸಿ ಗಲ್ಲಿಗೇರಿಸುತ್ತಾನೆ. ಪಾಂಚಾಳನ ಸಹಾಯವಿಲ್ಲದೆ ಚೋಳ ರಾಜನು ಸೋಲನ್ನು ಒಪ್ಪುತ್ತಾನೆ. ಈ ಕಥೆಯಲ್ಲಿ ಪಾಂಚಾಳರ ಕೌಶಲ್ಯವನ್ನು, ಯುದ್ಧ ಕಾಲದಲ್ಲಿ ಮದ್ದು ಗುಂಡು ಕತ್ತಿ ಕಠಾರಿ ಮುಂತಾದ ಯುದ್ಧೋಪಕರಣಗಳನ್ನು ತಯಾರಿಸುತ್ತಿದ್ದ ಪ್ರಸಂಗವನ್ನು ಗ್ರಹಿಕೆಗೆ ತರುತ್ತದೆ.

ಶಿಲ್ಪಿಯ ಕಥೆಯಲ್ಲಿ ಒಂದಾನೊಂದು ಕಾಲದಲ್ಲಿ ಶಿಲ್ಪಿಯೊಬ್ಬ ಅದ್ಭುತವಾದ ಶಿಲ್ಪಿಗಳನ್ನು ಸೃಷ್ಟಿಸುತ್ತಿದ್ದ. ಶಿಲ್ಪಿಯನ್ನು ಪರೀಕ್ಷಿಸಬೇಕೆಂದು ಒಮ್ಮೆ ಶಿವನು ಮಾರುವೇಷದಲ್ಲಿ ಆ ಶಿಲ್ಪಿಯ ಬಳಿಗೆ ಹೋದ. ಅವನು ತಯಾರಿಸಿದ ಶಿಲ್ಪಗಳನ್ನು ನೋಡುತ್ತಾ ನನ್ನದೊಂದು ಪ್ರತಿಕೃತಿ ಶಿಲ್ಪವನ್ನು ತಯಾರಿಸಿ ಕೊಡುವೆಯಾ ಎಂದು ಶಿಲ್ಪಿಯನ್ನು ಕೇಳುತ್ತಾನೆ. ಆಗಲೆಂದು ಒಪ್ಪಿದ ಶಿಲ್ಪಿಯು ಶಿವನನ್ನು ರೂಪದರ್ಶಿಯಾಗಿ ಬಳಸಿಕೊಂಡು ಶಿವನ ಪ್ರತಿಕೃತಿಯನ್ನು ತಯಾರಿಸಿ ಇನ್ನು ಸಣ್ಣ ಪುಟ್ಟ ಕೆಲಸಗಳನ್ನು ಮಾಡಬೇಕಾಗಿದೆ. ತರುವಾಯ ಈ ಶಿಲ್ಪವನ್ನು ಕೊಂಡು ಹೋಗಬಹುದೆಂದು ಶಿವನಿಗೆ ತಿಳಿಸಿದನು.

ಮಾರನೆಯ ದಿನ ಶಿಲ್ಪಿಯ ಶಾಲೆಗೆ ಬಂದ ಶಿವನು ಬೇರೆಯ ರೂಪವನ್ನು ಧರಿಸುತ್ತಾನೆ. ನಿನ್ನೆ ತಯಾರಿಸಿದ ಶಿಲ್ಪ ತೋರಿಸು ಎಂದಾಗ ಶಿಲ್ಪಿಯು ಶಿಲ್ಪವನ್ನು ತೋರಿಸುತ್ತಾನೆ. ಶಿಲ್ಪಕ್ಕೂ ತನ್ನ ರೂಪಕ್ಕೂ ಹೊಂದಾಣಿಕೆ ಇಲ್ಲವೆಂದು ಶಿವನು ತಂಟೆ ತೆಗೆಯುತ್ತಾನೆ. ಶಿಲ್ಪಿಯು 'ನಾಳೆ ಬನ್ನಿ ಶಿಲ್ಪವನ್ನು ಸರಿಪಡಿಸುತ್ತೇನೆ' ಎಂದು ತಿಳಿಸುತ್ತಾನೆ. ಮರಳಿ ಮಾರನೇ ದಿನಕ್ಕೆ ಬರುವ ಶಿವನು ಇನ್ನೊಂದು ರೂಪವನ್ನು ಧರಿಸುತ್ತಾನೆ. ಅಂದೂ ಸಹಾ ಶಿಲ್ಪಕ್ಕೂ ಶಿವನ ಆಕಾರಕ್ಕೂ ಹೊಂದಾಣಿಕೆ ಆಗುವುದಿಲ್ಲ. ಹೀಗೆ ನಾಲ್ಕೈದು ದಿನಗಳು ನಡೆಯುತ್ತವೆ. ಕೊನೆಗೆ ರೋಸಿಹೋದ ಶಿಲ್ಪಿಯ ಹೆಂಡತಿಯು ಉಪಾಯವೊಂದನ್ನು ರೂಪಿಸಿ ನಾಲ್ಕು ಮಗ್ಗುಲಿಗೂ ಕನ್ನಡಿ ಇಡುತ್ತಾನೆ. ಶಿವನು ಮರಳಿ ಬಂದು ತನ್ನ ಶಿಲ್ಪವೆಲ್ಲಿಂದು ಪ್ರಶ್ನಿಸಿದಾಗ ಒಂದು ಕನ್ನಡಿಯ ಬಳಿಗೆ ಅವನನ್ನು ಕೊಂಡೊಯ್ಯುತ್ತಾನೆ. ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದ ಶಿವನು ಈ ರೂಪ ತನ್ನದಲ್ಲವೆಂದು ತಕರಾರು ತೆಗೆಯುತ್ತಾ ರೂಪ ಬದಲಾಯಿಸಿಕೊಳ್ಳುತ್ತಾನೆ. ಆಗ ಇನ್ನೊಂದು ಕನ್ನಡಿಯ ಎದುರಿಗೆ ಅವನನ್ನು ಕರೆದುಕೊಂಡು ಹೋಗುತ್ತಾನೆ. ಅಲ್ಲಿಯೂ ತಕರಾರು ತೆಗೆಯುವ ಶಿವನು ಹೀಗೆಯೇ ನಿರಂತರವಾಗಿ ರೂಪವನ್ನು ಬದಲಾಯಿಸಿಕೊಳ್ಳುತ್ತ ಶಿಲ್ಪಿಯನ್ನು ಮೈಮರೆಸಲು ನೋಡುವ ಶಿವನಿಗೆ ಕನ್ನಡಿ ತೋರಿಸಿ ಬಾಯಿ ಮುಚ್ಚಿಸುತ್ತಾನೆ. ಶಿಲ್ಪಿಯ ಚಾಣಾಕ್ಷತೆಗೆ ಮೆಚ್ಚಿದ ಶಿವನು ಅವನ ವಿದ್ಯೆ ಅವನಲ್ಲಿಯೇ ಉಳಿಯಲೆಂದು ಆಶೀರ್ವದಿಸಿ ತನ್ನ ನಿಜಸ್ವರೂಪ ತೋರಿಸಿ ಮಾಯವಾಗುತ್ತಾನೆ. ಶಿವ ವಿವಿಧ ನೆಲೆಯಲ್ಲಿ ಶಿಲ್ಪಿಯ ಕೆಲಸದ ಶ್ರದ್ಧೆ ಹಾಗೂ ನಿಷ್ಠೆಯನ್ನು ಪರೀಕ್ಷಿಸುವ ಸಂಗತಿಯನ್ನಿಲ್ಲಿ ಕಾಣುತ್ತೇವೆ.

### ೨.೩. ಸಾಮಾಜಿಕ ಮತ್ತು ಮಾನವಶಾಸ್ತ್ರೀಯ ನೆಲೆಗಳು

ಇದುವರೆಗೂ ಪುರಾಣ ಮತ್ತು ದಾರ್ಶನಿಕ ಆಕಾರಗಳನ್ನು ಆದರ್ಶಿಸಿ ಪಾಂಚಾಳರ ಸಮುದಾಯದ ಉಗಮ ಮತ್ತು ವಿಕಾಸವನ್ನು ಗಮನಿಸಿದರೆ ಇಲ್ಲಿ ವೃತ್ತಿ ಮತ್ತು ಸಾಮಾಜಿಕವಾದಂತಹ ಮಾನವಶಾಸ್ತ್ರ ಪರಿಣತಿಯ ನೆಲೆಗಳಿಂದ ವಿಶ್ವಕರ್ಮ ಪಾಂಚಾಳ ಉಗಮ ಮತ್ತು ವಿಕಾಸವನ್ನು ಚರ್ಚಿಸಲಾಗುತ್ತದೆ. ಬಹುಮುಖ್ಯವಾಗಿ ವೃತ್ತಿ ಆಧಾರಿತ ವಾಸ್ತವ ನೆಲೆಗಟ್ಟಿನಲ್ಲಿ ಪಾಂಚಾಳರ ವಿಕಾಸವನ್ನು ಚರ್ಚಿಸಲಾಗಿದೆ. ಪಂಚ ಬ್ರಾಹ್ಮಣರಾದ ಮನು, ಮಯ, ತ್ವಷ್ಟ, ಶಿಲ್ಪ, ತಕ್ಷ ಇವರ ಸಂತತಿಯನ್ನು 'ಪಾಂಚಾಳರು' ಎಂದು ಕರೆಯಲಾಗಿದೆ. ವಿಶ್ವಕರ್ಮನು ಪಂಚಶಿರಸುಕನಾದರಿಂದ ಆತನ ಮಕ್ಕಳಾದ

ಇವರನ್ನು ಪಾಂಚಾಳರೆಂದು ಕರೆಯಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಪಾಂಚಾಳ ಪದದ ಬದಲಿಗೆ ಅದಕ್ಕೆ ಸಮಾನಂತರವಾಗಿ ವಿಶ್ವಕರ್ಮ ಮತ್ತು ವಿಶ್ವಬ್ರಾಹ್ಮಣ ಎನ್ನುವ ಪದ ಬಳಕೆಯಾಗುತ್ತವೆ.

ಸಾಮಾನ್ಯವಾಗಿ ಮಹಾರಾಷ್ಟ್ರ, ಗುಜರಾತ್, ಆಂಧ್ರ ದ್ರಾವಿಡ ದೇಶಗಳಲ್ಲಿ ಮತ್ತು ವಿಶೇಷವಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಪಾಂಚಾಳ ಅಥವಾ ಪಾಂಚಾಳರು ಎಂದೇ ಈ ವೃತ್ತಿಯನ್ನು ಗುರುತಿಸಲಾಗುತ್ತದೆ. ಬಹುಮುಖ್ಯವಾಗಿ ವೃತ್ತಿ ಮೂಲವಾಗಿ ಪಾಂಚಾಳರೆಂದು ಕರೆಯಲಾಗುತ್ತದೆ. ಹೀಗೆ ಹೆಚ್ಚು ಶ್ರಮಪ್ರಧಾನವಾದ ಭೌಗೋಳಿಕ ಪರಿಸರದಲ್ಲಿ ಪಾಂಚಾಳ ಪದವು ಜಾತಿ ಸೂಚಕವಾಗಿ ಬಳಕೆಯಲ್ಲಿದ್ದರೆ(ವಿಶೇಷವಾಗಿ ದಕ್ಷಿಣ ಕರ್ನಾಟಕ ಕರಾವಳಿ) ವಿಶ್ವಕರ್ಮ, ವಿಶ್ವಬ್ರಾಹ್ಮಣ ಎಂದು ಈ ಸಮುದಾಯವನ್ನು ಗುರುತಿಸಲಾಗುತ್ತದೆ. ಆದ್ದರಿಂದ ವಿಶ್ವಕರ್ಮ ಸಮಾಜ ಎನ್ನುವ ವ್ಯಾಪಕ ಸಂಘವು ಮಂತ್ರವಾಗಿ ಸಂಸ್ಕೃತೀಕರಣ ಸೆಳೆತವಾಗಿ ಈ ಪದ ಸಮುಚ್ಚಯವು ಬಳಕೆಯಾಗುತ್ತವೆ. ಪಾಂಚಾಳ ಎನ್ನುವ ಪದವು ಇಂದು ಕೀಳರಿಮೆಯ ಪರಿಕಲ್ಪನೆಯಾಗಿ ವಿಶ್ವಕರ್ಮ ಎನ್ನುವ ಪದವು ಮೇಲ್ಮುಖ ಚಲನೆಯ ಪ್ರಗತಿ ಮತ್ತು ಪ್ರತಿಷ್ಠೆಯ ಸಂಕೇತವಾಗಿ ಬಳಕೆಯಾಗುತ್ತದೆ.[೯]

ಪಾಂಚಾಳರ ಪ್ರತಿನಿಧಿಯನ್ನು ಮತ್ತು ಅವರ ಕಾಲದ ಮೂಲ ವಿನ್ಯಾಸವನ್ನು ಎರಡು ನೆಲೆಯಲ್ಲಿ ಚರ್ಚಿಸಿದ್ದು ಕಂಡುಬರುತ್ತದೆ. ೧. ಬ್ರಾಹ್ಮಣ ಗೋತ್ರ ವಾಚಿಯಾಗಿ ಆದರ್ಶ ನೆಲೆಯಲ್ಲಿ ವಿವರಿಸಿದ್ದಾರೆ. ೨. ಮಾನವ ಚರಿತ್ರೆಯ ಬೆಳವಣಿಗೆಯ ಮೂಲವಾಗಿ ಗುರುತಿಸಲಾಗಿದೆ.

ಡಾ. ಶಂಬಾ ಜೋಶಿಯವರು ಮತ್ತು ಜೀವಣ್ಣ ಮಸಳಿಯವರು ಪಾಂಚಾಳರ ಹುಟ್ಟು ಮತ್ತು ಬೆಳವಣಿಯನ್ನು ವಿಶಿಷ್ಟ ರೀತಿಯಲ್ಲಿ ಗುರುತಿಸುತ್ತಾರೆ. ಇವರು ಬಹುಮುಖ್ಯವಾಗಿ ಅಂಡಿ ಭೂತದ ಮೂಲಕ ಪಾಂಚಾಳ ಪದ ಬಳಕೆಯಾಗಿವೆ 'ಅಣ್ಣ-ಅನ್ನು ಎಂಬ ಸಮುದಾಯ ಪಂಚ ಉದ್ಯೋಗ ಮಾಡುತ್ತಿದ್ದು ಇವರನ್ನು ಪಾಂಚಾನ್ಡು-ಪಾಂಚಾನ್ನು-ಪಾಂಚಾನ-ಪಾಂಚಾಳ ಎಂದು ಕರೆಯುತ್ತಾರೆ. ಆಂಧ್ರ ಪ್ರದೇಶದಲ್ಲಿ ಈಗಲೂ ಪಾಂಚಾಳರಿಗೆ ಪಾಂಚಾನ್ನರೆಂದೇ ಕರೆಯುತ್ತಾರೆ. ೧೦ ಸಾವಿರ ವರ್ಷಗಳ ಹಿಂದೆ ಪಂಜಾಬಿ ಪ್ರದೇಶದಲ್ಲಿ ನೆಲೆಸಿದ ಸುಸಂಸ್ಕೃತ ಸಮುದಾಯ ಇದಾಗಿತ್ತು. ಇವರು ಅಂಡಿ ಭೂತವನ್ನು ಆದಿಶಕ್ತಿಯನ್ನು ಆನೆ, ಆಂಡಿ ಎಂದು ಆದಿ ಪುರುಷರೆಂದು ಪೂಜಿಸುತ್ತಿದ್ದರು.[೧೦]

ಅಂನ್ಡ-ಅಣ್ಣ-+ಅಂಡ=ಅನ್ವಂಡ-ಆನಂದ-ಆನಂತ-ಆನಂತ-ಅಂದರೆ ಆದಿ ಅಂತ್ಯ ಇಲ್ಲದವನು ಅನಂತನಾದವನು. ಅಂದರೆ ವೇದರ್ಷಿಗಳ ಪ್ರಕಾರ ವಿಶ್ವಕರ್ಮನು ಆದಿ ಅಂತ್ಯ ಇಲ್ಲದವನು. ಹೀಗಾಗಿ ಪಾಂಚಾಳರನ್ನು ಈ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದೆ.

ಅರನ್ವಾಂಡ ಅಥವಾ ಪಾಂಚಾಂನ್ಡ ಜನಾಂಗದಲ್ಲಿ ಕೆಲವು ಆರ್ಯಾವರ್ತಕರು, ಕೆಲವರು ಕಾಶ್ಮೀರವನ್ನು ದಾಟಿ ಚೀನಾ ದಾಟಿ ಹೋಗಿ ನೆಲೆ ನಿಂತರು. ಇವರಿಗೆ ಚೀನಿ ಭಾಷೆಯಲ್ಲಿ 'ಶೇಷಣ್ಣುಗಳೆಂದು ಕರೆಯುತ್ತಿದ್ದರು. 'ಶೇಷಣ್ಣ ಶೇಷ್ಣ(ನ.ಲೋಪವಾಗಿ) 'ಶೇಷ' ಎಂಬ ಪದವಾಯಿತು. ಈ ಶೇಷ ಶಬ್ದಗಳು ಹಿಂದುಗಳು ಅನಂತ ಶಬ್ದಕ್ಕೆ ಪರ್ಯಾಯ ಪದಕ್ಕೆ ಬಳಸಿದರು. ಅನಂತ ಮತ್ತು ಶೇಷ ಒಂದೇ ಅರ್ಥದಲ್ಲಿ ಬಳಸತೊಡಗಿದರು. ಯಾವ ಪಾಂಚಾಳರು ಅನಂತನನ್ನು ತಮ್ಮ ಆರಾಧ್ಯ

ದೈವವನ್ನಾಗಿ ಮಾಡಿಕೊಂಡಿದ್ದರೋ ಅವನೇ ಮುಂದೆ ಪಾಂಚಾಳನಾದನು. ಪಂಚಮುಖದ ಪಾಂಚಾಳನನ್ನೇ ವಿಶ್ವಕರ್ಮ ಎಂಬ ಹೆಸರಿಂದ ಕರೆಯಲ್ಪಟ್ಟರು. ಸದ್ಯೋಜಾತ, ವಾಮದೇವ, ಅಘೋರ, ತತ್ವಪುರುಷ, ಈಶಾನ್ಯ ಎಂದು ವಿಶ್ವಕರ್ಮನಿಗೆ ಐದು ಮುಖಗಳು. ಈ ಐದು ಮುಖಗಳಿಗೆ ಮನು(ಶಿವ), ಮಯ(ವಿಷ್ಣು), ಶಿಲ್ಪಿ(ಇಂದ್ರ), ವಿಶ್ವಜ್ಞ(ಆದಿತ್ಯ) ಎನ್ನುವ ಐದು ಜನ ಋಷಿಗಳು ಹುಟ್ಟಿದರು. ಶಿವ ತ್ವಷ್ಟ(ಬ್ರಹ್ಮ) ವಿಷ್ಣು, ಬ್ರಹ್ಮ, ಇಂದ್ರ, ಆದಿತ್ಯ ಇವರು ವಿಶ್ವಕರ್ಮ ಪರಮಾತ್ಮನ ಆದಿ ದೇವತೆಗಳಾದರು. ಈ ಒಬ್ಬರ ಹೆಸರು ವಿಶ್ವಕರ್ಮನ ಪರ್ಯಾಯ ಪದಗಳಾಗಿರುತ್ತಾರೆ. ಅನಂತ ವಿಶ್ವಕರ್ಮ, ಪಾಂಚಣ್ಣ, ವಿಷ್ಣು, ನಾಗ ಈ ಎಲ್ಲ ಪದಗಳು ಸಮಾನಾರ್ಥದಲ್ಲಿ ಪ್ರಯೋಗವಾಗುತ್ತ ಬಂದವು. ಶಿವನಿಗೂ ನಾಗಭರಣ ಅನಂತ ಎನ್ನುವರು. ವಿಷ್ಣುನಿಗೂ ಅನಂತ (ಆನಂದಸೇನೆ) ಎಂದು ಬಳಸಿದರು. ಈ ಅರ್ಥದಲ್ಲಿ ವಿಶ್ವಕರ್ಮರನ್ನು ನಾಗವಂಶದ ಬ್ರಾಹ್ಮಣರೆಂದು ಜೀವಣ್ಣ ಮಸಳಿಯವರು ಅಭಿಪ್ರಾಯ ಪಡುತ್ತಾರೆ.[೧೧]

ಸ್ಕಂದ ಮಹಾಪುರಾಣ ಪ್ರಕಾರ ನಾಗಬ್ರಹ್ಮಣರಲ್ಲಿ ಅಷ್ಟ ಎಂಬ ಹೆಸರಿನ ಎಂಟು ಕುಲದಲ್ಲಿ ಜನಿಸಿದ ಬ್ರಾಹ್ಮಣರು ಇತರ ಎಲ್ಲ ಬ್ರಾಹ್ಮಣರಗಿಂತ ಶ್ರೇಷ್ಠರು, ಬ್ರಹ್ಮಸ್ಥಾನ ಬ್ರಾಹ್ಮಣರಲ್ಲಿ ಅಷ್ಟ ಕುಲದ ಬ್ರಾಹ್ಮಣರು ಶ್ರೇಷ್ಠರು.[೧೨] ಶಂಕರ ಮೊಕಾಶಿ ಪುಣೇಕರ್ ಅವರು ತಮ್ಮ ಅವಧೇಶ್ವರಿ ಕಾದಂಬರಿಯಲ್ಲಿ ವಿಶ್ವಕರ್ಮರನ್ನು ನಾಗವಂಶದ ಬ್ರಾಹ್ಮಣರೆಂದು ಗುರುತಿಸುತ್ತಾರೆ. ಇವರು ಆಯೋಧ್ಯೆಯ ಉತ್ತರ ಮತ್ತು ಆಸು ಪಾಸಿನಲ್ಲಿ ವಾಸಿಸುತ್ತಿದ್ದರು ಎಂದು ಹೇಳುತ್ತಾರೆ.[೧೩] ಪಾಂಚಾಳರು ಆರ್ಯರಿಗಿಂತ ಮೊದಲು ಭಾರತದ ಸಿಂಧೂಕೊಳ್ಳದ ಪರಿಸರದಲ್ಲಿ ನೆಲೆಸಿದ್ದರು ಎಂಬುದನ್ನು ಶಂಬಾಜೋಶಿಯವರು ಹೇಳುತ್ತಾರೆ.

ಈ ರೀತಿ ಪಾಂಚಾಣ್ಣುಗಳ ಸಂಸ್ಕೃತಿ ವಿಜ್ಞಾನ ಸಂಸ್ಕೃತಿಗಳೊಂದಿಗೆ ಸಂಬಂಧ ಬಳಸಿಕೊಂಡು ಪಂಚಭೂತ ಜಾತಿಯವರಿಂದ ರೂಪಗೊಂಡ ತಕ್ಷ-ತಸ್ಸು ಎನ್ನುವರು ಕೂರುಖೂ ಎಂಬ ಉತ್ತರ ಕೂರುಜನ ಏಷ್ಯ ಖಂಡದ ಪಶ್ಚಿಮ ಭಾಗದಲ್ಲಿರುವರು. ಇವರನ್ನು ದಯ್ಯವು ಎಂದು ಕೂಡ ಕರೆಯುತ್ತಾರೆ. ಪಾಂಚಾಣ್ಣುಗಳನ್ನು ಸಪ್ತ ಸಿಂಧು ಪ್ರದೇಶದಲ್ಲಿ ಮೊದಲ ಬಾರಿಗೆ ತಖ್ಯರೊಂದಿಗೆ ಐಕ್ಯರಾದ ನಂತರವೆ ಇವರ ಪಂಚ ಶಿಲ್ಪಿಗಳನ್ನು ವೇದಗಳಲ್ಲಿ ಉಲ್ಲೇಖಿಸಲಾಯಿತು. ಈ ವೈದಿಕ ಯುಗದಲ್ಲಿ ಬೆಳೆದ ಕುರು-ಪಾಂಚಾಲ ವಿಭೇದಗಳು ಆರ್ಯ ಸಂಸ್ಕಾರಯುತ ಕುರುಶಾಖೆಯವರಲ್ಲಿ ಕುಲಮದವನ್ನು ಹುಟ್ಟು ಹಾಕಿದವು. ಈ ಕುಲಮದ ತನ್ನ ಸೋದರ ಕುಲದವರನ್ನೇ ಉಪೇಕ್ಷಿಸುವ ಮಟ್ಟಕ್ಕೆ ಬೆಳೆಯಿತು. ಚಾತುವರ್ಣ ಪ್ರತಿಪಾದಕ ಸಂದರ್ಭಕ್ಕಿಂತ ಮೊದಲು ಮುಕ್ತವಾಗಿದ್ದ ಪಾಂಚಾಳರು ವೇದಗಳಲ್ಲಿಯೇ ಪಂಚ ಜನರಾಗಿ, ಪುರುಗಳು ದ್ರಾಹ್ಯುಳಗಳು ತುರ್ವಸರು, ಅಣುಗಳಿಂದಾಗಿ ಪರಿಗಣಿತವಾಗುವಂತಾಯಿತು.[೧೪]

ಒಟ್ಟು ಚರ್ಚೆ ಎಂದರೆ, ಗ್ರಹಿತವಾದ ಎಂದರೆ 'ಪಾಂಚಾಳ' ಎನ್ನುವ ಜನ ವರ್ಗ ವೇದಕಾಲ ಮತ್ತು ಆದಿಕಾಲದಿಂದಲೂ ಪಂಚವೃತ್ತಿಗಳಲ್ಲಿ ನಿರತವಾಗಿ ವಿವಿಧ ಜನವರ್ಗಗಳ ಸಂಪರ್ಕದಿಂದ

ಚಲನಶೀಲವಾಗುತ್ತ ಭೇದಮುಕ್ತ ಸ್ಥಿತಿಯಲ್ಲಿ ಬದುಕುತ್ತಿತ್ತು. ಇಂತಹ ಸಮುದಾಯಪ್ರಜ್ಞೆಯ ಬದುಕನ್ನು ವೈದಿಕ ಯುಗದಲ್ಲಿ ಶ್ರೇಣೀಕರಣಕ್ಕೆ ಒಳಪಡಿಸಲಾಯಿತು. ಅಷ್ಟೇ ಅಲ್ಲದೆ ಪಾಂಚಾಳ ಸಮುದಾಯ ಮತ್ತು ಶಬ್ದವನ್ನು ವೈದಿಕೀಕರಣದ ನೆಲೆಯಿಂದ ನಿರ್ವಚಿಸಲಾಯಿತು. ಆಶ್ವಲಾಯನ ಅಗ್ನಿ ಶರ್ಮಾಯೇಣಃ ಬ್ರಾಹ್ಮಣ॥

ಗೋತ್ರ ವಾಚೀ ಸತ್ಯ ಪಾಂಚಾಲಾಂಯೇನಃ ಕ್ಷತ್ರಿಯವಾಚಿನಸ್ತು ಬ್ರಾಹ್ಮಣ-ಶಬ್ದಕ್ಕೆ ಪರ್ಯಾಯವಾಗಿ ಪಾಂಚಾಳ ಪದವನ್ನು ಇಲ್ಲಿ ಬಳಸಲಾಗಿದೆ. ಬ್ರಾಹ್ಮಣ್ಯವನ್ನು ಎರಡು ರೀತಿಯಲ್ಲಿ ನಿರ್ವಹಿಸಲಾಗುತ್ತದೆ. ವಶಿಷ್ಠಾದಿ ಗೋತ್ರಗಳಿಂದ ಬೆಳೆದುಬಂದಿರುವ ಬ್ರಾಹ್ಮಣ ಶಾಖ್ಯೆಯು ಆಶ್ಚರ್ಯವೆಂದು ವಿರಾಟ ಪುರುಷನಾಗಿರುವ ವಿಶ್ವಕರ್ಮನ ಮುಖದಿಂದ ಹುಟ್ಟಿ ಯಜನ, ಯಾಜನದಿಗಳೊಂದಿಗೆ ವೈದಿಕ ಮತ್ತು ಲೌಕಿಕ ಶಿಲ್ಪ ವಿದ್ಯೆಗಳನ್ನು ಅಭ್ಯಸಿಸಿ ಲೋಕೋಪಕಾರ ಮಾಡುತ್ತಿರುವ ಸಾನಗಾದಿ ಶಿಲ್ಪಋಷಿಗಳ ಗೋತ್ರದವರನ್ನು ಪೌರುಷರು ಎಂದು ಕರೆಯಲಾಗುತ್ತದೆ.

ಪಂಚಭಾಃ ಆಯೋದಾರು ತಾಮ್ರ ಶಿಲಾ ಸ್ವರ್ಣ ಮಯ್ಯ 'ಶಿಲ್ಪೈಃ ಲೋಕಂ ಅಲಂಕುರ್ವಂತೇತಿ ಪಂಚಾಲಾಃ ಎಂದರೆ ಕಬ್ಬಿಣ, ಮರ, ತಾಮ್ರ, ಶಿಲೆ, ಬಂಗಾರ ಎನ್ನುವ ಐದು ರೀತಿಯ ಕೆಲಸ ಮಾಡುವವರು ಹಾಗೂ ಲೋಕತ್ರೈಯ ಸಂಬಂಧವುಳ್ಳ ಭಾವಗಳನ್ನು ವ್ಯಕ್ತಪಡಿಸುವರು ಪಾಂಚಾಳರು. ಹೀಗೆ ಪರಮೇಶ್ವರ ಪಂಚಮುಖದಿಂದ ಈ ಪಂಚಬ್ರಾಹ್ಮಣರನ್ನು ಪಂಚ ಬ್ರಹ್ಮರ ಸಂತತಿಯರೇ ಪಾಂಚಾಳರು.[೧೫]

ವಿಶ್ವಕರ್ಮ ಮತ್ತು ಪಾಂಚಾಲ ಪದಗಳು ಕೇವಲ ಜಾತಿ ಸೂಚಿಸದೆ ಸಮುದಾಯ ಮತ್ತು ಸಮಷ್ಟಿ ಪ್ರಜ್ಞೆಯನ್ನಾಗಿ ವಿವರಿಸಿಕೊಳ್ಳುವುದು ಹೆಚ್ಚು ಔಚಿತ್ಯಪೂರ್ಣ ಎನ್ನಿಸುತ್ತದೆ. ವಿಶ್ವಕರ್ಮ ಮತ್ತು ಪಾಂಚಾಲ ಪದವು ಸೃಷ್ಟಿಶೀಲ ಪರಿಕಲ್ಪನೆಗಳು. ವಿಶ್ವಕರ್ಮ ಎಂಬುದು ಸೃಷ್ಟಿತತ್ವವನ್ನು ಒಳಗೊಂಡ ಅನಂತರದ ಪರಿಕಲ್ಪನೆಯಾಗಿದೆ. ಪಾಂಚಾಳರು ಲೋಕಕಾರ್ಯಕ್ಕಾಗಿ ವಿಶ್ವಕರ್ಮನಿಂದ ನೇಮಿಸಲ್ಪಟ್ಟವರು. ಇವರು ವಿಶ್ವಕರ್ಮ ಪರಬ್ರಹ್ಮಶಿವ, ಶಿವನಿಗೆ ಪಾಂಚಾಲನೆಂಬ ಹೆಸರಿದೆ. ಶಿವ ಎಲ್ಲ ದ್ರಾವಿಡ ಸಮುದಾಯಗಳ ಆದಿದೈವ. ಎಲ್ಲ ಶ್ರಮ ಸಮುದಾಯಗಳ ಶಿವ ಅಥವಾ ರುದ್ರ ರೂಪದಿಂದಲೇ ತನ್ನ ಚರಿತ್ರೆಯನ್ನು ಕಟ್ಟಿಕೊಳ್ಳುತ್ತವೆ.

ಪಾಂಚಾಳ ಅಥವಾ ವಿಶ್ವಕರ್ಮ ಎನ್ನುವ ಕುಲವಾಚಿ ಪದ ಸಮುಚ್ಚಯಗಳು ವೇದ-ಆಗಮ ಪುರಾಣಗಳ ಒಡಲಿನಿಂದ ನಿರ್ವಹಿಸಿಕೊಳ್ಳದೆ ಸಮುದಾಯದ ಸೃಜನಶೀಲ ನೆಲೆಗಳಿಂದ ನಿರ್ವಚಿಸುವ ಅಗತ್ಯವಿದೆ. ಪಾಂಚಾಳ ಪದವು ವೃತ್ತಿಮೂಲವಾದ ಸಹಜ ಬದುಕಿನ ಅನನ್ಯತೆಯನ್ನು ಸೂಚಿಸಿದರೆ ವಿಶ್ವಕರ್ಮ ಪದವು ಸಂಸ್ಕೃತೀಕರಣ ಪ್ರಧಾನವಾದ ಏಕಘನಾಕೃತಿಯನ್ನು ಕಟ್ಟಿಕೊಳ್ಳುತ್ತದೆ. ಪಾಂಚಾಳ ಪದದಲ್ಲಿರುವ ವೃತ್ತಿ ಮೂಲ ವೈವಿಧ್ಯತೆ ಮತ್ತು ಕ್ರಿಯಾಶೀಲತೆ ಸಶಕ್ತಿಯುತವಾದುದು. ಪಾಂಚಾಳ ಸಮುದಾಯವು ಅದೊಂದು ಪ್ರಯೋಗಶೀಲ ಸಮುದಾಯ ಎಂಬುದು ಮುಖ್ಯವಾದ ವಿಚಾರ.

ಕನ್ನಡದ ಬಹಳಷ್ಟು ಶಾಸನಗಳು ಪಾಂಚಾಳರನ್ನು ಕಮ್ಮಾರ, ಬಡಗಿ, ಅಕ್ಕಸಾಲಿ, ಕಂಚುಗಾರ, ಶಿಲ್ಪಿ ಎಂದು ವೃತ್ತಿವಾಚಕವಾಗಿಯೇ ಅವರನ್ನು ಹೆಸರಿಸುತ್ತಾರೆ. ಕನ್ನಡದ ಪ್ರಮುಖ ಕೃತಿಗಳಾದ

ವಡ್ಡಾರಾಧನೆ, ಪಂಪಭಾರತ, ಗದಾಯುದ್ಧ ಧರ್ಮಾಮೃತ, ಮಾನಸೋಲ್ಲಾಸ, ಸಮರಾಂಗಣ ಸೂತ್ರಧಾರ, ಕಬ್ಬಿಗರ ಕಾವ, ಶಿವತತ್ವರತ್ನಾಕರ, ವೀರಶೈವ, ಕುಮಾರವ್ಯಾಸ, ಮಹಾಭಾರತ ಅಷ್ಟೇ ಅಲ್ಲದೆ ವಚನಕಾರರು, ದಾಸರು ಮತ್ತು ತತ್ವಪದಕಾರರು ಪಾಂಚಾಳರನ್ನು ಮತ್ತು ಅವರ ವೃತ್ತಿಯ ಹಿನ್ನೆಲೆಯನ್ನು ಗುರುತಿಸುವುದು ಪ್ರಮುಖವಾಗಿ ಕಂಡುಬರುತ್ತದೆ. ಮುಂದಿನ ಅಧ್ಯಾಯಗಳಲ್ಲಿ ಈ ಕುರಿತು ಚರ್ಚಿಸಲಾಗುತ್ತದೆ.

**ಅಡಿಟಿಪ್ಪಣಿ**

೧. ಡಾ. ಶಂಬಾಜೋಶಿ, ವಿಶ್ವಕರ್ಮ ದರ್ಶನ; ಮಲ್ಲೇಪುರಂ ಜಿ. ವೆಂಕಟೇಶ, ಪು.೭, ೨೦೧೭

೨. ಉದ್ಧೃತ: ಚಂದ್ರಪ್ರಭಾ ಎಸ್.ಕೆ.ಜೋಶಿ, ಪು.೯, ೨೦೦೩.

೩. ಅಥರ್ವಣವೇದ, ೧೮-೬ ಮತ್ತು ೭೮-೩.

೪. ತಾಂಡವಾಚಾರ್ಯ, ಪು.೨೨, ೧೯೯೦

೫. ಶುಭಕರಾಚಾರಿ, ಕಮ್ಮಾರರ ಬದುಕಿನ ಸ್ಥಿತ್ಯಂತರಗಳು, ಪು.೬೮, ೨೦೧೫.

೬. ಭೀಮಸೇನ ಬಡಿಗೇರ, ಸ್ವಯಂಭು ವಿಶ್ವಕರ್ಮ ದೇವಶಿಲ್ಪಿ, ವಿಶ್ವಕರ್ಮ, ಪು.೪೦, ೪೧, ೨೦೧೭.

೭. ಅದೇ, ಪು.೩೯, ೨೦೧೭.

೮. ಅದೇ, ಪು.೮೬, ೨೦೧೭.

೯. ಡಾ.ವೀರೇಶ ಬಡಿಗೇರ, ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಒಂದು ಅನುಸಂಧಾನ.

೧೦. ಜೀವಣ್ಣ ಮಸಳಿ, ನಾಗವಂಶ ಅವಧೇಶ್ವರಿ ವಿಮರ್ಶೆ, ಪು.೧೭, ೧೯೯೭.

೧೧. ಅದೇ, ಪು.೧೮, ೧೯೯೭.

೧೨. ಶ್ರೀ ಪಂಡಿತನಾಥಚಾರ್ಯ ಗಲಗಲಿ ಸಂ.ಪು.೧೦೨, ೧೯೯೭

೧೩. ಅದೇ, ಪು.೨೪, ೨೫, ೧೯೯೭.

೧೪. ಡಾ.ವೀರೇಶ ಬಡಿಗೇರ, ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಒಂದು ಅನುಸಂಧಾನ, ಚಂದ್ರಪ್ರಭಾ, ಪು.೬೭, ೨೦೦೫.

೧೫. ಅದೇ, ಪು.೧೬೭, ೨೦೦೫.

ಅಧ್ಯಾಯ ೩

# ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ನಿರ್ವಚನ

ಪ್ರಾಚೀನ ಭಾರತೀಯ ಹಾಗೂ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ವೇದ ಉಪನಿಷತ್ತು ಸ್ಮೃತಿಗಳಲ್ಲಿ ಪಾಂಚಾಳರ ಕುರಿತು ಅಲ್ಲಲ್ಲಿ ಪ್ರಾಸಂಗಿಕವಾಗಿ ಪ್ರಾತಿನಿಧಿಕವಾಗಿ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ. ಮನುಸ್ಮೃತಿಯಲ್ಲಿ ಪಾಂಚಾಳ ಪದವನ್ನು 'ಪಂಚಾಲಾ' ವಿಶ್ವಕರ್ಮ ಕುಲೋತ್ಪನ್ನ: ಬ್ರಾಹ್ಮಣ ಜಾತಿಯ ಶಿಲ್ಪಿ ವಿಶೇಷ ಇತ್ಯರ್ಥ ಎಂದು ವರ್ಣಿಸಲಾಗಿದೆ. ಜಗತ್ತಿನ ಆಗುಹೋಗುಗಳು ಯಾರ್‍ಯಾರಿಂದ ಆಗುವವೋ ಅವನೇ ವಿಶ್ವಕರ್ಮನು ತನ್ನ ಸಂಕಲ್ಪಮಾತ್ರದಿಂದಲೇ ಸಕಲವನ್ನು ಸೃಷ್ಟಿಸಿದವನು. ವಿಶ್ವಕರ್ಮನಿಗೆ ಐದು ಜನ ಮಕ್ಕಳು. ಅವರೇ ಮನು, ಮಯ, ತ್ವಷ್ಟ, ಶಿಲ್ಪಿ, ದೈವಜ್ಞ, ಇವರನ್ನೇ ಅನುಕ್ರಮವಾಗಿ ಕಮ್ಮಾರ, ಬಡಗಿ, ಅಕ್ಕಸಾಲಿಗ, ಶಿಲ್ಪಿ ಮತ್ತು ಕಂಚುಗಾರ ಎಂದು ವೃತ್ತಿ ಮೂಲವಾಗಿಯೂ ಗುರ್ತಿಸಲಾಗುತ್ತದೆ. ಐದು ವೃತ್ತಿಗಳನ್ನು ಒಟ್ಟಿಗೆ ಸೇರಿಸಿ ಹೇಳುವ ಪದವೇ ಪಾಂಚಾಳರೆಂದಾಗಿದೆ. ಇತ್ತಿಚ್ಚೇಗೆ ವಿಶ್ವಕರ್ಮರು ಎಂದು ಸಾಮುದಾಯಿಕವಾಗಿ ಗುರುತಿಸಿಕೊಳ್ಳುತ್ತಿದ್ದಾರೆ. ಪಾಂಚಾಳರಿಗೆ ಅಥವಾ ವಿಶ್ವಕರ್ಮರಿಗೆ ಸಂಬಂಧಪಟ್ಟ ಅನೇಕ ವಿವರಗಳು ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಮತ್ತು ಕನ್ನಡ ಸಾಹಿತ್ಯ ಕೃತಿಗಳಾದ ಪಂಪನ ಆದಿಪುರಾಣ ಮತ್ತು ಪಂಪಭಾರತ, ರನ್ನನ ಗದಾಯುದ್ದ, ನಯಸೇನನ ಧರ್ಮಾಮೃತ ಕೇಶಿರಾಜನ ಶಬ್ದಮಣಿದರ್ಪಣ, ರಾಜಶೇಖರ ವಿಳಾಸ, ಪ್ರಭುಲಿಂಗಲೀಲೆ, ಸಿದ್ಧರಾಮ ಚಾರಿತ್ರ ಮುಂತಾದ ಸಾಹಿತ್ಯ ಕೃತಿಗಳಲ್ಲಿ ದೊರೆಯುತ್ತವೆ.

**೩.೧. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ**

ಮೂಲಸ್ತಂಭ ಪುರಾಣದಲ್ಲಿ ಹೀಗೆ ಹೇಳಲ್ಪಟ್ಟಿದೆ.

ಪಂಚಕರ್ಮ ವಿಶ್ವಕರ್ಮ ಲೋಕೋಚಾನ್ಯೂನವರ್ತತೆ
ಪಂಚನಾಮಷ ಸೃಷ್ಟೇಶ್ಚ ಕರ್ತಾಭವತಿಕರ್ಮಣಾಂ[೧]

ಪಂಚಕರ್ಮಗಳುಳ್ಳ ಪಂಚ ಬ್ರಹ್ಮಾತ್ಮಕನಾದ ವಿಶ್ವಕರ್ಮನೇ ಪಂಚಕರ್ಮಗಳಿಗೂ ಉಪಸೃಷ್ಟಿಗಳಿಗೂ ಕರ್ತನಾಗುವನೇ ಹೊರತು ಮತ್ಯಾರೂ ಅಲ್ಲ. ಇದನ್ನೇ ಮಹಾತ್ಮರು ದೇವತೆಗಳಿಗೆ ವಿಶ್ವಕರ್ಮ ಹೇಳಿದ ಪರಮೋಪದೇಶವೆಂದು ಹೇಳುವರು.

ವಿಶ್ವಕರ್ಮ ಜಗನ್ನಾಥ: ವಿಶ್ವಕರ್ಮ ಜಗದ್ಗುರು
ವಿಶ್ವಕರ್ಮಾ ಜಗತ್ತೇಜ: ವೈಶ್ವಕರ್ಮಮಿದಂಜಗತ್
ಏವಂ ಶ್ರೀ ವಿಶ್ವಕರ್ಮಾಣಂ[೨]

ಅಂದರೆ ವಿಶ್ವಕರ್ಮನೇ ಜಗತ್ತಿಗೆ ಪ್ರಭುವು ವಿಶ್ವಕರ್ಮನೇ ಜಗತ್ತಿನ ಪ್ರಕಾಶವೂ ಈ ಜಗತ್ತಿಗೆಲ್ಲವು ವಿಶ್ವಕರ್ಮನೇ ಎಂದು ತಿಳಿಸುತ್ತದೆ. ಸ್ಕಂದಪುರಾಣದ ನಾಗರಖಂಡದಲ್ಲಿ 'ಸ್ಥಪತಿ ಸ್ಥಾಪಕತ್ವ ವೇತ್ಯಾಚಾರ್ಯೋ ವಿಶ್ವಕರ್ಮಣ' ಎಂದು ಹೇಳಲಾಗಿದೆ. ಅಂದರೆ ಶಾಸ್ತ್ರದ ಅರ್ಥವನ್ನು ಅರಿತು ಸ್ವತಃ ಆಚರಿಸಿ ಇತರರನ್ನು ಆಚರಣೆಯಲ್ಲಿ ತೊಡಗಿಸುವವನು ಆಚಾರ್ಯ ಎಂದು ತಿಳಿಸುತ್ತದೆ.

**೩.೨. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ**

ಕನ್ನಡ ಸಾಹಿತ್ಯದ ಪ್ರಮುಖ ಕೃತಿಗಳಲ್ಲಿ ಪಾಂಚಾಳರು ಸಂದರ್ಭಾನುಸಾರ ಹಲವು ವಿವಿಧ ಪ್ರಾತಿನಿಧ್ಯವನ್ನು ಪಡೆದುಕೊಂಡದ್ದು ಕಂಡುಬರುತ್ತದೆ. ಓಜ, ಗುರು, ಆಚಾರ್ಯರಾಣಿ, ವೃತ್ತಿಕರಾಗಿ ರತ್ನ ಉತ್ಪಾದನ ಮತ್ತು ವಿನಮಯಕಾರರಾಗಿ ಸ್ಥಪತಿಗಳಾಗಿ ವಿವಿಧ ಲೋಹ ಹಾಗೂ ರತ್ನಶಿಲ್ಪಿಗಳಾಗಿ, ಬಡಗಿಗಳಾಗಿ, ಸುವರ್ಣಕಾರರಾಗಿ, ಆಯುಧ ತಯಾರಕರಾಗಿ, ನಾಣ್ಯ ಟಂಕಿಸುವವರಾಗಿ, ಅಧಿಕಾರಿಗಳಾಗಿ, ಸೈನಿಕರಾಗಿ, ಲಿಪಿಕಾರರಾಗಿ, ಕವಿಗಳಾಗಿ, ಸಮಾಜ ಸುಧಾರಕರಾಗಿ ಹೀಗೆ ಹಲವು ಬಗೆಯ ಕಾರ್ಯ ನಿರ್ವಹಿಸಿದ್ದು ಕಾಣುತ್ತದೆ. ಅಷ್ಟೇ ಅಲ್ಲದೇ ಕವಿಗಳು ಉಪಮೆ ರೂಪಕಗಳನ್ನು ದೃಷ್ಟಾಂತಗಳನ್ನು ನೀಡುವಾಗ ಬಡಗಿ, ಕಮ್ಮಾರ, ಅಕ್ಕಸಾಲಿ, ಕಂಚುಗಾರ ಮತ್ತು ಶಿಲ್ಪಿಗಳ ಕ್ರಿಯಾಶೀಲತೆ ಮತ್ತು ಕಾರ್ಯ ವೈಖರಿಯನ್ನು ಬಳಸಿಕೊಂಡಿದ್ದನ್ನು ಸ್ಪಷ್ಟವಾಗಿ ಗುರುತಿಸಬಹುದು.

**ಓಜ–ಗುರು–ಆಚಾರ್ಯ**

ಭಾರತೀಯ ಶಿಲ್ಪ ಮತ್ತು ಧರ್ಮ ಸಂಪ್ರದಾಯದಲ್ಲಿ ಓಜ ಶಬ್ದವು ವಿವಿಧ ರೂಪ ಮತ್ತು ಅರ್ಥಗಳಲ್ಲಿ ಬಳಕೆಯಾಗಿದೆ. ಓಜ ಶಬ್ದದದ ಮೂಲ **ಓಚ** ಎಂದಾಗಿದ್ದು ಇದರ ಅರ್ಥವು **ಉಪಾಧ್ಯಾಯ, ಗುರು** ಎಂದು ನಿಘಂಟಿನ ಅರ್ಥವಾಗಿದೆ. ಓಜಯಿತ ಎಂಬ ಶಬ್ದಕ್ಕೆ ಶ್ರೇಷ್ಠ ಶಿಲ್ಪಾಚಾರ್ಯ ಎಂಬ ಅರ್ಥವಿದೆ. ಹಾಗೆಯೇ ಓಜಾಯಿಲ' ಶಬ್ದಕ್ಕೆ ಅಕ್ಕಸಾಲಿ ಅಥವಾ ಬಡಗಿ ಎಂಬ ಅರ್ಥವನ್ನು ನೀಡಲಾಗಿದೆ.[೩]

ಸಂಸ್ಕೃತದ ಉಪಾಧ್ಯಾಯ ಶಬ್ದವು ಪ್ರಾಕೃತದಲ್ಲಿ ಉವಜ್ಝಯ, ಉವಚ್ಚಾಯ ಎಂದು ಬದಲಾಗಿ ನಂತರ ಕನ್ನಡದಲ್ಲಿ ಬಳಕೆಗೆ ಬಂದಿದೆ ಎಂಬುದು ತಜ್ಞರ ಅಭಿಪ್ರಾಯ. ಆದರೆ ಈ ಶಬ್ದವನ್ನು ಆಚಾರ್ಯ, ಗುರು ಎಂಬ ಅರ್ಥದಲ್ಲಿ ಮಾತ್ರವೇ ಅಲ್ಲದೆ ಶಿಲ್ಪ, ಬಡಗಿ, ಅಕ್ಕಸಾಲೆ, ಕಮ್ಮಾರ ಎಂಬ ಅರ್ಥದಲ್ಲಿಯೂ ವ್ಯಾಪಕವಾಗಿ ಬಳಸಿರುವುದು ಶಾಸನ ಮತ್ತು ಇತರ ಸಾಹಿತ್ಯ ಕೃತಿಗಳಿಂದ ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಪಾಂಚಾಳರನ್ನು ಓಜರೆಂಬ ಹೆಸರಿನಿಂದ ಶಾಸನಗಳಲ್ಲಿ ಕರೆಯಲಾಗಿದೆ.

**'ಓಜ'** ಎಂಬುದು ಶಿಲ್ಪಿಗಳ ಹೆಸರಿನ ಭಾಗವಾಗಿ ಬಹುಕಾಲದಿಂದಲೂ ರೂಢಿಯಲ್ಲಿರುವುದು ಕನ್ನಡ ಶಾಸನಗಳಿಂದ ಖಚಿತವಾಗುತ್ತದೆ. ೧೦ರಿಂದ **೧೨ನೆಯ ಶತಮಾನದಲ್ಲಿ** ಓಜ ಎಂಬ ಹೆಸರಿನ ನೂರಾರು ಶಿಲ್ಪಿಗಳು ಬಾಳಿ ಹೋಗಿದ್ದಾರೆ. **ಆಂಧ್ರ ಪ್ರದೇಶದಲ್ಲಿ** ಓಜ ಎಂದು ಅಂತ್ಯಗೊಳ್ಳುವ ಅನೇಕ ಮನೆತನಗಳು ಇಂದಿಗೂ ಇವೆ. ಇಲ್ಲೂ ಕೂಡ ಈ ಮೊದಲು ಹೇಳಿದಂತೆ ಗುರು ಆಚಾರ್ಯ ಎಂದೇ ಕರೆಯಲಾಗಿದೆ.

ಓಜಕುಲ, ಓಜಾಯಿತ ಎಂಬ ಜಾತಿವಾಚಕಕ್ಕೆ ಸಮಾನವಾದ ಅರ್ಥದಲ್ಲಿ 'ವಿಶ್ವಕರ್ಮಕುಲ', ವಿಶ್ವಕರ್ಮಕುಲಸ್ತರು, ಪಂಚಕಾರುಕದವರು, ಸಮಸ್ತ ವೀರ ಪಂಚಾಳರು, ಪಂಚಾಳರು, ಎಂದು ಹೇಳಲಾಗಿದೆ. ಮುಂದೆ ಅಕ್ಕಸಾಲಿಗ, ಬಡಗಿಗಳು, ಕಮ್ಮಾರ, ಕಂಚುಗಾರ, ಶಿಲ್ಪಿ ಇವರು ಪಾಂಚಾಳರೆಂದು ಗುರುತಿಸಲಾಗುತ್ತದೆ. ದೇವಸ್ಥಾನದ ಸೊಬಗನ್ನು ವರ್ಣಿಸುವ ಒಂದು ಶಾಸನದಲ್ಲಿ ಆ ದೇವಸ್ಥಾನವು "ಪಾಂಚಾಳಿಕೆ ಕಳ್ತ ಮೇರುಗಿರಿಯೋ ಪೇಳ್" ಎನ್ನುವಂತೆ ಇತ್ತು ಎನ್ನುವ ಉಲ್ಲೇಖವಿದೆ. ಪಾಂಚಾಳರು ದೇವಸ್ಥಾನ ನಿರ್ಮಾಣ, ರೂವಾರಿಗಳಾಗಿ ಕಲಾಕಾರ್ಯಗಳಲ್ಲಿ ತೊಡಗಿದ್ದರು ಎಂದು ಶಾಸನಗಳಿಂದ ತಿಳಿಯುತ್ತದೆ.

ಕ್ರಿ.ಶ ೧೯೯೧ರಲ್ಲಿ **'ಏಚೋಜ'** ಎಂಬ ಶಿಲ್ಪಿಯು ಕಸಬ ತಿಪಟೂರಿಗೆ ಹೋಗುವ ರಸ್ತೆಯ ಬಲದಲ್ಲಿರುವ ಕೆರೆಯ ನಿರ್ಮಾಣ ಮಾಡಿ ಅದರ ತೂಬನ್ನು ನಿಲ್ಲಿಸುತ್ತಾನೆ. ಈತನು ತನ್ನನ್ನು ಪುಲಿಗೆರೆಯ ಏಚೋಜನೆಂದು ಹೇಳಿಕೊಂಡಿದ್ದಾನೆ."

'ಕಲ್ಲೋಜ'ನೆಂಬ ಕೆರೆಯ ತೂಬು ಮಾಡಿದ ಶಿಲ್ಪಿಯನ್ನು ಕೆರೆಯ ಕೆಲಸಕ್ಕೆ" ೧೦ ಗದ್ಯಾಣ ಕೆಸಱುಗಲ್ಲಾದಿಯಾಗಿ ಕಲ್ಲೋಱುರ ಕೆಲಸ "ಎಂಬ ಮಾತು ಬರುತ್ತದೆ. "ಕೆಸಱುಗಲ್ಲು' ಎಂಬ ಮಾತನ್ನು ದೇವಸ್ಥಾನದ ಅಧಿಷ್ಠಾನ ಹಾಕುವ ಕ್ರಿಯೆ ಎಂಬ ಅರ್ಥದಲ್ಲಿ ಹೆಚ್ಚಾಗಿ ಬಳಸಿದ್ದರೂ ಕೂಡ ಕೆರೆಯ ನಿರ್ಮಾಣದ ವಿಷಯವನ್ನು ಕುರಿತ ಈ ಶಾಸನದಲ್ಲಿಯೂ ಇದು ಬಂದಿರುವುದರಿಂದ ಕೆರೆಯನ್ನು ಕೂಡ ಕೆಸರುಕಲ್ಲನ್ನು ಇಟ್ಟು ಪ್ರಾರಂಭಿಸುತ್ತಿದ್ದರು ಎಂದು ತಿಳಿಯಬಹುದಾಗಿದೆ. ಕೆರೆಯ ಕೆಲಸವನ್ನು ಪೂರ್ಣ ನಿರ್ಮಾಣ ಕಾರ್ಯವನ್ನು ಕಲ್ಲೋಜನೇ ಮಾಡಿರುತ್ತಾನೆಂದು ತಿಳಿಯಬಹುದಾಗಿದೆ.[೫]

ಶಿದೋಜ, ಧರಣಪ್ಪ, ಲಿಂಗೋಜು ಬುಕ್ಕರಾಯರು ರಾಜ್ಯಭಾರ ಮಾಡುತ್ತಿರುವಾಗ ಮಲ್ಲದೇವಜೀಯರ ಮಕ್ಕಳಾದ 'ಬಸವೊಜುವಿನ ಮಗ ಶಿದೋಜು" ಎಂಬ 'ಬಡಗಿ'ಯೂ ಮಡೋಜುವಿನ ಮಗ ಧರಣಪ್ಪ ಹಾಗೂ ನಂಗೋಜುವಿನ ಮಗ ಧರಣಪ್ಪ ಹಾಗೂ ನಂಗೋಜುವಿನ ಮಗ ಲಿಂಗೋಜು ಮೊದಲಾದ ಐದು ಜನ ಓಜುಗಳು ಗಾಡಿಯ ಮೇಲೆ ಬಂದು ಬುಕ್ಕಮಹಾರಾಜನ ಹೆಸರಿನಲ್ಲಿ ತಾವು ಕೆರೆಯನ್ನು ಕಟ್ಟುತ್ತಾರೆ. ಅದಕ್ಕಾಗಿ ಮಾನ್ಯವನ್ನೂ ಪಡೆಯುತ್ತಾರೆ.[೬] ಅಕ್ಕಸಾಲೆ ಗಿರಿಯೋಜನ ತಮ್ಮ ಈತನ ಕಾಲ ಕ್ರಿ.ಶ ೧೫೮೪. ಈತನು ಚೆನ್ನಪುರಿ ಎಂಬ ಊರಿನವರು ಕಲ್ಯಾಣದುರ್ಗ ತಾಲ್ಲೂಕಿನ ಶ್ರೀರಂಗಪುರದಲ್ಲಿರುವ ರಂಗಸ್ವಾಮಿ ದೇವಸ್ಥಾನದಲ್ಲಿರುವ ಶಾಸನವು ಹೇಳುವ ಪ್ರಕಾರ ಶ್ರೀರಂಗಯ್ಯನು ಮುಸಲ್ಮಾನರಿಂದ ನಾಶವಾಗಿದ್ದ ದೇವಸ್ಥಾನವನ್ನು, ನೀರಿನ ಕಾಲುವೆಯನ್ನು ಬೇರ್ಪಡಿಸಿ ಅಗ್ರಹಾರವನ್ನು ಮಾಡಿಸುತ್ತಾನೆ. ಈ ಸಂದರ್ಭದಲ್ಲಿ ಅಕ್ಕಸಾಲೆ ಗಿರಿಯೋಜನ ತಮ್ಮನು ದುಡಿಯುತ್ತಾನೆ. ನದಿಯಿಂದ ಕೆರೆಗೆ ಬಂದು ನೀರಿನ ಕಾಲುವೆಯನ್ನು ಮಾಡಿರುತ್ತಾನೆ. ಆದ್ದರಿಂದ ಗಿರಿಯೋಜನ ಸಂಕೋದರನಿಗೆ ಬಹುಮಾನವನ್ನು ನಿಡಲಾಗುತ್ತದೆ.

"ತಿಫೋಜುವಿ"ನ ಕಾಲ ಕ್ರಿ.ಶ. ೧೪೦೪. ಮುಂಡರಗಿ ತಾಲ್ಲೂಕು ಚ್ಯಾಗಿರಕೇರಿ ಎಂಬ ಗ್ರಾಮದ ಕೆರೆಯ ಎರಡು ತೂಬುಗಳ ಮೇಲಿರುವ ಶಾಸನಗಳು ಹೇಳುವಂತೆ ಆ ಕೆರೆಯ ತೂಬುಗಳನ್ನು

ತಿಪೋಜನು ಕಟ್ಟುತ್ತಾನೆ. ಅದಕ್ಕಾಗಿ ಈತನು ೩೦ ಪ್ರತಾಪ ವರಹಗಳನ್ನು ಪಡೆಯುತ್ತಾನೆ. ಮಾಸ ವೆಗ್ಗಡೆ ಚಿಕ್ಕಂಣ ಉಪಾಧ್ಯಾಯರ ಮಕ್ಕಳು ಗೋಪಂಣಗಳು ವೈಶಾಖ ಶುದ್ಧ ಪಂಚಮಿ ಸೋಮವಾರದಂದು ತೂಬನ್ನು 'ಪ್ರತಿಷ್ಠೆ' ಮಾಡಿಕೊಡುತ್ತಾನೆ.[೭]

ಕೆರೆಯ ನಿರ್ಮಾಣ ಕಾರ್ಯದಲ್ಲಿ ಓಜರು ಅಥವಾ ಆಚಾರಿಯರು ಪರಿಣತರು ಎಂದು ರಾಜರು ಓಜರ ಅಭಿಪ್ರಾಯ ಪಡೆದು ಕೆರೆಯನ್ನು ಕಟ್ಟಿಸುತ್ತಿದ್ದರು.

'ಯಾವುದೇ ವಿಧವಾದ ಕಟ್ಟಡವನ್ನೆ ಆಗಲಿ, ಅರಮನೆಯನ್ನೇ ಆಗಲಿ, ಕೆರೆಯನ್ನೇ ಆಗಲಿ ಕಟ್ಟುವಲ್ಲಿ ಒಬ್ಬ ಗುರುವನ್ನು ಒಬ್ಬ ಶಿಲ್ಪಿಯನ್ನು ಮೊದಲು ಆಯ್ಕೆ ಮಾಡಿಕೊಳ್ಳುತ್ತಾರೆ. ಕೆರೆಯ ನಿರ್ಮಾಣದ ಸಂದರ್ಭದಲ್ಲಿ ಪರಿಣತನಾದ ಶಿಲ್ಪಿಯನ್ನು ನೇಮಿಸಲಾಗುತ್ತಿತ್ತು. ಅವನನ್ನು ಓಜನೆಂದು ಕರೆಯುತ್ತಿದ್ದರೆಂಬುದು ಶಾಸನಾಧ್ಯಯನದಿಂದ ಸಾಬೀತಾಗುತ್ತದೆ. ಲೋಕೋಪಯೋಗಿ ಕಾರ್ಯಗಳಲ್ಲಿ ಪಾಂಚಾಳರಿಗಿದ್ದ ಪ್ರಾತಿನಿಧ್ಯತೆಯನ್ನು ಈ ಸಂಗತಿಗಳು ಗ್ರಹಿಕೆಗೆ ತರುತ್ತವೆ.

ಪಂಪನ ಕೃತಿಯಾದ ಆದಿಪುರಾಣದಲ್ಲಿ 'ಕಮ್ಮಾರ' ಮತ್ತು 'ಕಮ್ಮಾರ ಓಜದ' ಉಲ್ಲೇಖವಿದೆ. ಅತಿಬಲನ ಮಗ ಮಹಾಬಲ ಇವನು ಹಿಂದಿನ ಜನ್ಮದಲ್ಲಿ ವಿಯಾರ್ಥರಶಿರಿಯನ್ನು ಬೀಡಲಾದ ಇದ್ದ ಆದ್ದರಿಂದ ಈ ಜನ್ಮದಲ್ಲಿ ಇವನಿಗೆ ಕನಸಿನಲ್ಲಿ ಮೂವರು ಮಂತ್ರಿಗಳು ಅವನನ್ನು ಕಟ್ಟಿ ದುರ್ಗಂಧಯುಕ್ತವಾದ ಭಾವಿಯಲ್ಲಿ ಮುಳಗಿಸಿ ಅದ್ದಿದಂತೆ ಆಗುತ್ತಿತ್ತು. ಆಗ ತಂದೆಯು ಮಹಾಬಲನಿಗೆ ವ್ರತ ಮಾಡಲು ಹೇಳುತ್ತಾನೆ. ಮಹಾಬಲನು ಕಠೋರವಾಗಿ ಇಪ್ಪತ್ತೆರಡು ದಿನ ವ್ರತ ಮಾಡುತ್ತಾನೆ. ಮಹಾಬಲನು ಸಮಾಧಿವಿಧಿಯನ್ನಪ್ಪ ತೋರಿದ ಸಂದರ್ಭದಲ್ಲಿ

ಇಂತನವದ್ಯಮಪ್ಪ ಪದದೊಳ್ ಪತಿಯಂ ನಡೆಯಲ್ಕೆ ಷೇಜಸ್ಬಿತಾ<br>
ನುಂ ತರೆಸಂದುದಗ್ರತಪಮಂ ತಡವಿಲ್ಲದೆ ಕೊಂಡು ಘೋರವೀ<br>
ರಂ ತಪಮೆಂಬಿನಂ ನೆಗಲ್ದು ತತ್ಸಚಿವೋತ್ತಮನೊಳ್ಳಿಕೆಯ್ದನಿ<br>
ನ್ನಂತುಬು ಪೇಲ್ಪು ಕಮ್ಮಗಿರೆ ಗಮ್ಮಗೆ ಕಮ್ಮರಿ ಯೋಜನಾಗನೇ.[೮]

ಹೀಗೆ ಸಚಿವೋತ್ತಮನಾದ ಸ್ವಯಂಬುದ್ಧನು ರಾಜನಿಗೆ ನಿರ್ದುಷ್ಟವಾದ ಮಾರ್ಗದಲ್ಲಿ ನಡೆಯುವಂತೆ ನುಡಿದನು. ತಾನೂ ಶೀಘ್ರವಾಗಿ "ತಪಸ್ಸು ಘೋರವೀರವಾದುದು" ಎಂಬಂತೆ ಉಗ್ರವಾದ ತಪವನ್ನು ಕೈಕೊಂಡನು. ಅವನು ಹೀಗೆ ತಾನು ಮಾತ್ರ ಕೆಮ್ಮಗ್ಗಿದ್ದರೆ ತಪ್ಪದೆ ಕಮ್ಮರಿ ಯೋಜನಾಗುತ್ತಿದ್ದನು. ಮುಂದೆ ದಿವ್ಯತಲ್ಪದ ಪ್ರಕಾಶದಿಂದಿರುವ ಬಾಲಸೂರ್ಯನ ಬಳಗದ ಬೆಳಕನ್ನೊಳಕೊಂಡು ಜನ್ಮಾಂತರದಲ್ಲಿ ಲಲಿತಾಂಗನಾಗಿ ಹುಟ್ಟಿದನು.

ರನ್ನನ ಗದಾಯುದ್ಧದಲ್ಲಿ 'ಕಮ್ಮಯೋಜ' ಎಂಬ ಪದ ಬಳಕೆಯಾಗಿದೆ. ದುರ್ಯೋಧನನು ತನ್ನವರೆಲ್ಲ ಕುರುಕ್ಷೇತ್ರದಲ್ಲಿ ಸತ್ತಿರುವುದನ್ನು ಕಂಡು ಬೇಸರಿಸಿ ದ್ರೋಣಾಶ್ವತ್ಥಾಮರನ್ನು ಕುರಿತು ಮಾತನಾಡುವ ಸಂದರ್ಭದಲ್ಲಿ, ಅಶ್ವತ್ಥಾಮನೂ, ದ್ರೋಣನೂ, ಕೋಪಾವೇಶದಿಂದ ಕ್ಷತ್ರಿಯರು ಯುದ್ಧ ಮಾಡುವರು. ಮಿಕ್ಕವರು ಬಿಲ್ಲನ್ನು ಹಿಡಿದಾದರೂ ಏನು ಮಾಡುವರು. ನನ್ನಿಂದ ತೀರದ ಕಾರ್ಯಭಾರವನ್ನು

ನೆರವೇರಿಸಬಲ್ಲ ಶೂರರು ಯಾರಿದ್ದಾರೆ. ಪಾಂಡವರೇನು ಮಹಾ ಎಂಬ ದರ್ಪ ಮಾಡಿ ರಣರಂಗದಲ್ಲಿ ದ್ರೋಣಾಶ್ವತ್ಥಾಮರು ಮೈ ಮರೆತರಾಗಿಯೇ ನನ್ನ ತಮ್ಮಂದಿರು ಮಕ್ಕಳು ಅಷ್ಟು ಜನ ಸತ್ತರು ಎಂದು ಹೇಳುವ ಸಂಧರ್ಭದಲ್ಲಿ ಓಜರ ಉಲ್ಲೇಖ ಕಂಡುಬರುತ್ತದೆ.

"ಪದಳಂ ಕುಳ್ಳಿರ್ದೆಮಗಾ
ಯದ ಮಾತಂತುಗುಳೆಗ ಜಿಪಿ ಪೋದಂ ಸಂಧಿ
ರ್ದದಟಿರೊಳಿರೆಯಂತೆ
ಪ್ಪದ ಕಮ್ಮರೆಯೋಜನೆನಿಸದಂ ಬಿಲ್ಲೋಜಂ"

ದ್ರೋಣನು ನೆಮ್ಮದಿಯಾಗಿ ಕುಳಿತುಕೊಂಡು ತನ್ನ ಶೌರ್ಯದ ಬಡಾಯಿ ಕೊಚ್ಚಿಕೊಂಡು ಹೋದನಲ್ಲದೆ ನಮ್ಮ ಧನುರ್ವಿದ್ಯಗುರು ದ್ರೋಣನು ಶೂರರೊಡನೆ ಯುದ್ಧ ಮಾಡಿಯೇ ಗೊತ್ತಿಲ್ಲ. ಇವನಿಗೆ ತಾನೇನನ್ನು ಮಾಡದೆ ಇತರರಿಗೆ ಹೇಳಿ ಕೆಲಸ ಮಾಡಿಸುವ ಕಮ್ಮಾರ ಸಾಲೆಯ 'ಓಜ' ಎಂಬ ಬಿರುದನ್ನು ಬ್ರಾಹ್ಮಣರೇ ಗುತ್ತಿಗೆ ಹಾಕಿಕೊಂಡಿದ್ದರು. ಇದಕ್ಕೆ ಇತರರು ಯಾರೂ ಅರ್ಹರಲ್ಲವೆಂಬುದು ಕ್ಷತ್ರಿಯನಾದ ದುರ್ಯೋಧನನ ವಾದ. ಆದರೆ ಚಿನ್ನ, ಮರ, ಕಲ್ಲು, ಕಬ್ಬಿಣದ ಕೆಲಸ ಮಾಡುವ ಪಾಂಚಾಳರೆಂಬ ವಿಶ್ವಕರ್ಮರೂ ಓಜರೆನಿಸಿಕೊಳ್ಳುವರು. ಕಲ್ಲನ್ನು ಕಡೆದು ದೇವತಾ ವಿಗ್ರಹ ಮಾಡಬಲ್ಲ ಶಿಲ್ಪಿ ಆ ವಿಗ್ರಹವನ್ನು ಪೂಜಿಸುವವನು ಪೂಜ್ಯನಾಗುತ್ತಾನೆ. ಹಳೇಬೀಡು, ಬೇಲೂರು ಮಲ್ಲೋಜ ಮತ್ತು ವೆಂಕೋಜರಿಗೆ ಬಹಳ ದೊಡ್ಡ ಗೌರವ ಸಿಕ್ಕಿತ್ತು. 'ಓಜ' ಎಂದು ವಿಶ್ವಕರ್ಮರಿಗೆ ಕರೆದಿದ್ದು ರನ್ನನ ಗದಾಯುದ್ಧದಿಂದ ತಿಳಿದುಬರುತ್ತದೆ. ಓಜ ಅಂದರೆ ಜ್ಞಾನಿ, ಶಿಲ್ಪಿ, ಗುರು, ಹಿರಿಯ, ಸಾಧಕ ಎಂದರ್ಥವಿದೆ. ಎಲ್ಲದರಲ್ಲೂ ಬಹುಮುಖ ಪ್ರತಿಭೆಯನ್ನು ಹೊಂದಿದ್ದ ಪಾಂಚಾಳರನ್ನು ಹೀಗೆ ಗುರುವಿನ ಸ್ಥಾನದಲ್ಲಿ ಕರ್ನಾಟಕ ಸಾಂಸ್ಕೃತಿಕ ಲೋಕ ಪರಿಗಣಿಸಿತ್ತು.

ಇನ್ನು 'ಆಚಾರಿ' ಕುರಿತು ಚರ್ಚಿಸುವುದಾದರೆ ಈ ಗೌರವಸೂಚಕ ಪದವು ಪಾಂಚಾಳರಿಗೆ ಬಳಕೆಯಾಗುತ್ತಿತ್ತು ಎನ್ನುವ ಉಲ್ಲೇಖಗಳು ಕನ್ನಡ ಸಾಹಿತ್ಯದಲ್ಲಿ ಸಿಗುತ್ತವೆ.

ನಯಸೇನನ ಧರ್ಮಾಮೃತದಲ್ಲಿ ಆಚಾರಿಯ ಉಲ್ಲೇಖವಿದೆ. ಜಗಕ್ಕೆ ಮಂಗಳವನ್ನುಂಟು ಮಾಡುವವರು ಅತ್ಯಂತ ಶುದ್ಧರೂ, ಗುಣಗಳಲ್ಲಿ ಶ್ರೇಷ್ಠರೂ, ಕರ್ಮಲೇಪವನ್ನು ಕಳೆದುಕೊಂಡವರೂ ಆದ ಸಿದ್ಧರು ಕರುಣೆಯಿಂದ ಆತ್ಮ ಪ್ರಭುತ್ವವನ್ನು ಅನುಗ್ರಹಿಸಲಿ ಆಚಾರ್ಯರು ಎಂಬ ಮಾತು ಬರುತ್ತದೆ. ದಕ್ಷಿಣ ಕನ್ನಡ ಮತ್ತು ದಕ್ಷಿಣ ಕರ್ನಾಟಕದಲ್ಲಿ ಬಡಗಿಗಳಿಗೆ 'ಆಚಾರಿ' ಎಂದು ಇಂದಿಗೂ ಕರೆಯುತ್ತಾರೆ. ತಿಂಥಣಿ ಮೌನೇಶ್ವರರ ವಚನಗಳಲ್ಲಿ ಓಜ, ಆಚಾರ ಎಂದು ಉಲ್ಲೇಖಗಳಿವೆ.

"ಓಜ ಒಕ್ಕಲು ದೊರೆಯು ಸಹಜದಿಂದ ಇದ್ದರೆ ಈ
ಮೂಜಗವೆಲ್ಲ ಯಾಕೆ ಕೆಡುವದು, ಬಸವಣ್ಣ"

"ವಿದ್ಯೆ ಕಲಿಸುವ ಗುರು ಆಳುವ ದೊರೆ ಮಾಡುವ ಕೃಷಿ ಆಡುವ ಮಾತು ಶುದ್ಧ ಮತ್ತು ಕ್ರಿಯಾಶೀಲವಾಗಿದ್ದಾಗಿ ಈ ಭೂಲೋಕವು ಕೆಡಲು ಸಾಧ್ಯವಿಲ್ಲ, ವಿದ್ಯಾಗುರು ಆಳುವ ದೊರೆ ಉಳುವ ರೈತ ಭ್ರಷ್ಟರಾದರೆ ಈ ಲೋಕ ಬಾಳದು ಮತ್ತು ಬೆಳೆಯಲಾರದು."

"ಆಚಾರ ಅನುಭಾವ ಸೂಚನೆ ಸೂಕ್ಷ್ಮ ದೀಕ್ಷೆ
ದಿವ್ಯ ಪುರುಷ ಪಾವನ ಸಾಕ್ಷಿಯ
ಕೊಂಡು ಧರೆಗಿಳಿದ ಬಸವಣ್ಣ"

ಈ ವಚನದಲ್ಲಿ ಸ್ಥೂಲವಾದ ದೀಕ್ಷೆಯಿಂದ ಬಾಹ್ಯ ಆಚಾರಗಳಾದ ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷಿ ಮುಂತಾದವುಗಳು ಇರುವಂತೆ ಮಾರ್ಗದರ್ಶನವನ್ನು ಕೊಡುತ್ತದೆ. ಆದರೆ ಸೂಕ್ಷ್ಮ ದೀಕ್ಷೆಯ ಅಂತರಂಗದ ಆಚಾರ ಅನುಭವಗಳ ಕುರಿತಾದ ಸೂಚನೆಗಳನ್ನು ನೀಡುತ್ತದೆ.

**ವೃತ್ತಿಕಾರರಾಗಿ ಪಾಂಚಾಳರು**

***ಕಮ್ಮಾರ**

ಕಬ್ಬಿಣ ಕೆಲಸವನ್ನು ನಿರ್ವಹಿಸುವನು ಕಮ್ಮಾರ. ಇವರು ಪಾಂಚಾಳರಲ್ಲಿ ಮೊದಲಿಗನಾಗಿದ್ದಾನೆ. ಶಾಸನ, ಕಾವ್ಯ ಹಾಗೂ ಮೌಖಿಕ ಆಕರಗಳಲ್ಲಿ ಕರ್ಮಹರ, **ಕಂಬರ, ಕಮ್ಮರ, ಕಂಬಾರ, ಕುಲುಮೆ, ಕಂಬಾರದಿಣ್ಣೆ, ಕಮ್ಮಾರ ಸಾಲಿ** ಕಮ್ಮರಯೋಜ ಎನ್ನುವ ಉಲ್ಲೇಖಗಳು ಸಿಗುತ್ತವೆ. 'ಕರ್ವೊನ್' ಎಂಬ ಮೂಲ ಪದದಿಂದ ಕಮ್ಮಾರ ಪದ ಬಳಕೆಗೆ ಬಂದಿದೆ ಎಂದು ಹೇಳಲಾಗುತ್ತದೆ. 'ಕರ್ವೊನ್' ಎಂದರೆ ಕಬ್ಬಿಣ, ಕಮ್ಮಣ ಎಂದರೆ ಕುಲುಮೆ, ಕರ್ಮ+ಕಾರ, ಕಮ್ಮಾರ ಆಗಿದೆ ಎನ್ನುತ್ತಾರೆ. ಈ ಬಳಕೆಯಲ್ಲಿ ಕಮ್ಮಾರ ಮತ್ತು ಕಂಬಾರ ಎರಡೂ ರೂಪಗಳು ಬಳಕೆಯಲ್ಲಿವೆ.[೧೦] ಹಾಗೆಯೇ ಕಮ್ಮಾರ ಸಾಲಿ ಎಂಬ ಪದದಲ್ಲಿ 'ಸಾಲ' ಎಂದರೆ ಕೇವಲ ವಿದ್ಯಾಭ್ಯಾಸ ನೀಡುವ ಸಂಸ್ಥೆಗಳೆಂಬ ಸೀಮಿತ ಅರ್ಥವನ್ನು ಹೇಳಲಾಗಿದೆ. ಆದರೆ ಕೈಗಾರಿಕೆಯ ಸ್ಥಳ ಕೆಲಸದ ಮನೆ ಎಂಬ ವಿಶಾಲಾರ್ಥದಲ್ಲಿಯೂ ಬಳಕೆಯಾಗಿದೆ. ಸಂಸ್ಕೃತ ಶಾಲಾ ಮೂಲ ರೂಪದಿಂದ 'ಸಾಲಿ'(ಶಾಲೆ>ಸಾಲೆ>ಸಾಲಿ) ಬಂದಿದೆ. ಸಾಲಿ ಪದದ ಬಳಕೆ ವೃತ್ತಿಪರ ಜನಾಂಗದವರನ್ನು ಹೆಸರಿಸುವಲ್ಲಿ ಬಳಕೆಗೊಳ್ಳುತ್ತದೆ. ಕಬ್ಬಿಣ ಕೆಲಸ ಮಾಡುವ ಸ್ಥಳಕ್ಕೆ ಕಮ್ಮಾರ ಸಾಲಿ ಎಂದು ಕರೆಯಲಾಗುತ್ತದೆ.[೧೧]

ಪಾಂಚಾಳ ಸಮುದಾಯದ ಒಂದು ವೃತ್ತಿಯಾದ ಕಮ್ಮಾರಿಕೆ ಕರಕುಶಲ ಕಲೆಗಳಲ್ಲಿ ಒಂದಾಗಿದೆ. ಕಮ್ಮಾರಿಕೆಯ ವೃತ್ತಿಯಿಂದ ಗೃಹಬಳಕೆಯ ಸಾಮಾನು, ಬೇಟೆಯ ಉಪಕರಣಗಳು, ಯುದ್ಧ ಸಾಮಗ್ರಿಗಳು, ಧಾರ್ಮಿಕ ಸಂದರ್ಭಗಳು ಮುಂತಾದ ಕಡೆಗಳಲ್ಲಿ ಕಮ್ಮಾರಿಕೆಯ ವೃತ್ತಿಯ ಮುಖ್ಯ ಉಪಯೋಗ ವಾಗುತ್ತದೆ. ಇದರಿಂದಲೇ ಈ ವೃತ್ತಿಯು ತುಂಬ ಮಹತ್ವವನ್ನು ಪಡೆದುಕೊಂಡಿತ್ತು. ಪ್ರಾಚೀನ ಕಾಲದಲ್ಲಿ ಕಮ್ಮಾರ ಶಾಲೆಯಿಂದಲೇ ಸೈನಿಕರಿಗೆ ಬೇಕಾಗುವ ಭರ್ಚಿ, ಕತ್ತಿ, ರಕ್ಷಣಾ ಕವಚ, ಬಂದೂಕು, ಕೃಷಿ ಚಟುವಟಿಕೆಗಳಿಗೆ, ದೈನಂದಿನ ಜೀವನೋಪಾಯಕ್ಕೆ, ವ್ಯಾಪಾರಕ್ಕೆ ಸಂಬಂಧಿಸಿದಂತೆ ಕೆಲಸಗಳೆಲ್ಲ ಕಮ್ಮಾರರನ್ನು ಇತರೆ ಸಮುದಾಯದವರೂ ಅವಲಂಬಿಸಿದ್ದರು.

ನಯಸೇನನ 'ಧರ್ಮಾಮೃತದಲ್ಲಿ' 'ಕಮ್ಮಟರಿಲ್ಲದ ಖಡ್ಗಾದಿಶಸ್ತ್ರಂಗಳಾಗವು' ಎಂಬ ಉಲ್ಲೇಖ ಒಂದು ಕಡೆ ದೊರೆಯುತ್ತದೆ.

**ರಾಘವಾಂಕನ ಸಿದ್ಧರಾಮಚಾರಿತ್ರ್ಯ**ದಲ್ಲಿ ಕಮ್ಮಾರರ ಉಲ್ಲೇಖ ಬರುತ್ತದೆ. ಸ್ವಯಂಭು(ಶಿವನ) ಲಿಂಗವನ್ನು ಕಾರಹುಣ್ಣಿಮೆಯ ಚತುರ್ದಶಿಯ ದಿನ ಅರ್ಧರಾತ್ರಿಯಲ್ಲಿ ಶಿವನ ಮೂರ್ತಿಯನ್ನು ಪ್ರತಿಷ್ಠಾಪಿಸುವಾಗ ಲಿಂಗದ ಮುಂದೆ ಪಂಚಲೋಹದ ಗುಂಡು, ತಿದಿ, ಇದ್ದಿಲು, ಇಕ್ಕಳಗಳನ್ನು ಇಟ್ಟಿರುತ್ತಾರೆ. ಅಲ್ಲಿ ಯಾರು ಮಾತಿಗೆ ತಪ್ಪುವರೋ ಅವರಿಗೆ ಆ ಪಂಚಲೋಹದ ಗುಂಡಿನಿಂದ ಕೈ ಸುಡಲಾಗುತ್ತದೆ ಎಂದು ಪ್ರತಿಜ್ಞೆಯಾದ ಸಂದರ್ಭದಲ್ಲಿ ಆ ಗುಂಡು ಕಾಯಿಸುವವರು ಕಮ್ಮಾರರಾಗಿರುತ್ತಾರೆ.

"ಹಲವು ತಿದಿಗಳ ಲೂದಿ ಲೇಸಾಗಿ ಕಾಸಿಕಂ
ಗಲಿಪ ಕಿಡಿಗಳ ನುಗುಳ್ವ ಪಂಚಲೋಹದ ಗುಂಡ
ನೆಲೆಕಕ್ಕಸದ ಕಮ್ಮಾರರು ನಿಡಿದಿಕ್ಕುಳುಗಳಿಂದವಚಿಪಿಡಿದು ತಂದು[೧೨]

ಆದಿ ಲಿಂಗವನ್ನು ಪ್ರತಿಷ್ಠೆ ಮಾಡುವಾಗ ಹಾಕಿದ ಹೋಮದಲ್ಲಿ ಗುಂಡನ್ನು ಕಾಯಿಸುತ್ತಾ ಇದ್ದರು. ಊದು ತಿದಿಗಳಿಂದ ಗಾಳಿಯನ್ನು ಊದಿ ಊದಿ ಚೆನ್ನಾಗಿ ಕಾಯಿಸಿ, ಕೆಂಪಾಗಿಸಿ ಕೆಂಡವನ್ನು ಹೊರಸೂಸುತ್ತಿದ್ದ ಪಂಚಲೋಹದ ಗುಂಡನ್ನು ಎಲ್ಲರೂ ಬಿಟ್ಟು ಕಣ್ಣುಗಳಿಂದ ದಿಗ್ಭ್ರಾಂತರಾಗಿ ನೋಡುತ್ತಿರುವಾಗ ಕರ್ಕಶರೂ, ಕಠಿಣಚಿತ್ತರೂ ಆದ ಕಮ್ಮಾರರು ಉದ್ದವಾದ ಇಕ್ಕುಳಗಳಿಂದ ಕಾದ ಗುಂಡನ್ನು ಹಿಡಿದು ತಂದು ಸಿದ್ಧರಾಮನ ಮುಂದೆ ಇಟ್ಟಾಗ ಸಿದ್ಧರಾಮನು ಕಾದ ಕಬ್ಬಿಣವನ್ನು ನೋಡಿ ಗಡಗಡ ನಡುಗಿದರು. ಆಗ ಸಿದ್ಧರಾಮನು ಕಮ್ಮಾರನಿಗೆ 'ಅಯ್ಯ ನಿನ್ನ ಕೈಯಲ್ಲಿ ಹಿಡಿದಿರುವ ಗುಂಡನ್ನು ಹೆಚ್ಚು ಹೊತ್ತು ಹಿಡಿಯಬೇಡ, ಕೆಳಕ್ಕೆ ಇಟ್ಟು ಬಿಡು. ನಿನ್ನ ಶ್ರಮ ಸಫಲವಾಯಿತು. ನೀನು ಪರಿಶ್ರಮನು, ಶೂರನು' ಎಂದು ಕಮ್ಮಾರನ ಶ್ರಮದ ಬಗ್ಗೆ ಕುರಿತು ಸಿದ್ಧರಾಮನು ಹೊಗಳಿದ್ದನ್ನು ಇಲ್ಲಿ ಗಮನಿಸಬಹುದಾಗಿದೆ.

ಕುಮಾರ ರಾಮನ ಸಾಂಗತ್ಯದಲ್ಲಿ 'ಜೋಡು ಸೀಸಕ ಪಕ್ಕರೆ ಮೊಗರೆಂಬವ ಮಾಡು ಕೆಲಸಿಗಳಿಂ' ಕಮ್ಮಾರರು ರಕ್ಷಾಕವಚ, ಶಿರಸ್ತ್ರಾಣ, ಕುದುರೆಗಳ ರಕ್ಷಾಕವಚ, ಮುಖಕವಚ ಮೊದಲಾದವುಗಳನ್ನು ಮಾಡುತ್ತಿದ್ದರು ಎಂದು ಉಲ್ಲೇಖ ಇರುವುದು.

'ಚೈತ್ರೋಜ್ಜನ ಕಾರುಕನಿಟ್ಟ ಕಮ್ಮಟಂಬೋಲ್'[೧೩] ಕಾರುಕರು ಕಮ್ಮಾರರು ಬಾಣಗಳನ್ನು ತಯಾರಿಸುತ್ತಿದ್ದರು. ಹಾಗೆ ಬಾಣಗಳನ್ನು ತಯಾರಿಸಲು ಅವರದೇ ಆದ ಕಾರ್ಯಾಗಾರಗಳಿರುತ್ತಿದ್ದವು. ಆ ಆಯುಧ ತಯಾರಿಕಾ ಕಾರ್ಯಾಗಾರಗಳನ್ನು ಕಮ್ಮಟಗಳೆಂದು ಕರೆಯಲಾಗುತ್ತಿತ್ತು. ಕಾವ್ಯಲೋಕನದಲ್ಲಿ ಕಮ್ಮಾರನಂಬು ಕಮ್ಮಪಿಂಗೆ ಎಂಬ ಉಕ್ತಿಯ ಆಧಾರದ ಮೇಲೆ ಬಾಣಗಳನ್ನು ಕಮ್ಮಾರರು ತಯಾರಿಸುತ್ತಿದ್ದರೆಂದು ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೧೪]

ಹಳಗನ್ನಡ ಕಾವ್ಯಗಳಲ್ಲಿ ಲೋಹ, ಹಲಗೆ, ಕಂಚು ಮುಂತಾದ ತಾಂತ್ರಿಕ ಕೆಲಸಗಳಲ್ಲಿ ಪಾಂಚಾಳರು ಬಲ್ಲಿದರಾಗಿದ್ದಾರೆಂಬುದು ಇದರಿಂದ ತಿಳಿದುಬರುತ್ತದೆ.

ವಚನ ಸಾಹಿತ್ಯದಲ್ಲಿ ಕಮ್ಮಾರರ ಉಲ್ಲೇಖಗಳು ದೊರೆಯುತ್ತವೆ. ಮನುಷ್ಯ ನಿರ್ಮಿತ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳನ್ನು ಮೀರಿ ಬೆಳೆದದ್ದು ವಚನ ಚಳುವಳಿ. ಜೀವ ವಿರೋಧಿ ನೆಲೆಗಳಿಗೆ

ಮುಖಾಮುಖಿಯಾಗುತ್ತಲೇ ಜೀವಪರ ದಾರಿ ಹಾಗೂ ಬದುಕಿನ ಕ್ರಮಗಳನ್ನು ನಿರ್ಮಿಸಿದ್ದು ಈ ಚಳುವಳಿಯ ವಿಶೇಷತೆಯಾಗಿದೆ. ಕಾಯಕದ ಪರಿಕಲ್ಪನೆಯಿಂದ ಉದ್ಯೋಗ, ಭದ್ರತೆ, ದಾಸೋಹದ ಪರಿಕಲ್ಪನೆಯಿಂದ ಆಹಾರಭದ್ರತೆಯನ್ನು ಪ್ರತಿಪಾದಿಸುವ ಮೂಲಕ ಪ್ರತಿಯೊಬ್ಬರಲ್ಲೂ ಸ್ವಾವಲಂಬಿ ಹಾಗೂ ಸ್ವವಿವೇಕದ ಎಚ್ಚರವನ್ನು ಮೂಡಿಸಿತು. ಆ ಮೂಲಕ ಮನುಷ್ಯ ಮತ್ತು ವೃತ್ತಿಗಳ ನಡುವೆ ಇದ್ದ ಮೇಲು ಕೀಳನ್ನು ಮೀರಿ ನಿಲ್ಲಿಸಿತು. ವಿಶೇಷವೆಂದರೆ ವಚನಕಾರರಲ್ಲಿ ಪಾಂಚಾಳ ವೃತ್ತಿಕೌಶಲ್ಯ ಹಾಗೂ ಪರಿಕರಗಳು ಜ್ಞಾನ ಹಾಗೂ ಆಧ್ಯಾತ್ಮಿಕ ಅರ್ಥಗಳೊಂದಿಗೆ ಕ್ರಿಯಾಶೀಲಗೊಂಡಿದ್ದು ಅಭ್ಯಾಸಾರ್ಹವಾದುದು.

**ವಚನ ಸಾಹಿತ್ಯ**

**ಕಮ್ಮಾರ:**

ಕಮ್ಮಾರರ ಕುಲ ಹಾಗೂ ವೃತ್ತಿ ಕುರಿತು ಅನೇಕ ವಚನಗಳಲ್ಲಿ ಉಲ್ಲೇಖಗಳಿವೆ. ಬಸವಣ್ಣನವರಲ್ಲಿ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ(ಬ.ವ.೧೫೫, ೪೫) ಕಾಸಿ ಕಮ್ಮಾರನಾದ, ಅಗ್ನಿಮಾಧಾರದಲ್ಲಿ ಕಬ್ಬುಣ ನೀರುಂಬುದಯ್ಯ, ಕಮ್ಮಾರನ ಕೆಲಸದ ಇಕ್ಕಳ ಪರುಷವನರಸುವುದೇ ಕಬ್ಬಿಣದಲ್ಲಿ ಎನ್ನುವ ವಚನದ ಸಾಲುಗಳು ಕಂಬಾರ ಕುಲ, ವೃತ್ತಿ ಹಾಗೂ ವೃತ್ತಿಸಂಬಂಧಿ ಪರಿಕರಗಳ ಸ್ವಭಾವ ಹಾಗೂ ಕ್ರಿಯಾರೂಪವನ್ನು ಹೇಳುತ್ತೇವೆ. ಲೋಕ ಎಂಬುದು ಕರ್ತಾರನ ಕಮ್ಮಟ–ಎನ್ನುವ ಪದ, ಬಡಗಿ ಕಮ್ಮಾರರು ಸೃಷ್ಟಿಗತಿಕರ್ತರು ಎನ್ನುವ ಮೌನೇಶ್ವರ ವಚನದಂತೆ ಈ ಸೃಷ್ಟಿ ನಿರ್ಮಾಣದಲ್ಲಿ ನಾಗರಿಕತೆಯ ಬೆಳವಣಿಗೆಯಲ್ಲಿ ಕಮ್ಮಾರ ಹಾಗೂ ಆತನ ಕಮ್ಮಟಕ್ಕಿದ್ದ ವಿಶಿಷ್ಟತೆಯನ್ನು ಹೇಳುತ್ತವೆ. ಚನ್ನಬಸವಣ್ಣನವರ ವಚನದಲ್ಲಿ ಕಮ್ಮಾರರ ಉಲ್ಲೇಖವಿದೆ.

> ಕಬ್ಬುಣವ ಮಾಡುವವ ಕಮ್ಮಾರ
> ಕಬ್ಬುನವ ಕಮ್ಮಾರ ಮಾಡುವವನೆಂದರೆ
> ಆ ಕಬ್ಬುಣತಾ ಕಮ್ಮಾರನ[೧೫]

ಕಮ್ಮಾರರು ಕಬ್ಬಿಣವನ್ನು ಅದಿರಿನಿಂದ ಸೋಸಿ ಕಾಸಿ ಗಟ್ಟಿಗಳನ್ನಾಗಿ ಮಾಡುವುದಲ್ಲದೆ ಬಳಕೆ ಯೋಗ್ಯ ವಸ್ತುಗಳನ್ನು ತಯಾರಿಸಿ ಮಾರುವವರೂ ಆಗಿದ್ದರು ಎನ್ನುವುದನ್ನು ವಚನದ ಸಾಲುಗಳು ಹೇಳುತ್ತವೆ. ಅವರದೇ ಇನ್ನೊಂದು ವಚನದಲ್ಲಿ

> "ಮತಿಗೆಟ್ಟ ಕುಂಬಾರರು ಮಣ್ಣ ಸೂಜಿಯ ಮಾಡಿ
> ಕಂಬಾರಗೇರಿಗೆ ಮಾರಿ ಹೋದಡೆ
> ಅವರುಕ್ಕಿನ ಸೂಜಿಯ ಮಾರವರಾಗಿ
> ವೇಷಧಾರಿ ಮಾತಕಲಿತು ಅಭಿಮಾನಕ್ಕೆ ಪರೀಕ್ಷೆಯ ಕೊಡುವಂತೆ
> ಕೂಡಲ ಚನ್ನಸಂಗಣ್ಣ ನಿಲವನಯದೆ
> ಉರಿಯದಿರಾ ಲೀಲೆಯ ಪಶುವೆ"[೧೬]

ಈ ವಚನವನ್ನು ನೋಡಿದಾಗ ಅಂದಿನ ಸಮಾಜದಲ್ಲಿ ಕಮ್ಮಾರರಿಗೆ ಪ್ರತ್ಯೇಕವಾದ ಕೇರಿಗಳು ಇದ್ದ ವಿಷಯ ತಿಳಿಯುತ್ತದೆ. ಅಲ್ಲದೆ ಅವರು ಉಕ್ಕಿನ ಕೆಲಸವನ್ನು ಮಾಡುತ್ತಿದ್ದರು ಎನ್ನುವುದು ಇಲ್ಲಿ ವ್ಯಕ್ತವಾಗಿದೆ. ಹೀಗೆ ಹಲವಾರು ಕಬ್ಬಿಣ ಮತ್ತು ಉಕ್ಕಿನ ವಸ್ತುಗಳನ್ನು ತಯಾರಿಸುತ್ತ ಹಲವರು ತಮ್ಮ ವೃತ್ತಿಯನ್ನಾಗಿಸಿಕೊಂಡು ತಮ್ಮ ಜೀವನವನ್ನು ನಡೆಸುತ್ತಿದ್ದರು. ಇಷ್ಟೇ ಅಲ್ಲದೇ ಚಿನ್ನದ ಕೆಲಸ, ಕಂಚಿನ ಕೆಲಸ, ಮನರಂಜನೆ ವೃತ್ತಿ ಹೀಗೆ ಹಲವಾರು ತಮ್ಮ ಕುಲಕಸುಬುಗಳನ್ನು ಮಾಡುವುದರೊಂದಿಗೆ ಅಂದಿನ ಜನ ತಮ್ಮ ಜೀವನವನ್ನು ಸಾಗಿಸುತ್ತ ನಾಡಿನ ಸಂಪತ್ತಿನ ಉತ್ಪಾದನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಇನ್ನೊಂದು ವಚನದಲ್ಲಿ

ಲಿಂಗ ಬಿದ್ದಿತ್ತೆಂಬರಯ್ಯ ಲಿಂಗ ಬೀಳಲು ಬಲ್ಲುದೆ
ಭೂಮಿ ತಾಳಲು ಬಿಲ್ಲುವೆ ಕಮ್ಮಾರ ಕಡೆದು ಮಾರಿದ
ಭೋಗಾರ ತಂದು ಮಾರಿದೆ[೧೭]

ಇದು ಕಮ್ಮಾರರ ಉತ್ಪಾದಕ ಹಾಗೂ ವಿನಿಮಯ ಶಕ್ತಿಯನ್ನು ಹೇಳುತ್ತದೆ. ಪಾಂಚಾಳರ ಪಂಚಕಸುಬುಗಳನ್ನು ಕೇವಲ ಮುಖ್ಯ ವೃತ್ತಿಗಳ ಉಪವೃತ್ತಿಗಳನ್ನಾಗಿ ಅಥವಾ ಸೇವಾವರ್ಗಗಳನ್ನಾಗಿ ಆಯಗಾರರನ್ನಾಗಿಸಿ ಕೀಳೀಕರಿಸಿದ ನೆಲೆಗಳನ್ನು ದಾಟಿ ಕಂಬಾರರಿಗಿದ್ದ ಉದ್ಯಮಶೀಲತೆಯ ಗುಣವನ್ನು ಅರಿವಿಗೆ ತರುತ್ತವೆ.



೧೬-೧೭ನೇ ಶತಮಾನದಲ್ಲಿದ್ದ ತಿಂಥಿಣಿ ಮೋನಪ್ಪಯ್ಯನ ಬಹುಪಾಲು ವಚನಗಳು ಕಮ್ಮಾರಿಕೆಯ ಉಪಕರಣಗಳನ್ನು ಉಲ್ಲೇಖಿಸುತ್ತವೆ. ಮೂಲತಃ ಕಮ್ಮಾರನಾಗಿದ್ದ ಮೋನಪ್ಪಯ್ಯ ಅದೇ ಪರಿಸರದಲ್ಲಿ ಬೆಳೆದವನಾಗಿದ್ದರಿಂದ ತನ್ನ ವಚನಗಳಲ್ಲಿ ವೃತ್ತಿಯ ಉಪಕರಣಗಳನ್ನು ಆಧ್ಯಾತ್ಮಿಕ ಚಿಂತನೆಗೆ ಹೋಲಿಕೆ ಮಾಡಿ ಬರೆದ ವಚನಗಳು ದೊರೆಯುತ್ತವೆ.

ಇಕ್ಕಳವೆ ಕುಲದೈವ ಸುತ್ತಿಗೆಯೇ ಮನಿದೈವ
ಬೊಕ್ಕಸಗೋಲ ಗಜದಂಡನೆತ್ತಿಲಿ ತೆತ್ತೀಸ
ಕೋಟಿ ದೇವಾದಿ ದೇವರ್ಕಳ
ನಿರ್ಮಿಸಿದ ಮೇಲೆ ಕೆಟ್ಟ ಕುಲ ಎನ್ನಬಹುದೆ ಇದು
ಅಲ್ಲಮನ ಕುಲವು ಬಸವಣ್ಣ

ಬಡಗಿ ಕಮ್ಮಾರರು ಈ ಸೃಷ್ಟಿಗೆ ಕಾರಣರು. ಸೃಷ್ಟಿಗೆ ಕಾರಣವಾದ ಉದ್ಯೋಗ ಪರಿಕರಗಳು ಕೇವಲ ಆಯುಧಗಳಲ್ಲ. ಅವು ಈ ಸೃಷ್ಟಿಯ ಸಕಲ ಜೀವರಾಶಿಗಳನ್ನು ಸೃಷ್ಟಿಸಿ ಸಲಹುವ ಪರಿವರ್ತನಶೀಲ ರೂಪಕಗಳು. ಇಕ್ಕಳ ಸುತ್ತಿಗೆ, ಬೊಕ್ಕಸಕೋಲು ಇವು ಹಿಡಿಯುವ ಬಡಿಯುವ ಕರಗುವ ಸೃಷ್ಟಿಸುವ ಶಕ್ತಿಯುಳ್ಳವು. ಇಂಥ ಆಯುಧಗಳನ್ನು ರೂಪಿಸುವ ಪಾಂಚಾಳರು ಮನುಕುಲವನ್ನಲ್ಲದೆ ಭೂಮಿಯ ಮೇಲೆ ಮನುಷ್ಯ ಸುಖವಾಗಿರಲು ಅವಶ್ಯಕ ವಸ್ತು ಪರಿಚಯವನ್ನು ನಿರ್ಮಿಸಿ ಪರಸಂಬಂಧವನ್ನು ಬೆಸೆಯಲು ಮೂವತ್ಮೂರು ಕೋಟಿ ದೇವಾನುದೇವತೆಗಳ ನಿರ್ಮಿಸಿ ಈ ಜಗತ್ತಿಗೆ ಕೊಟ್ಟವರು. ಕುಲ

ಕುಲಹೀನಕುಲ ಹೇಗಾಯಿತು. ಅದು ಅಲ್ಲಮನ ಕುಲಜ್ಞಾನದ ಕುಲ ಮತ್ತು ಕೌಶಲ್ಯದ ಕುಲವು ಹೌದು. ದೇವ ಶಿಲ್ಪ ಕಾರ್ಯಗಳನ್ನು ನಡೆಸುವ ವಿಶ್ವಬ್ರಾಹ್ಮಣರಿಗಿಂತಲೂ ಶ್ರೇಷ್ಠವಾದ ಕುಲ ಇಲ್ಲದೇ ಇಲ್ಲ ಎಂಬುದು ವೇಮನ ಯೋಗಿಯ ವಿವರಣೆ. ಮೋನಪ್ಪನ ಇನ್ನೊಂದು ವಚನದಲ್ಲಿ

ಹರನೆ ಕಮ್ಮಾರನು ವಿಷ್ಣುವೆ ಬಡಗಿನು
ಬಸವಣ್ಣನ ಎತ್ತಲ್ಲವೆ ಈ ಲೋಕದ
ಕೆತ್ತಗಳೇನು ಬಲ್ಲರು ಬಸವಣ್ಣ[೧೯]

ಕಲಿಯುಗದಲ್ಲಿ ಸತ್ಯ ಧರ್ಮಗಳಂತಹ ಸಾಮಾಜಿಕ ಮೌಲ್ಯಗಳನ್ನು ಪ್ರತಿಷ್ಠಾಪಿಸಲು ಹರನೇ ಕಮ್ಮಾರನಾಗಿ ವಿಷ್ಣುವೇ ಬಡಗಿನಾಗಿ ಬಸವಣ್ಣನೇ ಎತ್ತಾಗಿ ಬಂದದ್ದನ್ನು ಅಜ್ಞಾನಿ ಸ್ವರೂಪಿಗಳು ಮಂದಮತಿಗಳೂ ಆದ ಲೋಕದ ಜನ ಅರಿಯದೇ ಹೋದರು.

ಕುಲುಮಿ ಹುಟ್ಟಿದ ಮುನ್ನ ಕುಲ ಛಲವೆಲ್ಲೈಲೆ
ಹಲವು ಉದ್ಯೋಗ ಆಯುಧದ ಪರಿತ್ಯಾಗ ಲೋಕದ
ಕುಲುಮೆ ಕೀಟಕದ ಪುಳಗಳಿರ್ಯಾ ನಿಮ್ಮ
ಹಲವು ಶಾಸ್ತ್ರಗಳ ಬಿಡಬೇಕು ಬಸವಣ್ಣ[೨೦]

ಕುಲುಮೆ ಮತ್ತು ಕಬ್ಬಿಣದ ಆವಿಷ್ಕಾರ ಮಾನವ ನಾಗರಿಕತೆಯ ಪ್ರತೀಕಗಳು. ಅವು ಹುಟ್ಟಿದ ಮೇಲೆ ಹಲವು ಉದ್ಯೋಗಗಳು, ಆಯುಧಗಳು ಸೃಷ್ಟಿಯಾದವು. ಉದ್ಯೋಗವನ್ನಾಧರಿಸಿ ವೃತ್ತಿ, ಜಾತಿ ಕುಲಗಳು ಬೆಳೆದವು. ಹೊರತು ಹುಟ್ಟಿನಾರಂಭ ಎಂದ ಜಾತಿ ಕುಲಗಳು ಬರಲಿಲ್ಲ. ಶಾಸ್ತ್ರಿ ಮತ್ತು ಧರ್ಮದ ಹೆಸರಿನಲ್ಲಿ ಜಾತಿ ಭೇದ ಮಾಡುವ ಜೀವವಿರೋಧಿ ಪ್ರವೃತ್ತಿಯವರಿಂದ ಮನುಷ್ಯ ಸಂಬಂಧಗಳು ಮೇಲು ಕೀಳು ಪಡೆದವು.

ಕುಲ ಹದಿನೆಂಟಕ್ಕೆ ಕುಲುಮಿಯೇ ಶಿಕ್ಷಾ ಗುರುವು
ಕಲಿಸಿತೇಳಯ್ಯ ವಿದ್ಯೆಯನು, ಮೃಷ್ಟಾನ್ನದ ರುಚಿಯು
ಮರೆಸಿತೇಳಯ್ಯ ವಾಯಿಯನು ಬಸವಣ್ಣ[೨೧]

ಜಗತ್ತಿನ ಎಲ್ಲ ಕುಲ ಜಾತಿಗಳಿಗೆ ಕುಲುಮೆಯೇ ಶಿಕ್ಷಕ. ಕುಲುಮಿ ಮತ್ತು ಕಬ್ಬಿಣ ಕೃಷಿ ಹಾಗೂ ಕುಲಕಸುಬುಗಳು ಸಮಾಜದ ಪ್ರವರ್ತಕ ಸಂಗತಿಗಳು. ಇದರಿಂದಲೇ ಹದಿನೆಂಟು ಕುಲಗಳು. ರೂಢಿಗೆ ಬಂದವು. ಕಬ್ಬಿಣದ ಬಳಕೆ ಶಿಲಾಯುಗದ ಮಾನವನಿಂದ ನಾಗರಿಕ ಮಾನವನನ್ನು ಬೇರ್ಪಡಿಸಿತು. ದುಡಿದು ಉಣ್ಣುವ ಸ್ವಾವಲಂಬಿತನ ಮನುಷ್ಯನಲ್ಲಿ ಮೋಸ ವಂಚನೆ ಕಪಟತನಗಳನ್ನು ಕಳೆದು ಹಾಕಿ ಸಮಸಮಾಜದ ಗುಣವನ್ನು ಕಲಿಸಿತು. ಆದರೆ ಇಂದು ಮನುಷ್ಯನ ಉಪಭೋಗಿ ಪ್ರವೃತ್ತಿಯು ಮನುಷ್ಯನ ದುಡಿಯುವ ಸ್ವಭಾವವನ್ನು ಸಾಮಾಜಿಕ ಅನುಬಂಧಗಳನ್ನು ಮರೆಸಿ ಸೋಮಾರಿಯಾಗಿಸಿದೆ.

**ದಾಸ ಸಾಹಿತ್ಯ**

ದಾಸ ಸಾಹಿತ್ಯದಲ್ಲಿ ಕಂಬಾರರ ಉಲ್ಲೇಖಗಳು ದೊರೆಯುತ್ತವೆ. ಅದರಲ್ಲಿ ಪುರಂದರದಾಸರು ಇಡೀ ಭಾರತವನ್ನು ತೀರ್ಥಯಾತ್ರೆಗಳ ಮೂಲಕ ಸಂಚರಿಸಿ ಕೀರ್ತನೆಗಳನ್ನು ರಚಿಸಿ ಹಾಡಿ ಎಲ್ಲರ

ಗೌರವಕ್ಕೆ ಆದರಕ್ಕೆ ಪ್ರೀತಿ ಪಾತ್ರರಾದರು. ಅದರಲ್ಲೂ ಕಂಬಾರನ ವೃತ್ತಿ, ಅವನು ತಯಾರಿಸುವಂತ ವಸ್ತುಗಳನ್ನು ಕುರಿತು ಕೀರ್ತನೆಗಳನ್ನು ರಚಿಸಿದ್ದಾರೆ.

ಕಲಿಯುಗಕೆ ಮೇಲಾದ ಕಂಬಾರನು
ಕಲಿಯುಗದ ಮಾನವರಿಗೆ ಕಂಬಾರ ಹರನು
ಕಲಿಯುಗಕೆ ಬೇಕೆಂದು ಕೂಲುಮಿ ಯನುತಾ ಹೊಡಿ
ಒಲಿದು ನೇಗೆಲಿ ಮುಂಜು ಮನೆಯ ಮಾಡಿ
ಸಲಹಬಂದಯ್ಯ ದೇವ ಕಲಿಯುವತಾರ ನೋಡಿ
ಮಲಿಹರನ ಪಾದವ ಬಿಡದೆ ಕೊಂಡಾಡಿರಯ್ಯ

ಅಭಿಮಾನ ಮುಚ್ಚುವದಕ್ಕೆ ಅಪ್ಪಿಕೊಂಡು ಆತ್ಮದಲಿ
ಕದರು ಮಾಡಿದನಯ್ಯ ಕಂಬಾರನೂ
ಕದರು ಮಾಡಿ ಸರ್ವರಲ್ಲಿ ನೊಲಿಸಿದ
ಶಾಲಿಯು ಉಡಿಸಿದ ಸಮರ್ಥನ ಹೌದಯ್ಯ(ಮೌನೇಶ್ವರ ಆಚಾರ್ಯ; ವಿಶ್ವರೂಪ; ಪು.೨೦೬, ೨೦೧೭)

ಕೀರ್ತನೆಯಲ್ಲಿ ಕಂಬಾರನ ಕುರಿತು ಪುರಂದರದಾಸರು ಈ ರೀತಿ ಹೇಳಿದ್ದಾರೆ. ಈ ಯುಗಕ್ಕೆ ಮೇಲಾದ ಮತ್ತು ಪ್ರತಿಯೊಬ್ಬ ರೈತರಿಗೆ ತಮ್ಮ ಭೂಮಿ, ಉಳುಮೆ(ಬಿತ್ತನೆ) ಮಾಡುವುದಕ್ಕೆ ನೇಗಿಲು, ಕುಂಟಿ, ಕೂಡ, ಕೂರ್ಚಿಗಿ, ಇತರೆ ಕಬ್ಬಿಣದ ಸಲಕರಣೆಗಳನ್ನು ಕಂಬಾರನು ರೈತನಿಗೆ ಮಾಡಿಕೊಟ್ಟನು. ಎಲ್ಲಾ ಮಾನವರಿಗಿಂತ ಮೇಲಾಗಿ ನಿಂತನು ಕಂಬಾರನು ಅವನ ವೃತ್ತಿಗೆ, ಪ್ರೀತಿ ಗೌರವಕ್ಕೆ, ಶ್ರಮಕ್ಕೆ ಮೆಚ್ಚಿ ಜನರು ಕಂಬಾರನು ಅಪ್ಪಿಕೊಂಡರು ಎಂದು ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಹಾಡಿದ್ದಾರೆ.

ಹುಟ್ಟುತಲೆ ಕುಡುಗೋಲು ಮತ್ತೆ ಗುದ್ದಲಿ ಸಲಿಕೆ
ಮತ್ತೆ ಮತ್ತೆ ಮನೆಗೆ ಬೀಗ ಮುದ್ದಿ
ಕರ್ತು ಅಲ್ಲವನೆಂದು ಅರ್ಥಿಯಲಿ ಸಲಹಿದ
ಕರ್ತು ಹೌದಯ್ಯ ಕಂಬಾರನು
ಮುಂಡ ಕಲಿಯುದರೆಲ್ಲ ಕೊಂಡರು ನಮಗಿನ್ನು
ಬಂಡಿಯ ಮಾಡಿದ ನ್ಯೆಯ್ಯ ಕಂಬಾರನು
ದುಡು ಮಾರ್ಬಲವೆಲ್ಲ ಮಂಡಿಸಿ ಜಗದೊಳಗೆ
ಕೆಂಡಗಣ್ಣಿನವನಯ್ಯ ಕಂಬಾರನು
ಸೃಷ್ಟಿಯೊಳಗೆ ಮೆರೆವ ಕ್ಷೀರ ಸಾಗರದೊಡಿಯ
ಪುರಂದರ ವಿಠಲದಾಸ ಹೇಳಿದ ಶ್ರುತಿಯೂ
ಘಚ್ಚ್ಯಾಗಿ ಕಂಬಾರ ಕಲಿಯುಗಕೆ ಗುರುಸ್ವಾಮಿ
ಸಿಟ್ಟಾಗ ಬೇಡಿರಣ್ಣ ಶಿವತಾನೆ ಬಲ್ಲ

ಕಂಬಾರನ ವೃತ್ತಿ ತಲೆ ತಲಾಂತರದಿಂದ ಬಂದ ವೃತ್ತಿಯಾಗಿದೆ. ಈ ಸಮಾಜಕ್ಕೆ ಕಂಬಾರನ ಕಲೆ, ಕ್ರಿಯೆ, ಪ್ರಮುಖವಾದುದು ರೈತಾಪಿ ಉಪಕರಣಗಳನ್ನು ಮಾಡುವಲ್ಲಿ ಕಂಬಾರನು ಎತ್ತಿದ ಕೈ ಕುಡಗೋಲು, ಗುದ್ದಲಿ, ಸಲಿಕೆ, ನೇಗಿಲು, ಬಂಡಿ, ಇವು ರೈತನಿಗೆ ಬೇಕಾದ ಕಬ್ಬಿಣದ ಉಪಕರಣಗಳು ಜೊತೆಗೆ ಮನೆಯ ಭದ್ರತೆ ಕಾಪಾಡುವಂತ ವಸ್ತು ಎಂದರೆ ಮನೆಯ ಬೀಗ ಅದನ್ನು ಸಹ ಕಂಬಾರನಿಂದಲೆ ತಯಾರಿಸುವಂತದ್ದು ಎಂದು ಪುರಂದರದಾಸರು ಕಂಬಾರ ವೃತ್ತಿಯ ಬಗೆಗೆ ಅವರ ಕೀರ್ತನೆಗಳಲ್ಲಿ ವರ್ಣಿಸಿದ್ದಾರೆ.

**ಮೌಖಿಕ ಸಾಹಿತ್ಯದಲ್ಲಿ ಕಮ್ಮಾರರು**

ಜನಪದ ಕಲೆ ಪ್ರಾಚೀನ ಕಾಲದಿಂದ ಆನುವಂಶಿಕವಾಗಿ ಬೆಳೆದುಕೊಂಡು ಬಂದಿದೆ. ಜನಪದ ಹಾಡುಗಳ ಮುಖ್ಯ ಉದ್ದೇಶ. ಮಾನಸಿಕ ನೆಮ್ಮದಿ. ಇದರಿಂದ ಹೃದಯ ಸಂಸ್ಕಾರವಾಗುತ್ತದೆ. ಇದರ ಜೊತೆಗೆ ನಂಬಿಕೆ, ದೈವಾರಾಧನೆ, ಜೀವನ ದರ್ಶನ, ಸೌಂದರ್ಯ ದರ್ಶನ ಮುಂತಾದವು ಮಾನವನ ಕಲೆಯ ಸಂಸ್ಕೃತಿಯ ಪ್ರತೀಕವಾಗಿವೆ.

ಜನಪದ ಕಾವ್ಯಗಳಲ್ಲಿ ಅತ್ಯಂತ ಮಹತ್ವವುಳ್ಳ ಕೃತಿ ಮಂಟೇಸ್ವಾಮಿ ಕಾವ್ಯ. ಮೈಸೂರು ಪ್ರಾಂತದಲ್ಲಿ ಹೆಚ್ಚು ಪ್ರಚಲಿತವಿರುವ ಈ ಕಾವ್ಯ ಸಿದ್ಧಪ್ಪಾಜಿಯ ಹುಟ್ಟು, ಬೆಳವಣಿಗೆ ಮತ್ತು ನಡೆದುಬಂದ ದಾರಿ ಇವುಗಳ ಕುರಿತು ಯಥಾರ್ಥವಾದ ಮಾಹಿತಿಯನ್ನು ಒದಗಿಸುತ್ತದೆ.

ಸಿದ್ಧಪ್ಪಾಜಿ ಮೂಲತಃ ಕಮ್ಮಾರನಾಗಿದ್ದು ಆತನ ಕುರಿತು ವಿವರಗಳನ್ನು ನೀಡುವುದರ ಜೊತೆಗೆ ಪಾಂಚಾಳ ಒಕ್ಕಲುಗಳಾದ ಕಾಳೋಜಿ, ಎಂಬೋಜಿ, ಬೇಟೋಜಿ, ಎರಡೋಜಿ, ನಿಂಗೋಜಿ, ಇವರಿಗೆ ಕುಲುಮೆಗಳು, ಕುಲುಮೆಗಳಲ್ಲಿ ತಲಕಾಡಿನ ಸಖಿ ಚಾಮರಾಜ ಒಡೆಯರಿಗೆ ಕತ್ತಿ, ಫಿರಂಗಿ, ಬಂದೂಕು ಮುಂತಾದವುಗಳನ್ನು ತಯಾರು ಮಾಡಿಕೊಡುತ್ತಿದ್ದರು ಎಂದು ಉಲ್ಲೇಖಿಸಲಾಗಿದೆ.

> ಕಬ್ಬಿಣ ಮಾಡ ಹುಡ್ಗ ಕುಲ್ಮಿ ಈಚೆಗೆ ಬಾರೋ
> ಬುತ್ತಿ ತಂದಿವ್ನಿ ಉಣಬಾರೋ ನಿನಗಾಗಿ
> ಕಬಿ ತಂದಿವ್ನಿ ತಿನಬಾರೋ[೨೨]

ಜನಪದ ಸಾಹಿತ್ಯದಲ್ಲಿ ಇಂತಹ ಹಾಡುಗಳು ಸಿಗುವುದು ಸಹಜ. ಹಾಗೆಯೇ ಪಾಂಚಾಳರ ಕಮ್ಮಾರಿಕೆ ವೃತ್ತಿಯಲ್ಲಿ ತೊಡಗಿದ ಹುಡುಗನ ಕುರಿತು ಹಾಡುವಂತದ್ದು. ಅವನಿಗೆ ಊಟದ ಸಂದರ್ಭದಲ್ಲಿ ಅವರ ಅತ್ತೆ ಅಥವಾ ತಾಯಿ ಹಾಡಿನ ಮೂಲಕ ಕರೆಯುವಂಥದ್ದು.

> ಕತ್ತರಿ ಕುರ್ಚಿಗಿ ಗುದ್ದಲಿ ರೆಂಪಿಗಿ ಲೆಕ್ಕಣಿಕೆ
> ಹೊನ್ನ ರೊಕ್ಕವ ಮಾಡಿದಾ
> ಕತ್ತಿ ಕಠಾರಿ ಬಿಲ್ಲು ಬಾಣ ಮೊಬಕಿ ತೊಪು ಮಾಡಿದ[೨೩]

ಈ ಹಾಡಿನಲ್ಲಿ ಕತ್ತರಿ, ಕುರ್ಚಿಗಿ, ಬಗೆಯುವ ಗುದ್ದಲಿ, ಚಮ್ಮಾರನ ರೆಂಪಿಗೆ ಬರೆಯುವ ಲೆಕ್ಕಣಿಕೆ ಯುದ್ಧಕ್ಕೆ ಕತ್ತಿ ಕಠಾರಿ, ಬಿಲ್ಲು, ಬಾಣ, ಗುಂಡುಗಳನ್ನು ಕಮ್ಮಾರರೆ ತಯಾರಿಸುತ್ತಾರೆ. ಇವರಿಂದ ನಿರ್ಮಾಣವಾದಂತವು ಎಂದು ತಿಳಿಯಬಹುದು.

**ಬಡಿಗ**

ಪಾಂಚಾಳ ಸಮುದಾಯದ ಒಂದು ವೃತ್ತಿಯಾದ ಬಡಗಿತನವು ಕರಕುಶಲ ಕಲೆಗಳಲ್ಲಿ ಒಂದಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಆಧುನಿಕ ಯಂತ್ರಗಳ ಬಳಕೆಯಿಂದ ಬಡಗಿತನದ ಸಾಂಪ್ರದಾಯಿಕ ಕಲಾತ್ಮಕತೆಯನ್ನು ಕಳೆದುಕೊಂಡಿದೆ. ಕಟ್ಟಿಗೆಯ ಕೆಲಸವನ್ನು ನಿರ್ವಹಿಸುವವರಿಗೆ ಸಾಮಾನ್ಯವಾಗಿ ಬಡಿಗೇರ, ಬಡಿಗೆಪ್ಪ, ಆಚಾರಿ, ಎಂದೆಲ್ಲ ಕರೆಯಲಾಗುತ್ತದೆ. ಈ ಪದ ಸಂಸ್ಕೃತದ **ವರ್ಧ** ಅಂದರೆ ಕತ್ತರಿಸು ಎಂಬ ರೂಪ, **ವರ್ಧಕಿ>ವದ್ಮಕಿ>ಬಡ್ಢಕಿ(ಗಿ) ಬಡಗಿಯಾಗಿ** ಬಳಕೆಗೆ ಬಂದಿರಬಹುದೆಂದು ಹೇಳಲಾಗುತ್ತದೆ. ಜನ ಬಳಕೆಯ ಹಾಗೂ ಚಾರಿತ್ರಿಕ ಪ್ರಯೋಗಗಳನ್ನು ಗಮನಿಸಿದರೆ ಬಡಗಿ–ಬಡಿಗಿ–ಅಚ್ಚಕನ್ನಡ ರೂಪವೆಂದು ತೋರುತ್ತದೆ. ಅದು ಸಂಸ್ಕೃತಕ್ಕೆ ಭಾಷಾಂತರವಾಗ ವರ್ಧಕಿ ಆಗಿರಬಹುದು. ಹಲವಾರು ರಾಜಮನೆತನಗಳು ಬಡಗಿ ಕೆಲಸಕ್ಕೆ ಸಂಬಂಧಿಸಿದಂತೆ ದಾನದತ್ತಿಗಳನ್ನು ಬಿಟ್ಟಿದ್ದು ಶಾಸನಗಳಲ್ಲಿ ಉಲ್ಲೇಖಗಳಾಗಿವೆ.

ಕ್ರಿ.ಶ.೧೪೩೧ರ ಮಾಲೂರು ತಾಲೂಕಿನ ತೇಕಲ್ಲು ಶಾಸನದಲ್ಲಿ ಮಹಾ ಮಂಡಳೇಶ್ವರನಾದ ಸಾಳುವ ಗೋಪರಾಜವೊಡೆಯರ ಪ್ರಧಾನಿಯಾದ ಸಿಂಗರಾಜನು ತೇಕಲ್ಲಿನ ವರದರಾಜ ದೇವರ ಮುಖಮಂಟಪದ ಗೋಪುರಕ್ಕೆ ಬಾಗಿಲು ಮಾಡಿದ ಬಡಗಿ ಬೇಟೋಜದೇವನಿಗೆ ಭೂದಾನ ನೀಡುತ್ತಾನೆ. ಅಷ್ಟೇ ಅಲ್ಲದೇ, ಕುದುರೆ ಸತ್ತಿಗೆಗಳನ್ನು ಲಾಂಛನವಾಗಿ ನೀಡಿದ ವಿವರಗಳು ದೊರೆಯುತ್ತವೆ. ಬಡಗಿ ವೃತ್ತಿಗಳು ಕೇವಲ ಕೂಲಿ ವೃತ್ತಿಗಳಾಗಿರಲಿಲ್ಲ ಎನ್ನುವುದು ತಿಳಿಯುತ್ತದೆ.[೨೪]

ಕ್ರಿ.ಶ.೧೪೮೦ರ ಶಾಸನದಲ್ಲಿ ಬಡಗಿ ಲಿಂಗೋಜನು ಜಗಳೂರು ತಾಲ್ಲೂಕು ನಿಬಗೂರಿನಲ್ಲಿ ಆಂಜನೇಯ ಗುಡಿಯ ಕೆಲಸ ಮಾಡುತ್ತಾನೆ. ಇದಕ್ಕಾಗಿ ಗೌಡನು ಇವನಿಗೆ ಅರವತ್ತು ಒಕ್ಕಲು ಮಾನ್ಯವನ್ನು ಕೊಡುತ್ತಾನೆ.[೨೫]

ಕ್ರಿ.ಶ.೧೨೨೯ರ ವಿಜಾಪುರದ ಖ್ವಾಜಾಜಹಾನ್ ಮಸೀದಿ ೨ನೆಯ ಕಂಬದಲ್ಲಿ ದೊರೆತ ಶಾಸನದಲ್ಲಿ ಸ್ಥಾನಾಚಾರ್ಯ ಸರ್ವಜ್ಞ ರಾಶಿ ದೇವನಿಂದ ಸ್ವಯಂಭು ಶಿವಲಿಂಗ ದೇವಾಲಯಕ್ಕೆ ಬಡಗಿ ಕಾಮೋಜನ ಮಗ ಮಲ್ಲನಿಗೆ ಭೂದಾನ ನೀಡಿದ ವಿವರವಿದೆ.[೨೬]

ಅರಮನೆಗಳಲ್ಲಿ ಕಾಣಸಿಗುವ ಸಿಂಹಾಸನ, ತೂಗುಮಂಚ, ಮಲಗುವ ಮಂಚ, ಬಾಗಿಲುಗಳು, ಕುರ್ಚಿ ಇತ್ಯಾದಿ ಉಪಕರಣಗಳು ಅತ್ಯುತ್ತಮ ಕಲಾಮಾದರಿಗಳಾಗಿ ಕಾಣಲು ಬಡಗಿಯ ಪ್ರತಿಭೆಯ ಬಗ್ಗೆ ನಮಗೆ ತಿಳಿಯುತ್ತದೆ. ಈ ಬಡಗಿತನ ವೃತ್ತಿಗಳಲ್ಲಿ ದೈಹಿಕ ಪರಿಶ್ರಮವುಳ್ಳ ಕೆಲಸ. ಬಡಗಿತನಕ್ಕೆ ಪ್ರಾಚೀನ ಕಾಲದಲ್ಲಿ ಯಾವುದೇ ಯಂತ್ರೋಪಕರಣಗಳಿದ್ದಿಲ್ಲ. ಇಂತಹ ಸಂದರ್ಭಗಳಲ್ಲಿ ಬಡಗಿಯು ಮರಗಳನ್ನು ಕೊರೆದು, ಕೆತ್ತಿ ರೈತರಿಗೆ ಬೇಕಾದ ಪರಿಕರಗಳ ತಯಾರಿಕೆಗೆ ಬೇಕಾಗುವ ಅಳತೆಗೆ ತಂದುಕೊಂಡು ಕೆಲಸ ನಿರ್ವಹಿಸುತ್ತಿದ್ದರು.

ಕೊಪ್ಪಳ ಜಿ. ಕುಕನೂರು ಗ್ರಾಮದ ಮಹಾಮಾಯಾ ಗುಡಿಯ ಮಹಾಗೋಪುರದ ಬಾಗಿಲಿನ ಮೇಲಿನ ಒಂದು ಶಾಸನವು ಹೇಳುವ ಪ್ರಕಾರ ಆ ಬಾಗಿಲನ್ನು ಮಾಡಿದವನು ಬಡಗಿ ಬಸವೋಜನ ಮಗ ಗಣೋಜ ಎಂದು ತಿಳಿಯುತ್ತದೆ.

ಆಧುನಿಕ ಯುಗದಲ್ಲಿ ಮರವನ್ನು ಯಂತ್ರದಿಂದ ಕೊಯ್ದು ಉಪಕರಣಗಳನ್ನು ತಯಾರು ಮಾಡುವುದರಿಂದ ಗಟ್ಟಿತನ ಉಳಿಯುವುದಿಲ್ಲ. ಯಂತ್ರದಿಂದ ಮರವನ್ನು ಕೊಯ್ಯುವ ಸಂದರ್ಭದಲ್ಲಿ ಸಾರಾಸಗಟಾವಾಗಿ ಕೊಯ್ಯಲಾಗುತ್ತದೆ. ಮರದ ಮಧ್ಯದಲ್ಲಿ ಬರುವ ಕೆಚ್ಚು(ಗಟ್ಟಿತನ) ಕಟ್ಟಿಗೆಯಲ್ಲಿ ಉಳಿದುಕೊಳ್ಳುವುದಿಲ್ಲ. ಏಕೆಂದರೆ ಮರವನ್ನು ಕೊಯ್ಯುವ ಸಂದರ್ಭದಲ್ಲಿ ಮರದ ಮಧ್ಯಭಾಗವನ್ನೇ ಸೀಳುವುದರಿಂದ ಅದರಲ್ಲಿರುವ ಕೆಚ್ಚು ಹೋಗಿ ಮೇಲ್ಭಾಗ ಮಾತ್ರ ಉಳಿದುಕೊಳ್ಳುವ ಸಾಧ್ಯತೆಗಳು ಹೆಚ್ಚು. ಆದುದರಿಂದ ಉಪಕರಣಗಳು ಗಟ್ಟಿಗೊಳ್ಳುವುದಿಲ್ಲ. ಆದರೆ ಬಡಗಿಯ ಕೈಯಿಂದ ತಯಾರಿಸುವ ಮರದ ವಿವರವನ್ನು ತಿಳಿಯುತ್ತಾನೆ.

ಬಡಗಿ ಸಮುದಾಯದವರು ಸಮಾಜದ ಜೊತೆ ಹಲವು ರೀತಿಯಲ್ಲಿ ನಿಕಟ ಸಂಬಂಧವನ್ನು ಹೊಂದಿರುತ್ತಾರೆ. ಈ ಸಮುದಾಯವು ಇತರೆ ಸಮುದಾಯವನ್ನು ಅವಲಂಬಿಸದೇ ಜೀವಿಸುವುದು ಕಷ್ಟ. ಹಾಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಅವರ ವೃತ್ತಿಯ ಬಗ್ಗೆ ಒಳಹೊಕ್ಕು ನೋಡಿದಾಗ ಈ ಅಂಶ ಕಂಡುಬರುತ್ತದೆ. ಜೀವನೋಪಾಯಕ್ಕಾಗಿ ವೃತ್ತಿಯನ್ನು ಅವಲಂಬಿಸಿದ ಇವರು ಇತರ ಸಮುದಾಯಗಳೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಜೀವನ ಸಾಗಿಸುತ್ತಾ ಬಂದಿರುವುದನ್ನು ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು.

ದುರ್ಗಸಿಂಹನ ಪಂಚತಂತ್ರ ಕಥೆಯಲ್ಲಿನ ಕೀಲನುರ್ಚಿನ ಕೋಡಗನ ಕಥೆಯಲ್ಲಿ ಬಡಗಿಯ ಉಲ್ಲೇಖ ಬರುತ್ತದೆ. ಕರ್ಮಕಾರರು ದೇವಸ್ಥಾನದ ಕೆಲಸಕ್ಕಾಗಿ ನೂಲು ಹಾಕಿ ಮರದ ದಿಮ್ಮಿಯೊಂದನ್ನು ಕೊರೆಯುತ್ತಿರುತ್ತಾರೆ. ಕತ್ತಲಾಗಲು ಮರುದಿನ ಕೊರೆಯಲು ಅನುಕೂಲವಾಗಲೆಂದು ಅರ್ಧ ಕೊರೆದ ಸೀಳಿನಲ್ಲಿ ಕೀಲನ್ನು ಬಡಿದಿರುತ್ತಾರೆ. ಹೀಗಿರುವಾಗ ಮಂಗಗಳ ಗುಂಪೊಂದು ಅಲ್ಲಿಗೆ ಚೆಲ್ಲಾಟವಾಡುತ್ತ ಬರುತ್ತವೆ. ಅದರಲ್ಲೊಂದು ಗೋಲಾಂಗೂಲವು ಬಂದು ಆ ದಿಮ್ಮೆಯ ಮೇಲೆ ಕುಳಿತು ಕರ್ಮಕಾರರು ಸೀಳಿನಲ್ಲಿ ಬಡಿದಿದ್ದ ಕೀಲನ್ನು ಕಿತ್ತುತ್ತದೆ. ಆಗ ಅದರ ಮರ್ಮಭಾಗ ಆ ಸೀಳಿನಲ್ಲಿ ಸಿಕ್ಕು ಆ ಮಂಗ ಸತ್ತೆ ಹೋಗುತ್ತದೆ. ನೀತಿಯೊಂದನ್ನು ಹೇಳಲು ಈ ಕತೆಯನ್ನು ಬಳಸಲಾಗಿದೆ.

ಸರ್ವಜ್ಞನ ತ್ರಿಪದಿಗಳಲ್ಲಿಯೂ ಬಡಿಗೇರ ಉಲ್ಲೇಖಗಳು ಕಂಡುಬರುತ್ತವೆ.

ಹಡಗು ಕಡಲಿಗೆ ಬೇಕು, ಗುಡುಗು ಮಿಂಚಿಗೆ ಬೇಕು
ಕಡಗದಾ ಕೈಯ ಸೊಸೆ ಬೇಕು। ಊರಿಂಗೆ
ಬಡಗಿ ತಾ ಬೇಕು ಸರ್ವಜ್ಞ[೨೭]

ಈ ತ್ರಿಪದಿ ಸಮಾಜಕ್ಕೆ ಬಡಗಿಯ ಅವಶ್ಯಕತೆಯನ್ನು ಹೇಳುತ್ತದೆ.

ಗದ್ದರಿಸಿ ಮಳಿದೇವ ಬಿದ್ದನ ಭೂಮಿಗಿ
ಎದ್ದನೊಕ್ಕಲಿಗ ಬೆಳತನ। ಕೂರಿಗಿ ಕುಂಟಿ
ತಂದಾನ ಬಡಗಿ ಅರಮನಿಗಿ[೨೮]

ಎನ್ನುವಲ್ಲಿ ಮಳೆಯಿಂದ ಹುಟ್ಟಿಕೊಳ್ಳುವ ಕೃಷಿ ಬದುಕಿನ ಚಿತ್ರಣವನ್ನು ಕಟ್ಟಿಕೊಡುತ್ತದೆ. ಮಳೆಯಿಲ್ಲದ ವ್ಯವಸಾಯ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಬಡಗಿ ಇಲ್ಲದೆ ವ್ಯವಸಾಯವು ಸಾಧ್ಯವಿಲ್ಲ ಎನ್ನುವ ಅಂಶವು ಸರ್ವಜ್ಞನ ತ್ರಿಪದಿಯಿಂದ ವ್ಯಕ್ತವಾಗುತ್ತದೆ.

**ವಚನ ಸಾಹಿತ್ಯ**

ತಿಂಥಣಿ ಮೌನೇಶ್ವರರ ವಚನದಲ್ಲಿ ಬಡಿಗೇರ ಉಲ್ಲೇಖಗಳಿವೆ.

ಬಡಗಿ ಮಾಡಿದನೊಂದು ಬೆಡಗಿನ ಮೂರ್ತಿಯ
ಷಡುದರುಶನವಲ್ಲ ಅಡಿಮಾಡಿ ನಡೆಸಿದನು
ಒಡೆಯನ ಗುರುತ ತಿಳಿಯರು
ಬಿಡರ್‍ಯಾಕ ತಮ್ಮ ವೇದಶಾಸ್ತ್ರವ, ಬಸವಣ್ಣ[೨೯]

ವಿಶ್ವಕರ್ಮನ ಪಂಚಮುಖಗಳಲ್ಲಿ ಎರಡನೇ ಮುಖದಿಂದ ಹುಟ್ಟಿದ ಮಯಬ್ರಹ್ಮನೇ ಬಡಗಿ ಅಂತಹ ಮನಮೋಹಕವಾದ ಬೆಡಗಿನ ಮೂರ್ತಿಯೊಂದನ್ನು ಮಾಡುತ್ತಾನೆ. ಬೆಡಗಿನ ಮೂರ್ತಿ ಎಂದರೆ ಹೊಸ ಹಾಗೂ ಕ್ರಿಯಾಶೀಲ ಸಮಾಜವೆಂದು ಅರ್ಥ. ಆ ಮೂಲಕ ವೇದಶಾಸ್ತ್ರ ಪುರಾಣಗಳ ಹಂಗಿನಲ್ಲಿ ನಡೆಯುತ್ತಿದ್ದ ಸಾಮಾಜಿಕ ಅಸಮಾನತೆಗಳನ್ನು, ಮೌಢ್ಯಗಳನ್ನು ಹೊಡೆದೋಡಿಸುತ್ತಾರೆ. ಅಂದರೆ, ಷಡುದರುಶನವನ್ನೆಲ್ಲ(ಜೈಮಿನಿಯ ಪೂರ್ವಮೀಮಾಂಸೆ, ಬಾದಾರಾಯಣ ಉತ್ತರ ಮೀಮಾಂಸೆ, ಗೌತಮನ ನ್ಯಾಯ, ಕಣಾದನ ವೈಶೇಷಿಕ, ಕಪಿಲನ ಸಾಂಖ್ಯೆ ಮತ್ತು ಪತಂಜಲಿಯ ಯೋಗ) ತಲೆ ಕೆಳಗು ಮಾಡುವುದೆಂದರೆ ತರ್ಕ, ಪಾಂಡಿತ್ಯ, ಧರ್ಮ, ಜಾತಿಯೆಂಬ ಹುಸಿ ಸಂಸ್ಕೃತಿಯ ಅಸಮಾನ ನೆಲೆಗಳನ್ನು ಕಿತ್ತು ಜಾತ್ಯತೀತ ಹಾಗೂ ಸ್ವತಂತ್ರ ಸ್ವಾವಲಂಬಿ ಸಮಾಜದ ನಿರ್ಮಾಣಕ್ಕೆ ಶ್ರಮಿಸುವುದು ಅಂಥ ಸೃಷ್ಟಿಕರ್ತನಾದ ಗುರು ಮೌನೇಶ್ವರರ ಅನುಗ್ರಹ ಪಡೆದು ಸುಳ್ಳುಶಾಸ್ತ್ರಗಳ ಬಿಡಬೇಕು ಎನ್ನುವುದು ಇಲ್ಲಿನ ಭಾವ.

ಕುಂಟಿ ಕೂರಿಗಿಯ ಅಳೆದ ದಾರ ಬಂದಳತೆಯದು
ಧಾರಣೆಯ ಅಳೆದ ಈ ದಾರ ಯಾರಿಗೆ ಸಲ್ಲುವದು
ವೀರ  ಶೂರ ಉದಾರ ಗಂಬೀರ ವಿಚಾರ
ಮೂರು ದಾರ ಮಾರಿಕೊಂಬುವುದು

ಮಗಳು ಮೈನೆರೆದರೆ ಮರುದಿವಸ ತ್ಯಾಗದವ ಮಾಡುವರು। ಇವರ ಕೊರಳಲ್ಲಿ ದಾರ ಸಲ್ಲುವದೆ ದಿನ ಬರುವ ತನಕ ಹಳೆದಾರ ಹಾಕೆಂದ ಬಸವಣ್ಣ[೩೦]

ಜನಿವಾರದ ವಿಡಂಬನೆಯನ್ನು ಈ ವಚನದಲ್ಲಿ ಕಾಣಬಹುದು. ಜನಿವಾರದ ಅರ್ಥ ತಿಳಿಯದೆ ಹುಸಿಯಿಂದ ವರ್ತಿಸುವ ಜನಗಳ ಬಗ್ಗೆ ತೀಕ್ಷ್ಣವಾಗಿ ಮೌನೇಶ್ವರರು ಮಾತನಾಡಿದರು.

ಬಡಗಿಯಾದವನು ತಾನು ಹಾಸುವ(ತಯಾರಿಸುವ) ಕುಂಟಿ ಕೂರಿಗೆಗಳ ಯಾಸಿ(ಡೊಂಕು) ತೆಗೆಯಲು ಕಡದು ಬಳದು ನೋಡಲು ಯಾಸಿದಾರವನ್ನು ಉಪಯೋಗಿಸಿ ಆ ಕುಂಟಿ ಕೂರಿಗೆಗಳು

ಪ್ರಯೋಜನಕ್ಕೆ ಬರುವಂತೆ ಮಾಡುತ್ತಾನೆ. ವೀರ, ಶೂರ ಉದಾರ ಗಂಭೀರ ವಿಚಾರಗಳನ್ನು ಮನುಷ್ಯ ಅಳವಡಿಸಿಕೊಳ್ಳದೆ ಮೂರೆಳೆ ದಾರವನ್ನು ಧರಿಸಿದರೆ ಪ್ರಯೋಜನವೇನು. ಇನ್ನು ಕೆಲವು ಸಂಪ್ರದಾಯವಾದಿಗಳು ಮಗಳು ಮೈ ನೆರೆದರೆ ಮೈಲಿಗೆಯಾಯಿತೆಂದು ಮರುದಿವಸ ಜನಿವಾರವನ್ನು ವಿಸರ್ಜಿಸುತ್ತಾರೆ. ಹಾಕುವ ತೆಗೆಯುವ ಇಂತಹ ಹುಸಿ ದಾರ ಹಾಗೂ ಹುಸಿ ಆಚರಣೆಗಿಂತ ಯಾವಾಗಲೂ ನಮ್ಮೊಂದಿಗಿರುವ ನಮ್ಮಲ್ಲಿ ಜ್ಞಾನವನ್ನು ವೃದ್ಧಿಸುವ ಜ್ಞಾನದ ದಾರವನ್ನು ಹಾಕಿಕೊಂಡಾಗ ಮಾತ್ರ ಬದುಕು ಸಾರ್ಥಕವಾಗುತ್ತದೆ.

ಬಡಗು ದಿಕ್ಕಿನಿಂದ ಬಡಿಗಿ ಬಂದೈದಿದಾನೆ
ಕಡದು ಬಳದುಗಳ ಸಜ್ಜು ಮಾಡಿ
ಆಯವಾದ ಮರನ ಕಡಿದು
ಛಾಯದ ಗೊಂಬಿಯ ಮಾಡಿ ಆಯ ಆಯದಲಿ
ಕುಣಿಸ್ಯಾಡುವ ಅಲ್ಲಮರಾಯ
ಬಂದನೊ ಮರ್ತ್ಯಕ್ಕೆ ಬಸವಣ್ಣ[೧೯]

ಅಲ್ಲಮಪ್ರಭು ಅವತರಿಸಿ ಬರುತ್ತಾನೆ. ಆತನು ಉತ್ತರ ದಿಕ್ಕಿನಿಂದ ಬರುವ ಒಬ್ಬ ಬಡಗಿ, ತನ್ನ ಕಾಯಕ ಜ್ಞಾನದಿಂದ ಬೇಸಾಯದ ಉಪಕರಣಗಳಲ್ಲಿನ ಕಡದು ಬಳದುಗಳನ್ನು ಸರಿ ಮಾಡುವಂತೆ ಸಮಾಜದ ಅಂಕು ಡೊಂಕುಗಳನ್ನು ತಿದ್ದುತ್ತಾನೆ. ಸೂಕ್ತವಾದ ಮರವನ್ನು ಕಡಿದು ಅದರಿಂದ ಮಾಡಿದ ಗೊಂಬೆಗಳನ್ನು ಕ್ರಮಬದ್ಧವಾಗಿ ಆಯಾ ಸ್ಥಳಗಳಲ್ಲಿ ಕುಣಿಸ್ಯಾಡುವಂತೆ ಸೂಕ್ತವಾದ ವ್ಯಕ್ತಿಗಳನ್ನು ಆಯಾ ಸ್ಥಾನಗಳಲ್ಲಿ ನೆಲೆಗೊಳಿಸಿ ತನ್ನ ಅಪ್ಪಣೆಯಂತೆ ನಡೆಯುವಂತೆ ಮಾಡುತ್ತಾನೆ. ಇದಕ್ಕೆ ಹೊಂದುವಂತಹ ಲೀಲಾಪುರುಷ ಇದುವರೆಗೂ ಬಂದಂತಿಲ್ಲ. ಇನ್ನು ಮುಂದೆ ಏನಾದರೂ ಬರುವನೇನೂ ಎಂದು ಊಹಿಸುವಂತಿದೆ.

ಒಕ್ಕಲಿಗ ಮುದ್ದಣನ ವಚನದಲ್ಲಿ ಬರುವ ಕಾರುಕನ ಕೈಲಿ ಸುಬದ್ಧಿಸಿ ಶುದ್ಧೈಸಿ ಎನ್ನುವ ಮಾತು ಬಿದ್ದ ಮರವ ತಂದು ವ್ಯವಸಾಯೋಪಕರಣಗಳನ್ನು ಮಾಡಿಸುವ ಕ್ರಿಯೆಯನ್ನು ಹೇಳುತ್ತದೆ. ಬಾಚಿಕಾಯಕದ ಬಸವಯ್ಯ ಕಾಮಾಟದ ಭೀಮಣ್ಣ ಇವರು ಬಡಗಿ ವೃತ್ತಿಯನ್ನು ಮಾಡಿಕೊಂಡು ಬಂದಿರುತ್ತಾರೆ.

ಆರು ದರುಶನವೆಲ್ಲ ಎನ್ನ ಬಾಚಿಯ ಕಲೆ
ಮಿಕ್ಕಾದ ಮೀರದ ಅವಧೂತರುಗಳೆಲ್ಲ
ಎನ್ನ ಕೊಡತಿಯಲ್ಲಿ ಒಡೆಯಿಸಿ ಕೊಂಬುವ ಬಡಿಹೋರಿಗಳು
ಇಂತೀ ವಿಶ್ವಗೋಧರೆಲ್ಲರೂ
ಕರ್ತಾರನ ಕಮ್ಮಟದ ನಕ್ಕು ಬಚ್ಚನೆಯ ಚಿಕ್ಕಮಗಳು

ಹೀಗೆ ಬಾಚಿಕಾಯಕದ ಬಸವಯ್ಯನ ವಚನದಲ್ಲಿ ಷಡುದರುಶನಗಳನ್ನು ಮತ್ತು ಅವಧೂತರುಗಳನ್ನು ಬಾಚಿ ಮತ್ತು ಉಳಿಯ ರೂಪಕದೊಂದಿಗೆ ಹಿಡಿದಿಟ್ಟಿರುವುದು ಅರ್ಥಪೂರ್ಣವೆನಿಸುತ್ತದೆ. ಅಪೌರುಷೇಯ ಎಂದು ಹೇಳಿಕೊಳ್ಳುವ ವೇದ, ಪುರಾಣ, ದರ್ಶನಗಳನ್ನೆಲ್ಲ ಸಾಮಾನ್ಯೀಕರಿಸುವ ಅದನ್ನು 'ಬಾಚಿಯೊಳಗಿನ

ಕಲೆ' ಎಂದು ಗುರುತಿಸುವ ರೀತಿ ಮೌಲಿಕವಾದುದು. ಬಾಚಿಯ ಕಲಾತ್ಮಕ ಬಳಕೆಯಿಂದ ಕಾಡು ಕಟ್ಟಿಗೆ ಕಲಾಕೃತಿಯಾಗಿ ರೂಪಗೊಳ್ಳುವಾಗ ಕಲೆ ಮುಂದೆ ಬಂದು ಕಟ್ಟಿಗೆಯ ಅಂಶ ಹಿಂದೆ ಸರಿಯುತ್ತದೆ. ಎನ್ನ ಕೊಡತಿಯಲ್ಲಿ ಒಡೆಯಿಸಿ ಕೊಂಬುವ ಬಡಿಹೋರಿಗಳು ಎನ್ನುವಲ್ಲಿ ಬಡಿಹೋರಿ ಎನ್ನುವ ರೂಪಕ ವ್ಯಾಪಾರ ಅರ್ಥಾವರಣವುಳ್ಳಂಥದ್ದು ಬಡಿಹೋರಿ ಎಂದರೆ ಸಾಮಾಜಿಕಾರ್ಥದಲ್ಲಿ ತಾರುಣ್ಯ ತುಂಬಿದ ಯೌವ್ವನದ ಮದವೇರಿದ ಗೊಳಿ(ಎತ್ತು) ವಿಶ್ವಕರ್ಮ ತಾತ್ವಿಕತೆಯಲ್ಲಿ ಅದಕ್ಕೊಂದು ಚಾರಿತ್ರಿಕ ಪರಿಕಲ್ಪನೆಯಿರುವುದು ಗಮನೀಯವಾಗಿದೆ.[೩೨]

ಬಾಚಿ ಎನ್ನುವುದು ಜನಪದ ಬದುಕಲ್ಲಿ ವಿಶೇಷವಾಗಿ ಕೃಷಿ ಬದುಕಿನಲ್ಲಿ ಸೃಷ್ಟಿಯ ಸಂಕೇತ. ಇದನ್ನು ಬಳಸಿ ರೂಪವನ್ನು ಸ್ವರೂಪದ ನೆಲೆಯಲ್ಲಿ ಪಡೆಯುವುದು ಇನ್ನೊಂದು ಕಲೆ.

ಆಶೆಯಂತೆ ಬಾಚಿಯಲ್ಲಿ ಭವಪಾಶವಿಲ್ಲದ ಜಂಗಮಕೆ ತೆತ್ತ
ರೋಷವಿಲ್ಲದ ಉಳಿಯಲ್ಲಿ ನಿಜ ವಾಸವನೋಡಿ ಹಾಗಿಲುದೆಗೆವುತ್ತ
ಭಾಷೆಗೆ ಉಣವಿಲ್ಲದ ಸದ್ಭಕ್ತರ ಆಶ್ರಯಕೆ
ನಿಜ ವಾಸವ ಮಾಡುವ ಕಾಯಕ
ಈ ಗುಣ ಬಾಚಿಯ ಬಸವಣ್ಣನ ನೇಮ[೩೩]

ವಚನದ ಮೊದಲ ಸಾಲು ಆಶೆಯಂತೆ ಬಾಚಿಯಲ್ಲಿ ಭವಪಾಶವಿಲ್ಲದ ಜಂಗಮಕೆ ತೆತ್ತ ಎಂದು ಇದೆ. ವಚನದ ಮುಂದಿನ ಸಾಲುಗಳ ಆಶಯವನ್ನು ಗಮನಿಸಿದರೆ 'ಜಂಗಮಕೆ ತೆತ್ತ' ಎನ್ನುವದರ ಬದಲಾಗಿ ಜಂಗಮಕೆತ್ತಿ ಎಂದಿರಬಹುದು. ಹಾಗಿದ್ದರೆ ಮಾತ್ರ ವಚನಕ್ಕೆ ಒಂದು ಪೂರ್ಣಾರ್ಥ ಪ್ರಾಪ್ತಿಯಾಗುತ್ತದೆ. ಬಾಚಿಯಲ್ಲಿ ಕೆತ್ತಿ ಉಳಿಯಿಂದ ಹುಗಿಲು(ತೂತು) ತೆಗೆದು ಸದ್ಭಕ್ತರಿಗೆ ಮನೆ ನಿರ್ಮಾಣ ಮಾಡುವ ಒಂದು ಕ್ರಿಯಾಸರಣಿ ವಚನದಲ್ಲಿದೆ. ಹೀಗಾಗಿ ಜಂಗಮ ಕೆತ್ತಿ(ಸ್ವರೂಪೀಕರಿಸುವ ಕ್ರಿಯೆ) ಎನ್ನುವ ಪಾಠವೇ ಸರಿಯೆಂಬುದು. ಡಾ. ವೀರೇಶ ಬಡಿಗೇರ ಅವರ ಅಭಿಪ್ರಾಯ.

ಬಾಚಿಕಾಯಕದ ಬಸವಯ್ಯನ ಪುಣ್ಯ ಸ್ತ್ರೀ ಕಾಳವ್ವನ ವಚನ

ಕೈತಪ್ಪಿ ಕೆತ್ತಲು ಕಾಲಿಂಗ ಮೂಲ
ಮಾತು ತಪ್ಪಿ ನಡೆಯಲು ಬಾಯಿಗೆ ಮೂಲ
ವ್ರತ ಹೀನನ ನೆರೆಯಲು ನರಕಕ್ಕೆ ಮೂಲ
ಕರ್ಮಹರ ಕಾಳೇಶ್ವರ[೩೪]

ಈ ವಚನದಲ್ಲಿ ಶರೀರದ ಅಜಾಗರೂಕತೆಯಿಂದಾಗುವ ಅನಾಹುತಗಳನ್ನು ಕಾಣಬಹುದಾಗಿದೆ. ಅಂದರೆ ಕ್ರಿಯೆ ಅರಿವು ಇವುಗಳ ಮಹತಿಯನ್ನು ಹೇಳುತ್ತದೆ. ವಿಶ್ವಕರ್ಮದಲ್ಲಿ ಅಗ್ನಿ, ಜಲದ ಸಾತತ್ಯ ಇರುವಂತೆ ಕ್ರಿಯೆ-ಅರಿವುಗಳು ಸಾತತ್ಯವಾಗಿರಬೇಕೆನ್ನುವುದು ಬಸವಯ್ಯನ ವಚನಗಳ ಆಶಯವಾಗಿದೆ. ಕೈತಪ್ಪಿ ಕೆತ್ತಲು ಕಾಲಿಂಗ ಮೂಲ ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ ಈ ವಚನವು ಕ್ರಿಯೆ ಮತ್ತು ಅರಿವಿನ ಮಧ್ಯದ ಗಾಢ ಸಂಬಂಧದ ನೆಲೆಗಳನ್ನು ಗ್ರಹಿಕೆಗೆ ತರುತ್ತದೆ. ಬಡಗಿ ವೃತ್ತಿಯ

ರಚನಾತ್ಮಕ ಸ್ವರೂಪವನ್ನು ಬಿಚ್ಚಿ ತೋರುತ್ತವೆ. ಒಂದು ದೊಡ್ಡ ಕೊರಡನ್ನು ಕೆತ್ತಿ ಮೂರ್ತಿಗೊಳಿಸುವ ಸಂದರ್ಭದಲ್ಲಿ ಕೊರಡನ್ನು ಕಾಲುಗಳ ಮಧ್ಯ ಇಟ್ಟುಕೊಂಡು ಎದ್ದು ನಿಂತು ಬಾಚಿಯಿಂದ ಎತ್ತಿ ಕೆತ್ತ ಬೇಕಾಗುತ್ತದೆ. ಎತ್ತಿದ ಬಾಚಿ ಅಳತೆಯಿಂದ ಕಟ್ಟಿಗೆ ಮೇಲೆ ಬಂದು ಬೀಳುತ್ತದೆ. ಕೊರಡು ಅಲ್ಲಾಡದಂತೆ ಮುಂದೊಬ್ಬ ಕುಳಿತು ಅದನ್ನು ಅಡಿಕಟ್ಟಿಗೆ ಒತ್ತಿ ಹಿಡಿದಿರುತ್ತಾನೆ. ಇಂಥ ಸಂದರ್ಭದಲ್ಲಿ ಹರಿತವಾದ ಬಾಚಿಯನ್ನು ಹಿಡಿದುಕೊಂಡು ಕೊರಡು ಕೆತ್ತುವ ಬಡಗಿನ ಮನಸ್ಸು ಚಂಚಲವಾದರೆ ಮುಂದೆ ಕುಳಿತ ಅವನ ಕೈಗೆ ಅಥವಾ ತಲೆ ಕೊಚ್ಚಿ ಹೋಗುವ ಸಾಧ್ಯತೆ ಒಂದಾದರೆ ಸ್ವಂತಃ ಬಡಗಿಯ ಕಾಲೇ ಕತ್ತರಿಸಿ ಹೋಗುವ ಅಪಾಯ ಇನ್ನೊಂದು ಸ್ವರೂಪದ್ದು.

ಬಸವಯ್ಯನ ಹೇಳುವಂತೆ ಹೊರಗಿನ ತಿಗುಡಂ ಬಾಚಿಯಿಂದ ಸವೆದ ಒಳಗಿನ ತಿಗುಡ ಉಳಿಯಿಂದ ಸವೆದ ಎನ್ನುವ ಮಾತುಗಳು ಈ ಎರಡು ಆಯುಧಗಳ ಬಳಕೆಯ ರೀತಿಗಳನ್ನು ಅರಿವಿಗೆ ತರುತ್ತದೆ.

ಬಡಿಗೇರ ಬಾಬಣ್ಣ ಕಾಯಕವ ಮಾಡಿದ ವಚನದಲ್ಲಿ 'ಬಡಗಿ ತನ್ನ ವೃತ್ತಿಯ ಉಪಕರಣಗಳು ವಚನದಲ್ಲಿ ಉಲ್ಲೇಖಗಳಿವೆ.

> ಹಿಡಿಯಿಲ್ಲದ ಉಳಿ, ಕಾವಿಲ್ಲದ ಬಾಚಿ, ಹಲ್ಲಿಲ್ಲದ ಕರಗಸ
> ಇಂತಿ ಆಯುಧದಿಂದ ಕಟ್ಟಿದಮನೆ ಕೆಡವಿ
> ತೊಲೆ ಕಂಬವ ಕಡಿದು ಸುಟ್ಟು ತೊಲೆ ಕಂಬವಿಲ್ಲದೆ
> ದಾರದಿಂ ಮನೆಯ ಕೊಟ್ಟು ಹಣವ ಕೊಂಡುಂಡು
> ಕಾಯಕದ ಮಾಡುತಿರ್ದರು ನೋಡೆಂದ[೩೪]

ಹೇಮಗಲ್ಲ ಹಂಪನ ಹೇಮಗಲ್ಲ ಷಟ್‌ಸ್ಥಲ ವಚನದಲ್ಲಿ

> ಉಳಿ ಬಾಚಿಂಗೆ ಹರಿಯದ ಕೊರಡು
> ಕೊಡಲಿ ಕುಡುಗೋಲಿಂಗೆ ಹರಿವುದೆ?
> ಪುರಾತರ ವಚನಾಮೃತವೆಂಬ ಉಳಿಯಲ್ಲಿ ಕಡಿದು
> ಬಾಚಿಯಲ್ಲಿ ಕೆತ್ತಿದರೆ ನಾಚದೆ ಮನ?
> ವೆಂದಾಗಮವೆಂಬ ಕೊಡಲಿ ಕುಡುಗೋಲಿಂಗ ಹರಿವುದೆ ಹರಿಯದು[೩೫]

ಹರಿತವಾದ ಉಳಿ ಬಾಚಿಗೆ ಹರಿಯದ ಕೊರಡು ಒಂದು ಕುಡುಗೋಲಿಗೆ ಹರಿಯದು ಕುಡಗೋಲು ಭತ್ತ, ಜೋಳದಂತ ದಂಟು ಕೂಯ್ಯುತ್ತದೆ. ಆದರೆ ಉಳಿ, ಬಾಚಿ, ಗಟ್ಟಿಯಾದ ಮರದ ತುಂಡನ್ನು ಕೊರೆದು ಹಾಕುತ್ತದೆ. ಬಡಿಗಿಗೆ ಮುಖ್ಯವಾಗಿ ಉಳಿ, ಬಾಚಿ ಬೇಕಾಗುತ್ತದೆ.

**ದಾಸ ಸಾಹಿತ್ಯ**

ಪ್ರಸನ್ನ ವೆಂಕಟದಾಸರ ಸಮಕಾಲೀನವರಾದ ವಿಜಯದಾಸರು. ಇವರ ಕನಸಿನಲ್ಲಿ ಪುರಂದರದಾಸರು ಕಾಣಿಸಿಕೊಂಡು ಅವನ ನಾಲಿಗೆಯ ಮೇಲೆ ಬೀಜಾಕ್ಷರ ಬರೆದನಂತೆ ಅಂದಿನಿಂದ ವಿಜಯದಾಸರು ಹಾಡಿದ್ದೆಲ್ಲಾ ಹಾಡಾಯಿತು. ಅನೇಕ ಹಾಡುಗಳನ್ನು ರಚಿಸಿ ಕೀರ್ತಿಶಾಲಿಯಾದರು. ಅಂತಹ ಹಾಡುಗಳಲ್ಲಿ ಬಡಿಗಿ ಮತ್ತು ಶಿಲ್ಪಿಯ ಕುರಿತು ಹಲವಾರು ಕೀರ್ತನೆಗಳನ್ನು ರಚಿಸಿದ್ದಾರೆ.

ಕುಶಲದಿಂದಲಿ ಕೇಳಿ ಸ್ವಾಹಾ ದೇವಿಗಿಂತರಂ
ಜಿಸುವರು ಒಂದು ಗಣದಿಂದಧಿಕರುತ್ರಿ
ದಶಗಣ ಬಡಿಗಾ ಇವರಿಗಿಂತ ಉತ್ತಮ
ವಶವಾಗಿ ಸುಮನಸರ ಪ್ರೀತಿ ಬಡಿಸುತಿಪ್ಪ
ಪೆಸರುಳ್ಳ ಜಯಂತ ಇವರಿಗೆ ಸಮಗುಣನು
ಪಶುಪಾಲ ಗೋಪಾಲ ವಿಜಯ ವಿಠ್ಠಲರೇಯನ
ಹಸನಾಗಿ ಎಣಿಸಿ ಪೂಜಿಸುವರು ಚಿತ್ತದಲ್ಲಿ(ಮೌನೇಶ್ವರ ಆಚಾರ್ಯ; ವಿಶ್ವರೂಪ; ಪು.೧೯೫, ೨೦೧೭)

ಬಡಿಗೇರ ಕುಶಲ ಕಲೆಗಳ ಮುಂದೆ ಯಾರು ಸರಿಸಮಾನರು ಈ ಭೂಮಿ ಮೇಲೆ ಇಲ್ಲಾ ಇವರು ದೇವರಂತೆ ರಂಜಿಸುವರು. ಇವರು ತಮ್ಮ ಕಲೆಗಳನ್ನು ಜನರಿಗೆ ವೃತ್ತಿಯ ಮೂಲಕ ಪ್ರೀತಿ ಉನಬಡಿಸುತ್ತಿದ್ದರು ಎಂದು ಶ್ರೀ ವಿಜಯದಾಸರು ತಮ್ಮ ಕೀರ್ತನೆಗಳ ಮೂಲಕ ಬಡಿಗೇರನ ಕುರಿತು ಹಾಡಿದ್ದಾರೆ.

ಅದೇರೀತಿಯಾಗಿ ಶ್ರೀ ಗೋಪಾಲದಾಸರು ಸಹ ಬಡಿಗೇರನ ಕುರಿತು ಮತ್ತು ಅವನ ವೃತ್ತಿಯನ್ನು ವರ್ಣನೆ ಮಾಡಿದ್ದು ಅವರ ಕೀರ್ತನೆಯಲ್ಲಿ ನೋಡಬಹುದು.

'ಆದಿ ಚೈತ್ರದಿ ಧಾತಾ ನಾಮಕಾದಿತ್ಯಾ
ರೆದುರು ಕುಣಿವಳು ಕೃತಸ್ಥಳೀಯಂ
ವೇದಗುಣಗಳಿಂದ ತುತಿಪ ಪುಲಸ್ತ್ಯನ್ನ
ಕಾದಿಹ್ಯ ರಥಕ್ರತು ಎಂಬ ಬಡಿಗಾ
ನೃತ್ಯ ವಾಡುವಳು ಮೇನಕಿ ಅಪ್ಸರ ಸ್ತ್ರೀ
ಹತ್ತಿಲಿ ಇಹ ರಥಸ್ವನ ಬಡಿಗಾ
ಮತ್ತೆ ಸರಿಗಮದಿ ಹಾಹಾ ಗಂಧರ್ವಸ್ವರ
ವೆತ್ತಿ ಗಾಯನವ ಮಾಡುತಿಹ
ಲೇಸು ಮಾಡುವನು ಚಿತ್ರಸ್ವನ ಬಡಿಗ್ಯಾನು
ಘಾಶಿಹ ಕೆತ್ತುವ ಶುಕೆ ಸರ್ಪ
ಬ್ಯಾಸರಿದೆ ಹಾ ಹೂಹು ನಾಮ ಗಂಧರ್ವ ಸಂ।
ತೋಷದಿ ಗಾಯನ ಮಾಡುತಿಹ್ಯ
ಚಲುವಾ ಮಾರ್ಗ ಶಿರಕೆ ಅಂಶುನಾಮ ಸೂರ್ಯ
ಪೊಳೆವ ಕಶ್ಯಪ ನಾಯಕ ಋಷಿಯು
ಬಲಿಸುವ ರಥ ತಾರಕ್ಷ್ಯ ಬಡಿಗ್ಯಾನು
ಲಲನೆ ಊರ್ವಶಿ ನಾಟ್ಯವಾಡುವಳು

### ಜನಪದ ಕಾವ್ಯಗಳಲ್ಲಿ ಬಡಗಿ

ಮಂಟೇಸ್ವಾಮಿ ಕಾವ್ಯದಲ್ಲಿ ಬಸವಾಚಾರಿಯು ಮಂಟೇಸ್ವಾಮಿಯನ್ನು ಬೈಯುವ ಸಂದರ್ಭದಲ್ಲಿ ಪಾಂಚಾಳ ವೃತ್ತಿ ಪದಗಳನ್ನು ಬಳಸಿರುವುದನ್ನು ಕಾಣುತ್ತೇವೆ. ಉದಾಹರಣೆ

ಇವನ ಇಕ್ಕಳದಲ್ಲಿ ಇಡಕಂಡು
ರಾವುಗೋಲಲ್ಲಿ ಬಡಿದು
ಕೇಳು ನನ್ನ ಮಡದೀ
ಅವನ್ಗೇ ಕಾದುಗೆಟ್ಟ ತೆಗೆದು
ಅವನ ಅಂಗೈ ಮೇಲೆ ಮಡಗಿ
ದೊಡ್ಡ ಬಾಚಿ ತೆಗೆದು
ಚಿಕ್ಕ ಬಾಚಿ ತೆಗೆದು
ಅಡಗಲ್ಲಿನ ಮೇಲೆ ಅವನ
ಕಡಿಕಂಡು ನನ್ನ ಮಡದಿ
ಅವನ ಮರವ ಕೆತ್ತುದಂಗೆ ನಾನು
ತುಂಡು ತುಂಡಾಗಿ ಕೆತ್ತಿತ್ತೀನಿ[೩೬]

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪಾಂಚಾಳ ಸಮುದಾಯದ ವೃತ್ತಿ ಪದಗಳ ಹಿನ್ನೆಲೆಯಲ್ಲಿ ಬಸವಾರಾಚಾರಿ ಬೈದಿರುವುದನ್ನು ಕಾಣುತ್ತೇವೆ. ಇಕ್ಕಳ, ರಾವುಗೋಲು, ಗಟ್ಟಿ, ದೊಡ್ಡಬಾಚಿ, ಚಿಕ್ಕ ಬಾಚಿ, ಅಡಿಗಲ್ಲು ಮುಂತಾದವುಗಳು ವೃತ್ತಿಪದಗಳಾಗಿವೆ.

ಡಾ.ಎಸ್.ಎಸ್.ಅಂಗಡಿ ಅವರ ಬಡಗಿ ವೃತ್ತಿಪದಮಂಜರಿ'ಯಲ್ಲಿ ಚರ್ಚಿಸುತ್ತ 'ಕೃಷಿಯು ಗ್ರಾಮೀಣ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕೃಷಿಕರು ವರ್ಷದುದ್ದಕ್ಕೂ ತಮ್ಮ ನೆರವಿಗೆ ಬಂದ ಕೆಲಸಗಾರರು ಹಾಗೂ ಆಯಗಾರರನ್ನು ಸ್ಮರಿಸುವುದು ಹಿಂದಿನಿಂದಲೂ ಬಂದ ವಾಡಿಕೆಯಾಗಿದೆ. ಈ ಹಿನ್ನೆಲೆಯಲ್ಲಿ ಹಂತಿ ಪದಗಳನ್ನು ಹಾಡುವ ಸಂದರ್ಭದಲ್ಲಿ ಅವರನ್ನು ಸ್ಮರಿಸಿಕೊಂಡಿದ್ದಾರೆ.

ಉದಾ:

ಯರಝುರವಿ ಬಡಿಗ್ಯಾನ ಬೇಗಾನೆ ಬರಹೇಳಿ
ಭಾರೀಯ ಉಳಿಬಾಚಿ ಸಹವಾಗಿ ದ್ಯಾಮಣ್ಣ
ಭಾರೀಯ ತೇರ ಕಡೆದಾರು॥
ಬಡಿಗ್ಯಾರ ಓಣ್ಯಾಗ ಸೆಡಗರೇನ್ನೇನ್ಹೇಳಲಿ
ಬಿಳಿಯಂಗಿ ಬೆಳ್ಳಿ ಉಡುದಾರ। ಹಾಕ್ಕೊಂಡು
ಬಡಗಿಣ್ಣ ಸೆಡ್ಡಿ ಬಿಗುದಾನೊ

ಜಾಲಿಯ ಗಿಡಾ ಕಡಿದ ಮಾರುದ್ದ ನಗಾ ಮಾಡಿ
ಯರಗಟ್ಟಿ ಬಡಿಗ್ಯಾ ಮಾಡ್ಯಾಣ। ನಗಾ ನೋಡಿ
ಮಂದಿ ಹೌಹಾರಿ ನಿಂತಾರೋ

ಬಿತ್ತುವ ಕೂರಿಗಿ ಮುಂದ್ ಬಿದ್ದಾನೋ ಮಳಿದೇವ
ಎದ್ದಾನೋ ಒಕ್ಕಲಿಗ ಬೆಳತಾನ। ಕೂರಿಗಿ ಕುಂಟಿ
ಬಿದ್ದಾವೋ ಬಡಿಗ್ಯಾನ ಮನಿಮುಂದೆ[೩೭]

ಈ ಹಂತಿ ಪದದಲ್ಲಿ ಬಡಿಗ್ಯಾನ ಬಡಿವಾರ, ಅವನು ಹಚ್ಚುವ ಕುಂಕುಮ, ಹಾಕುವ ಬಟ್ಟೆ ಉಡುದಾರ, ಜನಿವಾರ, ರೈತಾಪಿ ಜನಗಳಿಗೆ ಮಾಡಿಕೊಡುವ ಕೆಲಸ, ಮಳೆಗಾಲದ ಸಂದರ್ಭ ಬಡಿಗ್ಯಾನ ಮನೆ ಮುಂದೆ ಬೀಳುವ ಕೂರಿಗೆ ಕುಂಟೆಯ ರಾಶಿ. ಊರಿನ ತೇರು ಇಂತಹ ಅನೇಕ ವಿಷಯಗಳನ್ನು ತಿಳಿಸುವುದರ ಜೊತೆಗೆ ದಿನನಿತ್ಯದ ಕೆಲಸಗಳನ್ನು ಹಂತಿಪದಗಳ ಮೂಲಕ ಕಟ್ಟಿಕೊಟ್ಟಿದ್ದಾರೆ.

ಡಾ. ದಸ್ತಗಿರಿ ಅಲ್ಲಿಬಾಯಿ ಅವರು ಸಂಪಾದಿಸಿರುವ 'ದಣಿವು ಕಾಣದ ಪದಗಳು' ಎಂಬ ಕೃತಿಯಲ್ಲಿ ಬಡಗಿಯ ಕುರಿತು ರೀತಿ–ನೀತಿಗಳನ್ನು ಹಾಡಿದ್ದಾರೆ.

ಬಡಗಿರ ಓಣ್ಯಾಗ ಸೆಡಗರೇನ್ಹೇಳಲಿ
ಬಿಳಿಯಂಗಿ ಬೆಳ್ಳಿ ಉಡದಾರ। ಹಾಕ್ಕೊಂಡು
ಬಡಗಿಣ್ಣ ಸೆಡ್ಡ ಬಿಗುದಾನೋ

ನಾಗಸೂರಿನ ಬಡಗಿ ನಾಲ್ಕ ತೊಟ್ಟಿಲ್ ಮಾಡ
ನಾದೂನಿಗೊಂದು ನನಗೊಂದು। ಮನಿಯಾನ
ಸ್ವಾದರತ್ತಿಗೊಂದು ಸೊಸಿಗೊಂದು[೩೮]

ಬಡಗಿಯ ಬಗೆಗಿರುವ ಮೆಚ್ಚುಗೆಯ ನುಡಿಗಳು ಸೇವೆ ಹಾಗೂ ಸಂಬಂಧವನ್ನು ಕುರಿತು ಉಲ್ಲೇಖಿಸುತ್ತದೆ. ರ್‍ಯಾಗೋಲಿನ ರಚನೆ ಮಾಡುವ ಬಡಗಿಯ ಮೇಲೆ ಒಂದು ಹಾಡು

ಸಣ್ಣೆಳಿ ರ್‍ಯಾಗೋಲ ಮತ್ತ್ಯಾರ ಕೆತ್ಯಾರ
ಬಡಿಗೇರ ಹುಡುಗ ಪದುಮಣ್ಣ। ಕೆತ್ತಿದದಿಂಡ
ಕಂಕಿ ಎಳದರ ಧನಿವಿಲ್ಲ[೩೯]

ರ್‍ಯಾಗೋಲು ಕೆತ್ತುವುದು ಒಂದು ಕಲೆಯಾಗಿತ್ತು. ಬಡಗಿನ ತಾಂತ್ರಿಕ ಕೌಶಲ್ಯತೆಯ ಪ್ರತಿನಿಧಿಯಾಗಿತ್ತು ಎನ್ನುವುದು ತಿಳಿದುಬರುತ್ತದೆ. ದಿಂಡಿನ ಮೇಲ್ಮೈ ತುಂಬ ಚಿತ್ತಾರದಿಂದ ಕೂಡಿರುತ್ತದೆ. ಈ ಕುರಿತು ಒಂದು ಹಾಡು ಹೀಗಿದೆ.

ಕಡಗೋಲು ಕುಡಗೋಲು ಸೆಡ್ಡಿ ಮಂಡೆಯಕೋಲು
ಬಡಿಗಿ ಬ್ಯಾಕೋಲು ಬಾರ್ಕೋಲು। ಉರ್ಗೋಲು

ಚಿತ್ತಾದ ಕೋಲು ರ್‍ಯಾಗೋಲು

ಚಿತ್ತಾದ ಕೋಲು ರ್‍ಯಾಗೋಲು ಮತ್ತ್ಯಾರ ಮಾಡ್ಯಾರ

ಚಿತ್ತಾರದ ಬಡಿಗಿ ಶೇಷಣ್ಣ ಮಾಡಿರುವ

ಚಿತ್ತ ರ್‍ಯಾಗೋಲು ಎಳೆಲ್ಹಾಗೋ[೪೦]

ಕೃಷಿ ಉಪಕರಣಗಳನ್ನು, ಅದರ ಬಳಕೆಯ ಸಾಧ್ಯತೆಗಳನ್ನು, ರಚನಾಕಾರನನ್ನು ತಿಳಿಸಿಕೊಡುವ ಇಂತಹ ಹಂತಿಹಾಡುಗಳು ಹಂತಿ ಸಂದರ್ಭದಲ್ಲಿ ರೈತ ತನಗೆ ಸಹಾಯ ಸಲ್ಲಿಸಿದವರನ್ನೆಲ್ಲ ಅವರವರ ಕೆಲಸಗಳ ಮೂಲಕ ಈ ರೀತಿ ಸ್ಮರಿಸುತ್ತಾನೆ. ಅವರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸುತ್ತಾನೆ.

ರೋಣಿ ಮಿರ್ಗದ ಮಳಿ ಭಾಳ ಆತು

ಬಡಿಗ್ಯಾನ ಸಾಲ್ಯಾಗ ಸಡಗರ ತಂತು

ಮುತ್ತಿನ ಕೂರಿಗಿ ತಯ್ಯಾರ ಅಂತು

ಕಂಬಾರನ ಹಂಬಲ ತಾಳಕ್ಕೆ ಬಂತು[೪೧]

ಬಡಗಿಯು ಕೃಷಿ ಸಾಲಿಯ ಮಾಸ್ತರ ಇದ್ದ ಹಾಗೆ. ಹಳ್ಳಿಗಳಲ್ಲಿ ಬಡಗಿ ಸಾಲೆ ಎನ್ನುವರು. ಕುಂಟಿ, ಕೂರ್ಗಿ, ಮಡಕಿ, ಎಡದಿಂಡ, ಗಾಡಿ, ಪಳಗುಂಟಿ, ಸಡ್ಡಿ, ಸಡ್ಡಿಕೋಲ, ಎಳ್ಳಡ್ಡಿ ಮುಂತಾದವು ತಯಾರಿಸುವ ಈ ಬಡಗಿಯಾಗಿದ್ದಾನೆ. ಇವೆಲ್ಲಾ ಬಡಗಿ ಸಾಲಿಯಲ್ಲಿ ತಯಾರು ಮಾಡಿಕೊಡುವವರ ಬಡಗಿಯು ಕೃಷಿ ಆಯಗಾರನಾಗಿದ್ದಾನೆ.

**ಅಕ್ಕಸಾಲಿಗ**

ಕರ್ನಾಟಕದಲ್ಲಿ ಬಹುವ್ಯಾಪಕವಾಗಿ ರೂಢಿಯಲ್ಲಿರುವ ಪದ. ಸಾಧಾರಣವಾಗಿ ಚಿನ್ನದ ಕೆಲಸ ಮಾಡುವ ಕೆಲಸಗಾರರನ್ನು ಹೀಗೆ ಕರೆಯುತ್ತಾರೆ. **ಅಗಸಾಲೆ, ಅರ್ಕಸಾಲೆ, ಅಕ್ಷಸಾಲಿನ್, ಸಮಾನಾರ್ಥಕ ನಾಮಪದಗಳು**. ಇತರ ಭಾಷೆಗಳಲ್ಲಿ ಅಕ್ಕಚಾಲೈ(ತಮಿಳು), ಅಗಸಾಲಿ, ಅಗಸಾಲೆ(ತೆಲುಗು), ಅಕ್ಕಸಾಲ್ಕಿ (ಮರಾಠಿ).

ಕನ್ನಡದಲ್ಲಿ ಈ ಪದದ ಬಳಕೆಯು **ಕ್ರಿಶ. ಹನ್ನೊಂದನೆಯ ಶತಮಾನದಿಂದ** ಶಾಸನಗಳಲ್ಲಿ ಹಾಗೂ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಜಾನಪದ ಸಾಹಿತ್ಯದಲ್ಲಿ ಬಳಕೆಯಾಗಿದೆ. ಈ ಶಬ್ದದ ಮೊದಲ ಅರ್ಥ ಚಿನ್ನ ಮತ್ತು ಬೆಳ್ಳಿ ಕೆಲಸ ಮಾಡುವವನು ಎಂದು ಕರೆಯುತ್ತಾರೆ.

ಸಂಸ್ಕೃತದಲ್ಲಿ **ಅರ್ಕ** ಎಂದರೆ **ಸೂರ್ಯ** ಎಂದು ಒಂದು ಅರ್ಥ, ಇನ್ನೊಂದು ಅರ್ಥ **ತಾಮ್ರ** ಎಂದು. ಪ್ರಾಕೃತದಲ್ಲಿ ಅಕ್ಕ ಎಂದರೆ ಚಿನ್ನ ಎಂದು ಸಾಲಿ ಎಂಬುದು ಸಂಸ್ಕೃತದ ಶಾಲಾದ ತದ್ಭವ ಶಬ್ದ. ಈ ಶಬ್ದದ ಸಾಧಾರಣ ಅರ್ಥವು ಬಾಗಿಲಿರುವ ಮಂಟಪ, ವಿಶಾಲವಾದ ಕಟ್ಟಡ ಎಂದು, ಇದರಿಂದ ಚಿನ್ನದ ಕೆಲಸವನ್ನು ಮಾಡುವ ಸ್ಥಳವನ್ನು ಅಕ್ಕಸಾಲೆ ಎಂದು ಅಲ್ಲಿ ಕೆಲಸ ಮಾಡುವನನ್ನು ಅಕ್ಕಸಾಲಿ ಎಂದು ಕರೆಯುತ್ತಿದ್ದರು.[೪೨]

ಅಕ್ಕಸಾಲಿಕೆಯು ಅತ್ಯಂತ ಸೂಕ್ಷ್ಮವಾದ ಹಾಗೂ ನಿಖರವಾದ ಲೆಕ್ಕಾಚಾರದಿಂದ ಕೂಡಿದ ಲಾಭದಾಯಕ ಕೈಗಾರಿಕೆಯಾಗಿತ್ತು. ಕಂಠೀಹಾರ, ತೋಳಬಂದಿ, ಕಂಕಣ, ಕಟಿಸೂತ್ರ, ಕುಂಡಲ, ಕೇಯೂರ, ಮೊದಲಾದ ಆಭರಣಗಳ ಉಲ್ಲೇಖವು ಶಾಸನಗಳಲ್ಲಿದೆ. ದುಬಾರಿಯ ಚಿನ್ನದ ಆಭರಣಗಳ ಅರಮನೆಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ ಉಪಯೋಗಿಸುತ್ತಿದ್ದರು. ಸ್ವಲ್ಪ ಪ್ರಮಾಣದಲ್ಲಿ ಸಾಮಾನ್ಯ ಜನರು ಉಪಯೋಗಿಸುತ್ತಿದ್ದರು. ಆಭರಣಗಳನ್ನು ತಯಾರಿಸಲು ಅತ್ಯಂತ ಮುಂದುವರಿದ ತಾಂತ್ರಿಕ ಜ್ಞಾನವನ್ನು ಬಳಸಲಾಗುತ್ತಿತ್ತು.

**ಶಾಸನಗಳಲ್ಲಿ ಅಕ್ಕಸಾಲಿಗರ ಉಲ್ಲೇಖಗಳು**

**ಕ್ರಿ.ಶ.೭೫೦ರಲ್ಲಿ 'ಪೊನಾಚಾರಿ' ಯೆಂಬುವನು** ಕೋಜೋತಗೌಡರ ಮಗ ಬೆಳಚ್ಚಿಗೌಡನಿಗೆ ಒಂದು 'ಪಟ್ಟದಳ'ವನ್ನು ಮಾಡಿಕೊಡುತ್ತಾನೆ. ಇದನ್ನು ಸಂಪಾದಕರು 'ಕ್ರೌನ್ ಬಾಂಡ್' ಎಂದು ಹೇಳಿದ್ದಾರೆ. ಇದು ಅರಸನು ಧರಿಸುವ ಕಿರೀಟದ ಪಟ್ಟಿಕೆ. ಕ್ರಿ.ಶ.೧೨೫೯–೬೦ರ ಒಂದು ಶಾಸನದಲ್ಲಿ 'ಅಕ್ಕಸಾಲೇ ಕಾಳಜಿ' ಎನ್ನುವವನು ಹೊಯ್ಸಳ ನರಸಿಂಹ ಮಹಾರಾಜನಿಗೆ ಅದೇನೋ 'ಬಂಗಾರದ ಕೆಲಸ ವಿಸತಾಯನು ಮಾಡುವುದಕ್ಕೆ ಅವನಿಗೆ ಗದ್ದೆ ಹೊಲವನ್ನು ಅನುಭವಿಸಲು ಬಿಟ್ಟುಕೊಡಲಾಗಿದೆ.[೪೩]

ಕ್ರಿ.ಶ.೧೪೧೮ರ ಹಿಂದೂಪುರ ತಾಲ್ಲೂಕಿನ ಗೌರಿವರಿಪಳ್ಳಿಯ ಶಾಸನವು ಹೀಗೆ ಹೇಳುತ್ತದೆ. ವಿಜಯನಗರದ ಅರಸು ಹರಿಹರನ ಮಗ ದೇವರಾಯ ಮಹಾರಾಯನಿಗೆ ಅರಮನೆಯ ಹಜಾರ ಸಿಂಹಾಸವನ್ನು 'ಪಂಚಾಳಿಕೆ'ಯವರು ಚಿನ್ನದಲ್ಲಿ ಮಾಡಿಕೊಡುತ್ತಾರೆ. ಇದನ್ನು ನೋಡಿ ಸುಪ್ರೀತನಾದ ಮಹಾರಾಜನು ಈ ಅಕ್ಕಸಾಲಿಗರಿಗೆ ಕುದುರೆ ಎತ್ತು, ಎಮ್ಮೆ, ಬಂಡಿ ಮತ್ತು ಆಭರಣಗಳ ಮೇಲಿನ ತೆರಿಗೆಯನ್ನು ಮನ್ನಾ ಮಾಡಿ ಅವರನ್ನು ಗೌರವಿಸುತ್ತಾನೆ.[೪೪]

ವಡ್ಡಾರಾಧನೆಯಲ್ಲಿ ಬರುವ ಗಜಕುಮಾರನ ಕಥೆ'ಯಲ್ಲಿ ಸುವರ್ಣಕಾರನಿಗೆ ಏರಣಿಗನೆಂದು ಸಂಬೋಧಿಸಲಾಗಿದೆ. ಇದರಿಂದ ಏರಣಿಗನೆಂದರೆ ಅಕ್ಕಸಾಲಿಗನೆಂದಂತಾಯಿತು. ಡಿ.ಎಲ್. ನರಸಿಂಹಾಚಾರ್ಯರು ಏರಣಿಗ ಶಬ್ದದ ನಿಷ್ಪತ್ತಿಯನ್ನು ವಿವರಿಸುತ್ತ ಪಾಲಿಭಾಷೆಯಲ್ಲಿಯ ಹೇರಣಿಗವೇ ಕನ್ನಡದಲ್ಲಿ ಏರಣಿಗವಾಗಿದೆಯೆಂದು ತಿಳಿಸಿದ್ದಾರೆ. ಇದಕ್ಕೂ ಒಂದು ಹೆಜ್ಜೆ ಮುಂದುವರಿದು ಅಬ್ಬ ಸಂವಾಸಿ ಸಮೀರನೇರಣಿಗನಾಗ' ಎಂಬ ಪ್ರಯೋಗವನ್ನು ಎತ್ತಿ ಹೇಳಿದರು.[೪೫]

**ಚಾಮರಸ ಪ್ರಭುಲಿಂಗಲೀಲೆ**

ಇಲ್ಲಿ ಅಕ್ಕಸಾಲಿಗನ ಉಲ್ಲೇಖವಿದೆ. ಪ್ರಭು ಮಾಯೆಗೆ ಸಿಕ್ಕದೆ ಹೋದ ಸಂದರ್ಭದಲ್ಲಿ ವಿಮಲಳ ಮಾಯೆಗೆ ಅಲ್ಲಮನು ತನ್ನ ಸಹಜ ಸ್ವರೂಪವನ್ನು ತೋರಿಸದೆ ಹೋದ ಸಂದರ್ಭದಲ್ಲಿ ಮಾಯೆ ದೇವಪೂಜೆಯನ್ನು ಮಾಡುವಾಗ ಮಾಯೆಗೂ ಮತ್ತು ಅಲ್ಲಮನಿಗೂ ಮಾತುಕತೆ ನಡೆಯುತ್ತದೆ. ಮಾಯೆ ದೇವಪೂಜೆಯನ್ನು ಯಾವ ರೀತಿಯಿಂದ ಮಾಡಿದರೇನಂತೆ ನನ್ನ ಮನೋರಥಗಳನ್ನು ಈಡೇರಿಸಬೇಡವೇ ವಿಚಾರ ಮಾಡಿದರೆ ವ್ಯರ್ಥವಾದುದು ಕಂಡುಬರುತ್ತಿದೆ. ಕಡೆತನಕ ನೋವು ನಿಜವಾಗಿ ಕಂಡುಬರುತ್ತದೆ. ನಾನು ಪೂಜೆಯಲ್ಲಿ ಅದಾವ ನ್ಯೂನತೆಯನ್ನು ಮಾಡಿದ್ದೇನೆ? ಎಂದು ಮಾಯೆ ಅಲ್ಲಮನನ್ನು ಕೇಳಿದಳು.

ಆಗ ಅಲ್ಲಮನು

ತರಳೆ ತನ್ನ ಹೊನ್ನು ಸಲ್ಲದೆ
ತಿರುಗಿ ಬಂದೊಡೆಯಕ್ಕಸಾಲೆಯ
ದುರುಳತನದಲ್ಲಿ ಬಯ್ಯಬಹುದೇ ನೀನು ಮತಿಗೆಟ್ಟು
ಹರವನರ್ಚಿಸುವಂಗರ್ಭದಾಂ
ತರವನಱಿಯದೆ ಸೇಟೆಯ ಭಕ್ತಿಯ
ಭರದಲೇತಕ ಫಲವಬಯಸುವೆ ಮಾಯೇಕಳೆಂದೆ[೪೬]

ಅಲ್ಲಮನು ಮಾಯೆಗೆ ಹೇಳುತ್ತಾನೆ. ಬಾಲೆ ತನ್ನ ಚಿನ್ನ ಸಲುವಳಿಯಾಗದೆ ಹೋದರೆ ಅಕ್ಕಸಾಲೆಯನ್ನು ದುರುಳತನದಿಂದ ನಿಂದಿಸಬಹುದೆ? ನೀನು ಶಿವನನ್ನು ಪೂಜಿಸುವ ಕ್ರಮವನ್ನು ತಿಳಿಯದೆ ಬುದ್ಧಿ ಗೆಟ್ಟು ಹುಸಿ ಭಕ್ತಿಯ ಪರವಶತೆಯಲ್ಲಿ ಏಕೆ ಫಲವನ್ನು ಇಚ್ಛಿಸುವೆ ಮಾಯೇ ಕೇಳು ಎಂದು ಅಲ್ಲಮ ನುಡಿದನು.

**ವಚನ ಸಾಹಿತ್ಯದಲ್ಲಿ**

ಚಿನ್ನಗೆಯ್ಯುಯುವ ಎಂದು ಬಸವಣ್ಣ ಅಕ್ಕಸಾಲಿಗರನ್ನು ಕರೆಯುತ್ತಾರೆ. ಅವರದೇ ಒಂದು ವಚನದಲ್ಲಿ 'ಕಲ್ಲೊಳಗೆ ಹೊನ್ನುಂಟು ಮರದೊಳಗೆ ಅಗ್ನಿಯುಂಟು' ಹಾಗೆ ಚನ್ನಬಸವಣ್ಣನವರು ಭೂಮಿಯ ಜಲಗುಗರ್ಚಿ ಹೇಮವನರಸುವಂತೆ ಈ ಮಾತುಗಳು ಭೂಮಿಯಲ್ಲಿ ನಿಕ್ಷೇಪವಾಗಿದ್ದ ಹೇಮವನ್ನು ಅರಸಿ ಸೋಸಿ, ಹೊರತೆಗೆದು ಚಿನ್ನವಾಗಿಸುವ ಪ್ರಕ್ರಿಯೆಯನ್ನು ಹೇಳುತ್ತವೆ. ಕಂಬಾರರು, ಅಕ್ಕಸಾಲಿಗರು ಭೂಮಿಯಿಂದ ಕಬ್ಬಿಣ ಹಾಗೂ ಚಿನ್ನದಂತಹ ಲೋಹಗಳನ್ನು ಹೊರತೆಗೆಯುವಲ್ಲಿ ನಿಷ್ಣಾತರಾಗಿದ್ದರೆಂಬುದು ಗಮನಾರ್ಹ. ಲೋಹಗಳನ್ನು ಶೋಧಿಸುವ, ಕರಗಿಸುವ, ಘನೀಕರಿಸುವ ಹಾಗೂ ಲೋಕೋಪಯೋಗಿ ವಸ್ತುಗಳಾಗಿಸುವ ಪಾಂಚಾಳರ ಕೌಶಲ್ಯದ ಪ್ರಾಚೀನತೆಯನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ. ಅಂದರೆ ಇಂದಿನ ಗಣಿಗಾರಿಕೆ ಹಾಗೂ ಲೋಹೋದ್ಯಮದ ಮೂಲವನ್ನು ಪಾಂಚಾಳರಲ್ಲಿ ಹುಡುಕಬಹುದಾಗಿದೆ. ಬಸವಣ್ಣನವರಲ್ಲಿ ಕರಗಿಸಿ ಎನ್ನ ಮನವ ಕಾಳಿಕೆಯ ಕಳಿಯಯ್ಯ.

'ಒರೆಗೆ ಬಣ್ಣಕ್ಕೆ ಬಂದೆನ್ನ ಪುಟವನ್ನಿಕ್ಕಿಸಿ ನೋಡಯ್ಯ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು
ಕೂಡಲ ಸಂಗಮದೇವ'[೪೭]

ಲೋಹವನ್ನು ಕಡಿದು, ಬಡಿದು, ಕಾಸಿ ಕರಗಿಸಿ, ಒರಗೆ ಹಚ್ಚಿ ಪುಟವಿಕ್ಕಿ ಒಂದು ಸುಂದರ ಆಭರಣವಾಗಿಸುವ ಅಕ್ಕಸಾಲೆಯ ಕೌಶಲ್ಯವನ್ನು ಬಸವಣ್ಣನವರು ಒಂದು ಆಧ್ಯಾತ್ಮಿಕ ಪರಿಭಾಷೆಯಾಗಿ ಬಳಸುತ್ತಾರೆ. ಪ್ರಾಕೃತಿಕವಾಗಿದ್ದ ವಸ್ತು ವಿವಿಧ ಸಂಸ್ಕಾರಗಳ ಬಲದಿಂದ ಪರಿಷ್ಕೃತಗೊಂಡು ಸುಂದರ

ಆಭರಣವಾಗುವಂತೆ ಮನುಷ್ಯ ತನ್ನ ದೇಹ ಹಾಗೂ ಮನಸ್ಸನ್ನು ಅಂತಃ ಸಂಸ್ಕಾರ ಬಲದಿಂದ ಪುಟಕ್ಕಿಟ್ಟ ಚಿನ್ನವಾಗಿಸಿಕೊಳ್ಳಬೇಕೆಂಬುದು ವಚನದ ಆಶಯವಾಗಿದೆ.

ದೇವರ ದಾಸಿಮಯ್ಯ ವಚನವೊಂದರಲ್ಲಿ ಲಿಂಗವ ಮಾರಿ ಎಂಬರೆ ಬಂಗಾರರು ಬರೆದು ನೋಡುವ ಸುವರ್ಣದಂತೆ ಚನ್ನಬಸವಣ್ಣನವರ ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಕೆಯಲ್ಲಿ ಹೋಯಿತು ಅವರಿಗೆ ಇಕ್ಕುಳ, ಅಡಿಗಲ್ಲು, ಚಿಮ್ಮಟಿಗೆ ಮೊದಲಾದ ಸಂಪಾದನೆಗಳ ಕೊಟ್ಟವರ್ಯಾರು, ಚಿನಿವಾರ ಅಕ್ಕಸಾಲಿಗ ವಿಶ್ವಕರ್ಮರು ಎನ್ನುವ ಹಲವು ಸಾಲುಗಳು ಪತ್ತಾರಿಕೆಯ ವಿವಿಧ ಹಂತಗಳನ್ನು ಹಾಗೂ ಪರಿಕರಗಳನ್ನು ಆಧ್ಯಾತ್ಮಿಕ ಎತ್ತರಕ್ಕೇರಿಸಿದ್ದು ಗಮನಾರ್ಹ.

**ಸರ್ವಜ್ಞರ ವಚನಗಳಲ್ಲಿ**

'ಅಕ್ಕಸಾಲೆಯನೊರಿ। ಗೊಕ್ಕಲೆಂದೆನಬೇಡ।
ಬೆಕ್ಕು ಬಂದಿಲಿಯ ಹಿಡಿವಂತೆ ಊರಿಗವ
ರಕ್ಕಸನು ನೋಡ ಸರ್ವಜ್ಞ'[೪೮]

ಸಮಾಜದ ಸೌಹಾರ್ದದ ಹೊಲಿಗೆಯನ್ನು ಕತ್ತರಿಸುವ ಅಜ್ಞಾನವೆಂಬ ಇಲಿಗಳನ್ನು ಹಿಡಿಯಲು ಜ್ಞಾನಿಯೆಂಬ ಬೆಕ್ಕು ಬಂದೈತಿ, ತಪ್ಪು ಮಾಡಿದವರಿಗೂ ತಪ್ಪು ಮಾಡಬಹುದಾದವರಿಗೂ ಎಚ್ಚರಿಕೆ ನೀಡುತ್ತಾರೆ.

**ತಿಂತಿಣಿ ಮೌನೇಶ್ವರರ ವಚನಗಳಲ್ಲಿ**

'ಕರಗಿ ಮಾಡಲಬಲ್ಲ ಒರೆದು ನೋಡಲಿಬಲ್ಲ
ಪರಿಪರಿಯ ವಸ್ತು ಒಡವೆ ದೇವರಾಭರಣವ
ಜಡಿದು ಮಾಡುವ ಗುಣಮಣಿ ಚಿಂತಾಮಣಿ
ಧರೆಗಿಳಿದ ಚನ್ನಬಸವಣ್ಣ ಬಸವಣ್ಣ'[೪೯]

ಪಾಂಚಾಳರ ಕುಲಕಸುಬುಗಳು ಜ್ಞಾನ ಮತ್ತು ಕೌಶಲ್ಯದ ರೂಪಗಳು. ಲೋಹವನ್ನು ಕರಗಿಸುವ, ಅರಗಿಸುವ, ಒರೆದು ನೋಡುವ, ಬಡಿದು ಬಗ್ಗಿಸುವ ಮೂಲಕ ಹಲವು ಬಗೆಯ ವಸ್ತು ಒಡವೆ ದೇವರಾಭರಣಗಳನ್ನು ಸೃಜಿಸುವ ಆಕೃತಿಗೊಳಿಸುವ ಗುಣಮಣಿಗಳು. ಬೇಡಿದ್ದನ್ನು ಕೌಶಲ್ಯಯುತವಾಗಿ ಮಾಡಿಕೊಡುವ ಚಿಂತಾಮಣಿಗಳು. ಅಕ್ಕಸಾಲಿಯರ ಪ್ರತಿನಿಧಿಯಾದ ಮೌನಯ್ಯನವರು ಈ ಜಡಗೊಂಡ ಜಗತ್ತನ್ನು ಕರಗಿಸಿ, ಅರಗಿಸಿ, ಒರೆದು, ಜಡಿದು ಪುನಃ ಸೃಷ್ಟಿಸಲು ಬಂದಿರುವರು. ಅಂದರೆ ನವಸಮಾಜ ನಿರ್ಮಾಣದ ಹಂಬಲ ಈ ವಚನದಲ್ಲಿದೆ.

'ಅಕ್ಕಸಾಲೆ ತಾನಾದ ಅಲ್ಲಮಪ್ರಭುದೇವ
ಇಕ್ಕಳವ ಪಿಡಿದು, ಕೈಯಲ್ಲಿ ಸುತ್ತಿಗೆ ಹಿಡಿದು
ಸೊಕ್ಕಿದವರ ಹಲ್ಲು ಮುರಿಯುತ ಬಂದಾನೆ, ಬಸವಣ್ಣ'[೫೦]

ಅಕ್ಕಸಾಲೆ ವೃತ್ತಿ ಸಾಂಪ್ರದಾಯಿಕ ಜ್ಞಾನ ಮತ್ತು ಕೌಶಲ್ಯದ ಪ್ರತೀಕ. ಕ್ರಿಯಾಶೀಲತೆಯನ್ನು ಮರೆತು ಜಗತ್ತು ಜಡವಾದ ಹೊತ್ತಿನಲ್ಲಿ ವ್ಯಕ್ತಿಗಳು ತನ್ನ ಘನತೆಯನ್ನು ಕಳೆದುಕೊಂಡ ಸಂದರ್ಭದಲ್ಲಿ ಅವತಾರವೆತ್ತಿದ ಅಲ್ಲಮ ಸ್ವರೂಪಿಯಾದ ಮೌನಯ್ಯನವರು ಇಕ್ಕಳ ಸುತ್ತಿಗೆ ಎಂಬ ಹಿಡಿಯುವ ಬಡಿಯುವ ಸಾಧನಗಳ ಮೂಲಕ ಸೊಕ್ಕಿ ಮದವೇರಿದ, ಅಹಂಕಾರವಶರಾಗಿ ಅಜ್ಞಾನದಲ್ಲಿ ಬಿದ್ದಿದ್ದ ಮನುಷ್ಯರ ದುರ್ಗುಣಗಳನ್ನು ಸವರಿ ಸದ್ಗುಣಗಳನ್ನು ಬೆಳೆಸಿ ಅವರನ್ನು ಕಾಯಕ ಜೀವಿಗಳಾಗಿಸಿ ದರೆಂಬುದರ್ಥ. ನಾಶವಾಗುತ್ತಿದ್ದ ಅಕ್ಕಸಾಲಿಯಂಥ ಸೂಕ್ಷ್ಮ ಕುಸುರಿ ಕಸುಬನ್ನು ಪುನರುಜ್ಜೀವನ ಗೊಳಿಸಿದ ಅಕ್ಕಸಾಲೆಯು, ವಿಶ್ವಕರ್ಮ ಪರಮಾತ್ಮನ ಪಂಚಮುಖಗಳಲ್ಲಿ ಹುಟ್ಟಿದವರಲ್ಲಿ ಒಬ್ಬನಾಗಿದ್ದಾನೆ.

'ಉಕ್ಕಳದ ಕಾವಿಗೆ ಮೆಚ್ಚರು ನಮ್ಮವರು
ಇಕ್ಕಳ ಬೇಕು ನಿಜ ಬೇಕು, ಇದು ನಮ್ಮ
ಅಕ್ಕಸಾಲೇನ ಮುಂದೆ ನಡೆಯದು ಬಸವಣ್ಣ[೫೧]

'ಒಲೆಯ ಮೇಲೆ ಹಾಲಿಟ್ಟಾಗ ಉರಿಯ ಒತ್ತಡಕ್ಕೆ ಅದು ಉಕ್ಕುವುದು ಸಹಜ. ಈ ಉರಿಯು ಕ್ಷಣಿಕ ಮತ್ತು ತಾತ್ಕಾಲಿಕ. ಹಾಗೆ ಅಲ್ಪಜ್ಞಾನಿಯಾದವನು ಕ್ಷಣದ ಆಸೆಗಾಗಿ ಕುದಿದು ಜ್ಞಾನಿಯಂತೆ ವರ್ತಿಸುವುದನ್ನು ಪರಿಪೂರ್ಣ ಜ್ಞಾನಿಯೂ ಪರಬ್ರಹ್ಮ ಸ್ವರೂಪಿಯೂ ಆದ ಅಕ್ಕಸಾಲೆ ಒಪ್ಪುವುದಿಲ್ಲ. ಇಕ್ಕಳದಿಂದ ಸುಡುವ ಲೋಹವನ್ನು ಹಿಡಿದು ಬಡಿದು ರೂಪಿಸುವಂತೆ ಅಲ್ಪಮತಿಗಳನ್ನು ತನ್ನ ಕ್ರಿಯಾಜ್ಞಾನವೆಂಬ ಇಕ್ಕಳದಿಂದ ಹಿಡಿದು ಬಡಿದು ರೂಪಿಸಬಲ್ಲ ಕಲೆಗಾರನ ಕುಲ ಮೌನೇಶ್ವರರದು.

'ಅರ್ಕ್ಕಸಾಲೆಯನಾಗಿ ಚೊಕ್ಕ ಬೆಳ್ಳಿಯ ಕಾಸಿ
ಮುಕ್ಕಣ್ಣ ಮಹಾದೇವನೆಂದು ನೈವೇದ್ಯಕ್ಕೆ
ಅಕ್ಕಿಯ ಪಾಯಸವು, ಬಸವಣ್ಣ[೫೨]

'ಅಕ್ಕಸಾಲೆಯ ಬಹುಮುಖ್ಯ ಗುಣವೇ ಲೋಹಗಳನ್ನು ಒರೆಗೆ ಹಚ್ಚುವುದು, ಕರಗಿಸುವುದು, ರೂಪಿಸುವುದು, ಚೊಕ್ಕ ಖೊಟ್ಟಿ, ಸತ್ಯ ಸುಳ್ಳುಗಳನ್ನು ನಿಷ್ಕರ್ಷೆಗೆ ಒಡ್ಡುವ ಗುಣ ಅವನದು. ಉತ್ತಮ ಬೆಳ್ಳಿಯ ಕಾಸಿ ಅದರಲ್ಲಿ ಮುಕ್ಕಣ್ಣನನ್ನೆ ಮಾಡಿ ಅಕ್ಕಿ ಪಾಯಸ ನೈವೇದ್ಯ ಮಾಡುವ ಕರ್ತೃತ್ವ ಶಕ್ತಿ ಅಕ್ಕಸಾಲಿಯದು. ಕಾಡಸಿದ್ಧೇಶ್ವರನ ಒಂದು ವಚನ

'ಬೆಳ್ಳಿ ಬಂಗಾರ, ತಾಮ್ರ ಹಿತ್ತಾಳೆಯ ಕೊಡದೆ
ತಾಮ್ರ ದುಡ್ಡು ಕೊಟ್ಟು ಜೋಗಿಯ ಕೈಯಲ್ಲಿ
ಒಂದು ರತ್ನವ ಕೊಂಡೆ
ಆ ರತ್ನ ಮೂರು ಲೋಕಕ್ಕೆ ಬೆಲೆಯಾಯಿತು
ಅಂತಪ್ಪ ರತ್ನವ ಆರಿಗೂ ತೋರದೆ ಬೀರದೆ
ಒಬ್ಬ ಬಡಭಕ್ತನು ಒಂದು ಕಬ್ಬಿಣದ ಕೊಟ್ಟರೆ

ಆ ರತ್ನವ ಕೊಟ್ಟು ಉದ್ಯೋಗ ಮಾಡುತಿರ್ದನಯ್ಯ
ಕಾಡನೊಳಗಾದ ಶಂಕರ ಪ್ರಿಯ ಚನ್ನಕದಂಬಲಿಂಗ
ನಿರ್ಮಲ ಪ್ರಭುವೆ[೫೩]

ಬೆಳ್ಳಿ ಅಂದರೆ ಮನ, ಬಂಗಾರವೆಂದರೆ ಬುದ್ಧಿ, ತಾಮ್ರವೆಂದರೆ ಆತ್ಮ, ಹಿತ್ತಾಳೆ ಎಂದರೆ ಭಿನ್ನಜ್ಞಾನವೆಂಬ ನಾಲ್ಕು ಕರಣಂಗಳ ನಷ್ಟ ಮಾಡದೆ ಆದೆಂತಂದಡೆ ತಾಮ್ರವೆಂದಡೆ ಆತ್ಮನಲ್ಲಿ ಮನೆ ಮಾದಲಾಗಿ ಅರವತ್ತಾರು ಕೋಟಿ ಕರಣಂಗಳು ಪುಟ್ಟುವವು ಇಂತೀ ಆತ್ಮನ ಸಹಜವಾಗಿ ಸಕಲಕರಣಗಳ ಸುಜ್ಞಾನನೋದಯವಾದ ಜ್ಞಾನ ಕಲಾತ್ಮಕ ಜ್ಞಾನಾಗ್ನಿಯಲ್ಲಿ ನಷ್ಟ ಮಾಡಿ ಎಂಬುವಿ ಬೆಳ್ಳಿ ಬಂಗಾರ, ತಾಮ್ರ ಹಿತ್ತಾಳೆಯ ಕೊಡುವೆ' ಎಂದರು.

ಜನಪದ ಹಾಡುಗಳಲ್ಲಿ ಅಕ್ಕಸಾಲಿಗರು

ಪತ್ತಾರ ಮನಿಯಣ್ಣ ಪುತ್ಥಳಿಯಂತವನು
ಕುಂತಲ್ಲಿ ನನ್ನ ಕರಿಸ್ಯಾನ। ನನ್ನನ್ನ
ಸರಪಳಿ ಮ್ಯಾಲ ಸರಿಗೇನ
ಪತ್ತಾರ ಮನಿಮುಂದ ಅತ್ತ ಅತ್ತ ಹೇಳ್ಯಾಳ
ನತ್ತೆ ಮಾಡಿಸು ನನಗೊಂದು । ನನ್ನ ಗೆಣಿಯ
ಅತ್ತಿ ಮನಿಗಿ ಹೋಗಿ ಬರತೇನಿ[೫೪]

ಎರಡು ಪದ್ಯಗಳಲ್ಲಿ ಪತ್ತಾರರ ಬಗ್ಗೆ ಮತ್ತು ಅವರ ಕೌಶಲ್ಯ ಹಾಗೂ ಸೃಷ್ಟಿಶೀಲ ಸಾಧ್ಯತೆಯ ಬಗ್ಗೆ ಜಾನಪದ ಗರತಿ ಹೇಳಿರುವ ಮಾತು ಸಮಾಜದಲ್ಲಿ ಆ ಸಮುದಾಯಕ್ಕೆ ಇದ್ದ ಆದ್ಯತೆಯನ್ನು ತೋರಿಸಿಕೊಡುತ್ತದೆ. ಬಡಗಿ, ಕಂಬಾರರು, ಸಮುದಾಯ ಬದುಕಿನ ಬಾಹ್ಯ ಅಗತ್ಯಕ್ಕಾದರೆ, ಪತ್ತಾರರು ಅಂತಹ, ಸಮುದಾಯ ಬದುಕಿನ ಆಂತರಿಕ ಅಗತ್ಯಗಳಿಗೆ ಅವಶ್ಯಕವಾಗುತ್ತಾರೆ. 'ಮೊಸರ ಕಡೆಯುವಳಿಗೆ ಮೈಯಲ್ಲ ಬಂಗಾರ' ಎನ್ನುವ ಹಾಗೂ ಪತ್ತಾರರ ಕೆಲಸಗಳು ಸೂಕ್ಷ್ಮ ಕುಸುರಿನವು ಆದಂತೆ ಅವರ ಬಳಕೆಯು ಕೂಡ ಅಂತಹ ಸೂಕ್ಷ್ಮ ಮನಸ್ಸಿನ ಹೆಣ್ಣುಮಕ್ಕಳೊಂದಿಗೆ ಇದು ಚೂಪಾದ ಕತ್ತಿಯು ಮೇಲೆ ನಡೆದಷ್ಟು ಅಪಾಯಕಾರಿ, ಆದರೂ ಪಾರಂಪರಿಕ ಸಮಾಜದಲ್ಲಿ ಎಲ್ಲಿಯೂ ಚಾರಿತ್ರ್ಯ ವಧೆಗೆ ಒಳಗಾಗದೆ ಬದುಕಿದ ಸಮಾಜ ಪತ್ತಾರದು. ಆಧುನಿಕ ಕಾಸ್ಮೆಟಿಕ್ ಬಳಕೆಯ ಸಾಮಗ್ರಿಗಳು ಬರುವ ಪೂರ್ವ ಪಾರಂಪರಿಕ ಸಮಾಜದಲ್ಲಿ ಅಂತಹ ಒಂದು ಸೌಂದರ್ಯ ಪ್ರಜ್ಞೆ ಬೆಳೆಸುವಲ್ಲಿ ಪತ್ತಾರರ ಪಾತ್ರ ಮಹತ್ವವಾದದ್ದು.

ಪಿಲ್ಲಿ ಕಾಲೋಳೆ ಪಿರಿಯಾಪಟ್ಟಣದೊಳೆ
ಕಲ್ಲ ಮೇಲೆ ಪಾದ ತೊಳೆಯೊಳೇ ಮಕಾಳಮ್ಮ
ಪಿಲ್ಲಿ ಸಾವಿರಕ್ಕೆ ಬೇಲೆಯಾದೊ[೫೫]

ಈ ತ್ರಿಪದಿಯಲ್ಲಿ ಕಾಲುಂಗರ, ಕಾಲಪಿಲ್ಲಿ, ಅರಿತ ಉಲ್ಲೇಖ ಬರುತ್ತದೆ. ಈ ಪಿಲ್ಲೆಗಳನ್ನು ತಯಾರಿಸುವರು ಅಕ್ಕಸಾಲಿಗರು. ಜನಪದ ಗರತಿಯ ಭಾವನೆಯಲ್ಲಿ ಈ ಹೆಣ್ಣು ದೈವಗಳು

ಸಕಲಾಂಕಾರಭೂಷಿತೆಯರಾಗಿ ಕಂಡಿವೆ. ಕಸ್ತೂರಿ ಸೀರೆಯವಳು, ಕಣ್ಣಕಪ್ಪ ಮುಖದೊಳು, ಕಂಚು ಕಸ್ತೂರಿಯವಳು ಇಂತಹ ಪದಗಳಲ್ಲಿ ಕಾಣಿಸುವ ಹೆಣ್ಣುದೇವರ ವರ್ಣನೆ ಗಮನ ಸೆಳೆಯುತ್ತದೆ.

**ಕಂಚುಗಾರ**

ಪಾಂಚಾಳರಲ್ಲಿ ಕಂಚು ಕೆಲಸವನ್ನು ನಿರ್ವಹಿಸುವವನಿಗೆ ಕಂಚುಗಾರ ಎಂದು ಕರೆಯಲಾಗುತ್ತದೆ. ಶಾಸನ, ಕಾವ್ಯಗಳಲ್ಲಿ ಕಂಚು ಕೆಲಸವನ್ನು ನಿರ್ವಹಿಸವವರನ್ನು ಕಂಚುಗಾರ, ತಾಂಬಟಗಾರ, ಕಾಸಾರ, ಕಲಾಯಿಗಾರ, ಅಚ್ಚುಗಾರ, ಬೋಗಾರ, ಮುಂತಾದ ಹೆಸರುಗಳಿಂದ ಉಲ್ಲೇಖಗಳಾಗಿವೆ. ಡಾ. ವಿರೂಪಾಕ್ಷ ಬಡಿಗೇರ ಸಂಪಾದಿಸಿರುವ 'ನಾಗಲಿಂಗಾನುಭವ' ಸಂಸ್ಮರಣ ಗ್ರಂಥದಲ್ಲಿ' 'ಕಾಸಾರ ಅಡ್ಡ ಹೆಸರು ಒಂದು ವಿವೇಚನೆ' ಎಂಬ ಲೇಖನವನ್ನು ರಾಜಶೇಖರ ಬಡಿಗೇರ ಅವರು ಬರೆದಿದ್ದಾರೆ. ಇದರಲ್ಲಿ ಕಂಚುಗಾರ ಪದ ನಿಷ್ಪತ್ತಿ ಕುರಿತಂತೆ ಈ ರೀತಿ ತಿಳಿಸುತ್ತಾರೆ. ಕ್ಯಾರಸ' ಶಬ್ದವು ಕನ್ನಡದಲ್ಲಿ 'ಕಷ್ಟ' ಎಂಬ ರೂಪವನ್ನು ಧರಿಸಿ 'ಕಂಸ್ಸ'ವೇ 'ಕಂಸ'ವಾಗಿ ಮಾರ್ಪಟ್ಟು ಕೊನೆಯಲ್ಲಿ ಕಂಚ ಎಂಬ ರೂಪವನ್ನು ಪಡೆಯಿತು. (ಕಂಚ+ಕಾರ) ಕಂಚಗಾರ ಎಂಬ ತದ್ಭವ ರೂಪವನ್ನು ಪಡೆಯಿತು. ಮರಾಠಿ ಭಾಷೆಯಲ್ಲಿ 'ಕಾಸಾರ'ವೂ ಕನ್ನಡ ಭಾಷೆಯ ಕಂಚಗಾರವೂ ಸಮಾನಾರ್ಥಕಗಳೆಂದು ಹೇಳಿದರೆ ತಪ್ಪಾಗಲಾರದು ಎಂದು ತಿಳಿಸುತ್ತಾರೆ. ಅಂದರೆ ಶಾಸನಗಳಲ್ಲಿ 'ಕಾಸಾರ' ಎಂಬ ಪದವು ಉಲ್ಲೇಖವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಶಬ್ದಕೋಶದಲ್ಲಿ ತಾಮ್ರ ಹಿತ್ತಾಳೆಯ ಪಾತ್ರೆಗಳನ್ನು ಮಾಡುವವನಿಗೆ ಕಾಸಾರ ಎಂದು ಅರ್ಥ. ಆದುದರಿಂದ ಕಂಚುಗಾರ ಪದದ ಮೂಲ ರೂಪವಾದ ಕ್ಯಾಂಸ ಎಂಬ ಪದದಿಂದ ಕಂಚುಗಾರ ಎಂದು ಬಳಕೆಯಾಗುತ್ತಲಿದೆ ಎಂದು ಹೇಳಬಹುದು.

ಈ ವೃತ್ತಿಯು ಪ್ರಾಚೀನ ಕಾಲದಲ್ಲಿ ತುಂಬ ಮಹತ್ವವನ್ನು ಪಡೆದುಕೊಂಡಿತ್ತು. ಕಂಚನ್ನು ಉಪಯೋಗಿಸುವುದು ಅತಿ ಹೆಚ್ಚಾಗಿ ದೇವಾಲಯಗಳಿಗೆ, ಗೃಹೋಪಯೋಗಿ ಸಾಮಾನುಗಳ ತಯಾರಿಕೆಯಲ್ಲಿ ಮಾತ್ರ. ದೇವರ ವಿಗ್ರಹಗಳಿಗೆ, ದೇವರ ವಿಗ್ರಹಗಳ ಹಿಂದಿನ ಪ್ರಭಾವಳಿಗಳಿಗೆ ದ್ವಾರ ಬಾಗಿಲುಗಳಿಗೆ, ದೇವಸ್ಥಾನಗಳಲ್ಲಿರುವ ಗಂಟೆ, ಪೂಜೆ ಸಾಮಗ್ರಿಗಳು, ಪಾತ್ರ, ಚಿಲಕ, ಬೀಗ, ರಾಜರು ಮತ್ತು ರಾಣಿಯರ ಮೂರ್ತಿಗಳು ಇತ್ಯಾದಿಗಳಿಗೆ ಉಪಯೋಗಿಸಲಾಗಿದೆ. ಕಂಚನ್ನು ಈ ತರಹ ಸಾಮಾನುಗಳಲ್ಲಿ ಉಪಯೋಗಿಸಲು ಮುಖ್ಯ ಕಾರಣ ತನ್ನ ಗಡಸುತನಕ್ಕೆ ತುಕ್ಕು ನಿರೋಧಕ, ಹೆಚ್ಚಿನ ಹೊಳಪು ಇತ್ಯಾದಿಗಳಿಂದ ಈ ಸಾಮಗ್ರಿಗಳಿಗೆ ಅತಿ ಹೆಚ್ಚಾಗಿ ಉಪಯೋಗಿಸಿದ್ದಾರೆ. ಕಂಚು ಪಂಚ ಲೋಹಗಳಲ್ಲಿ ಒಂದಾಗಿದೆ. ಈ ಲೋಹಕ್ಕೆ ಅನೇಕ ನಂಬಿಕೆ, ಆಚರಣೆ, ಸಂಪ್ರದಾಯಗಳು ಜನಸಮುದಾಯದಲ್ಲಿ ಬೆಳೆದುಕೊಂಡು ಬಂದಿವೆ.

ಕಂಚನ್ನು ದೇವತಾ ವಿಗ್ರಹಗಳಿಗೆ, ಗೃಹೋಪಯೋಗಿ ಸಾಮಾನುಗಳಿಗೆ ಉಪಯೋಗಿಸಲು ಮುಖ್ಯಕಾರಣ ಲೋಹಕ್ಕೆ ಇರುವ ಗುಣಲಕ್ಷಣಗಳಿಂದ. ಅಂದರೆ ವಿಗ್ರಹಗಳನ್ನು ಪೂಜೆ ಮಾಡುವ ಸಂದರ್ಭದಲ್ಲಿ ಪಂಚಾಮೃತದಿಂದ ತೊಳೆಯಲಾಗುತ್ತದೆ. ಅದಕ್ಕೆ ಫಲಪುಷ್ಪಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಇವೆಲ್ಲವುಗಳಿಂದ ವಿಗ್ರಹ ಸುರಕ್ಷಿತವಾಗಿರಬೇಕಾದರೆ ಕಂಚನ್ನು ಉಪಯೋಗಿಸಬೇಕಾಗುತ್ತದೆ.

ಏಕೆಂದರೆ ಕಂಚು ತುಕ್ಕು ಹಿಡಿಯುವಿಕೆಯ ಗುಣವನ್ನು ಹೊಂದಿರುವುದಿಲ್ಲ. ಪದೇ ಪದೇ ತೊಳೆಯುವುದರಿಂದ ಹೊಳಪು ಬರುತ್ತದೆ. ಇಂತಹ ಲಕ್ಷಣಗಳು ಈ ಲೋಹಕ್ಕಿರುವುದರಿಂದ ಹಾಗೂ ಕಂಚುಗಾರನಿಗೆ ಇಂತಹ ವಿಷಯಗಳೆಲ್ಲವನ್ನು ತಿಳಿದಿರುವುದರಿಂದ ಈ ಲೋಹವನ್ನು ವಿಗ್ರಹ, ಗೃಹೋಪಯೋಗಿ ಸಾಮಗ್ರಿಗಳ ತಯಾರಿಕೆಯಲ್ಲಿ ಬಳಸುತ್ತಾನೆ.

ಡಾ.ಕೆ.ಎಸ್.ಕುಮಾರಸ್ವಾಮಿ ಅವರು ತಮ್ಮ 'ಶಿಲ್ಪಾಚಾರಿಯ ಚರಿತೆ' ಕೃತಿಯಲ್ಲಿ ಕಂಚುಗಾರ ಶಾಸನಗಳ ಉಲ್ಲೇಖಗಳನ್ನು ಕೊಟ್ಟಿದ್ದಾರೆ. 'ನಾಚೋಜ' ಎನ್ನುವ ಕ್ರಿ.ಶ.೧೦೫೪ರ ಕಾಂಸಿಗನನ್ನು ಗುರುತಿಸಿದ್ದಾರೆ. ಇವನು ಕಂಚಿನ ಕೆಲಸವನ್ನು ಮಾಡಿದ್ದಕ್ಕಾಗಿ ಭೂಮಿಯನ್ನು ದಾನವಾಗಿ ಪಡೆಯುತ್ತಾನೆ. 'ಕಾಳೋಜ' ಮತ್ತು 'ಅವಕೋಜ' ಎಂಬಿಬ್ಬರು ಕಂಚಿನ ಕೈಗಾರಿಕೋದ್ಯಮಿಗಳು ಕ್ರಿ.ಶ.೧೩೯೫ರಲ್ಲಿ ಇವರು ಬೇಲೂರಿನ ಚನ್ನಕೇಶವ ದೇವಾಲಯದಲ್ಲಿರುವ ಕಂಚಿನ ದೀಪಸ್ತಂಭವನ್ನು ತಯಾರು ಮಾಡುತ್ತಾರೆ. ಇವರು ಕಂಚುಗಾರ ಮರಾಳ ನಿಂದೋಜನ ಮಕ್ಕಳು. ಇವರು ತಮ್ಮನ್ನು 'ಪಟ್ಟಣದ ಕಂಚುಗಾರರೆಂದು' ಹೇಳಿಕೊಂಡಿದ್ದಾರೆ. ಅದೇ ಬೇಲೂರು ಪಟ್ಟಣವನ್ನು ಕುರಿತೇ ಇವರು ಪಟ್ಟಣ ಎಂದು ಹೇಳಿರಬೇಕು. ಅಂದರೆ ಇವರು ಅಂದಿನ ರಾಜಧಾನಿಯಾದ ಬೇಲೂರಿನಲ್ಲೇ ಇದ್ದರು. ಕಂಚಿನ ಕಂಬದ ತೂಕವನ್ನು ನಮೂದಿಸಿರುವುದು ವಿಶೇಷ. ಕಂಭದೀವಿಗೆ ೧ ಕಂಚಿಗೆ ೫೦ ಪಲ ೪ ಎಂಬುದಾಗಿ ಹೇಳಲಾಗಿದೆ.[೫೬]

ಕಂಚಿನ ಕೆಲಸ ಮಾಡಿದ ವ್ಯಕ್ತಿಗಳನ್ನು ಕುಮಾರಸ್ವಾಮಿಯವರು ಗುರುತಿಸುತ್ತಾರೆ. ಮಂನೆ ಗಂಗಯ; ಇವನ ಕಾಲ ಕ್ರಿ.ಶ.೧೪ನೇ ಶತಮಾನದ ಬೇಲೂರಿನ ತೊಳಲು ಎಂಬ ಗ್ರಾಮದ ಕಾಫಿತೋಟದಲ್ಲಿರುವ ಗಣಪತಿ ವಿಗ್ರಹದ ಪ್ರಭಾವಳಿಯ ಮೇಲೆ ಆತನ ಹೆಸರಿದೆ. ಸಂಪುಟದ ಸಂಪಾದಕರು ಇವನನ್ನು ಬಹುಶಃ ಈ ಪ್ರಭಾವಳಿಯನ್ನು ಮಾಡಿದ ಶಿಲ್ಪಿ ಎಂದು ತಿಳಿಯುತ್ತಾರೆ. ಆದರೆ ಶಾಸನವು ಹಾಗೇನು ಹೇಳುವುದಿಲ್ಲ. ಇವನ ಹೆಸರಿನ ಮೇಲೆ ಓಜ ಅಥವಾ ಆಚಾರಿ ಎಂಬ ಉಪನಾಮವು ಹತ್ತಿರುವುದಿಲ್ಲ 'ಚಂದ್ರ ಲೆವ ತಿಥಿ' ಎನ್ನುವವನು ಇವನ ತಂದೆ ಬಸ್ವಯ(೧೮ನೇ ಶತಮಾನ) ಹಂಪಿಯ ವಿರೂಪಾಕ್ಷ ದೇವಾಲಯದ ರಂಗ ಮಂಟಪದ ಉತ್ತರ ದಿಕ್ಕಿನಲ್ಲಿ ಇರಿಸಿರುವ ಗಂಟೆಯನ್ನು ಮಾಡಿರುತ್ತಾರೆ. ಈತ ಕಂಚುಗಾರ. ಈ ಗಂಟೆಯನ್ನು ಮಲ್ಲಣರಸ ಮಾಡಿಸಿದ ಬೊಮ್ಮೋಜ, ವೀರಣ ಮತ್ತು ಕಂಚುಗಾರ ಬಸವಯ್ಯರು ಈ ಗಂಟೆಯನ್ನು ಮಾಡಿದ್ದಾರೆಂದು ಶಾಸನ ಸಂಪುಟದ ಸಂಪಾದಕರು ಹೇಳಿರುತ್ತಾರೆ. ಈ ಮೂವರ ತಂದೆ-ಮಕ್ಕಳ ಸಂಬಂಧ ಇರುವಂತಿದೆ.

ಅಮ್ಮನ್(ಕ್ರಿ.ಶ.೧೮೭೫) ರಾಯಚೂರು ಜಿ. ಗೂಗಲ್ಲು ಗ್ರಾಮದ ಅಲ್ಲಮಪ್ರಭುಸ್ವಾಮಿ ಗುಡಿಯ ಗಂಟೆಯು ಮೇಲೆ ಈತನ ಉಲ್ಲೇಖವಿದೆ. ಅದರಲ್ಲಿ ಇವನನ್ನು ಕಂಚುಗಾರ ಎಂದು ಕರೆಯಲಾಗಿರುವುದರಿಂದ ಇವನನ್ನು ಈ ಗಂಟೆಯನ್ನು ಮಾಡಿದವನೆಂದು ಪರಿಗಣಿಸಬಹುದು.[೫೭]

ಸಾಹಿತ್ಯ ಕೃತಿಗಳಲ್ಲಿ ಕಂಚುಗಾರ ಉಲ್ಲೇಖಗಳಿವೆ. ನಯಸೇನನ 'ಧರ್ಮಾಮೃತದಲ್ಲಿ ಕಂಚುಗಾರರ ಉಲ್ಲೇಖವಿದೆ. ಜಂಬುದ್ವೀಪದ ಭರತಕ್ಷೇತ್ರದಲ್ಲಿ ಕಾಶ್ಮೀರವೆಂಬ ಪ್ರಾಂತ್ಯದ ಆ ರಾಜ ಅರಿಮಥ. ಅವನ

ಮಗ ಲಲಿತಾಂಗ'. ಅವನನ್ನು ತಾಯಿ ತಂದೆಗಳು ಬಹಳ ಮುದ್ದು ಮಾಡಿದರು. ಲಿಲಿತಾಂಗನನ್ನು ಸ್ವೇಚ್ಛೆಯಾಗಿ ಬೆಳೆಯಲು ಬಿಟ್ಟರು. ಅವನು ಧರ್ಮ ನೀತಿಗಳನ್ನು ಬಿಟ್ಟು ಕಳವು ಬೊಜ್ಜು, ಬೇಟೆ ಹಾಗೂ ಮದ್ಯ ವ್ಯಸನದಲ್ಲಿ ತೊಡಗಿದನು. ಗಾಣಿಗಾರ, ಮನೆ ಕಂಚುಗಾರ ಮನೆ, ಹೋಗಾರ ಮನೆ ಹೊಕ್ಕು ಕಳ್ಳತನ ಮಾಡಿದನು. ಕಂಚುಗಾರ ಮನೆಗೆ ಹೋದ ಸಂದರ್ಭದಲ್ಲಿ

> ಮತ್ತಂ ಪುಲಿಯಂ ಕಂಡ ಪುಲ್ಲೆಯ ಪಿಂಡಿನಂತೆ
> ಕಂಚುಗಾರರ್ಭಯದಿಂ ಮನೆಯಂ ಬಿಟ್ಟು ಪೋಗೆ
> ಕಂಚುಗಾರಗೇರಿಯಂ ಪೊಕ್ಕು[೫೮]

ಕಂಚುಗಾರರ ಮನೆಗೆ ಕಳ್ಳರ ಗುಂಪು ನುಗ್ಗಿ ಅಲ್ಲಿನ ತಳಿಗೆ, ಕನ್ನಡಿ, ಭರಣಿ, ಕಂಚಿನ ಸೌಟು, ತೆರೆದ ಬಟ್ಟಲು, ಶ್ರೇಷ್ಠವಾದ ಕೈ ತಟ್ಟೆ, ಗಿಂಡಿ, ಬಳ್ಳೆ ಮುಂತಾದವುಗಳನ್ನು ಎಳೆದುಕೊಂಡು ಹೋಗುತ್ತಾರೆ. ಇಲ್ಲಿನ ವಿಶೇಷತೆಯೆಂದರೆ, ಕಂಚುಗಾರಗೇರಿಯ ಉಲ್ಲೇಖ ಅಂದರೆ ಕಂಚುಗಾರರು ತಮ್ಮ ವೃತ್ತಿಯ ಮಾಡುತ್ತ ತಮ್ಮದೇ ಆದ ಒಂದು ಪ್ರತ್ಯೇಕ ಪ್ರದೇಶದಲ್ಲಿ ವಾಸಿಸುವ ವಿವರ ಹೊಸ ರೀತಿಯ ವಿಶ್ಲೇಷಣೆಗೆ ಇಂಬು ನೀಡುತ್ತದೆ.

ಈ ಕಂಚುಗಾರಿಕೆಯ ವೃತ್ತಿಯು ಜನಸಮುದಾಯಕ್ಕೆ ನಿಕಟಸಂಬಂಧವನ್ನು ಹೊಂದಿತ್ತು. ಪ್ರಾಚೀನ ಕಾಲದಲ್ಲಿ ರಾಜ ಪರಿವಾರದವರ ಮೂರ್ತಿಗಳ ತಯಾರಿಕೆಯಲ್ಲಿ ಜನಸಾಮಾನ್ಯರಿಗೆ ಆರಾಧಿಸುವ ದೇವರ ವಿಗ್ರಹ ಮೂರ್ತಿಗಳ ತಯಾರಿಕೆಯಲ್ಲಿ ಗೃಹೋಪಯೋಗಿ ವಸ್ತುಗಳನ್ನು ತಯಾರಿಸಿಕೊಟ್ಟು ಜನಸಮುದಾಯದ ನಿಕಟ ಸಂಬಂಧವನ್ನು ಹೊಂದಿದ್ದರು ಎಂದು ಹೇಳಬಹುದು.

ಕನಕದಾಸರ ಮೋಹನ ತರಂಗಿಣಿಯ ಕೃತಿಯಲ್ಲಿ ದ್ವಾರಕಾಪುರದ ವರ್ಣನೆ ಮಾಡುವ ಸಂದರ್ಭದಲ್ಲಿ ಬೀದಿಯ ಎರಡು ಪಕ್ಕದಲ್ಲಿ ಪಾಂಚಾಳರು ಇರುವುದನ್ನು ವಿವರಿಸಿದ್ದಾರೆ. ದ್ವಾರಕಾಪುರದ ಕೋಟೆಯ ಕಂದಕವು ಶೋಭಿಸಿತು. ಆ ಪುರದ ಸುತ್ತಲಿನ ರತ್ನಮಯವಾದ ಚಿನ್ನದ ಕೋಟೆಯ ನೋಡಿದವರ ಕಣ್ಣಿಗೆ ಭಯವನ್ನು ಹುಟ್ಟಿಸುವರು ಕಂದಕದ ವಜ್ರದ ಗೋಡೆ ಕಂಗೊಳಿಸುವುದು. ಉಜ್ವಲವಾದ ದಿವ್ಯರತ್ನಗಳನ್ನು ಜೋಡಿಸಿದ ನಾನಾ ಬಗೆಯ ಕರಕೌಶಲ್ಯದ ರಚನೆಗಳುಳ್ಳ ವಿಸ್ತಾರವಾದ ಅಗಸೆಯ ಹೊನ್ನಬಾಗಿಲುಗಳಿದ್ದವು.

ದ್ವಾರಕಾ ಪಟ್ಟಣದಲ್ಲಿ ಸೋಮ, ಸೂರ್ಯ ಎಂಬ ಬೀದಿಗಳಿದ್ದವು. ಆ ಬೀದಿಗಳ ಪಕ್ಕದಲ್ಲಿ ಸಾಲು ಸಾಲಾದ ಬಂಗಾರದ ಅಂತಸ್ತಿನ ಮನೆಗಳು ಹಾಗೂ ಮನೋಹರವಾದ ಪಾತ್ರೆಯ ಅಂಗಡಿಗಳಿದ್ದವು. ಬೀದಿಯ ಎರಡೂ ಕಡೆಗೂ ಎಂದು ತಿಳಿಯುತ್ತದೆ.

> ಕಂಚುಗಾರರು ಕೈದುಗಾರರು ಹೊಳೆವ ಹೂ
> ಮಂಚಗಾರರು ಶಿಲ್ಪಿಗಳು
> ಸಂಚುಗಾರರು ಸದ್ವಿದ್ಯಾಧಿಕರಾದ
> ಪಂಚಾಳರಿದ್ರಿಕ್ಕೆಲದಿ[೫೯]

ಮುಂಗಡೆಯಲ್ಲಿ ಚಿತ್ರ, ಶಿಲ್ಪಗಳು, ಆಯುಧಗಳ ಬೀದಿಗಳು ಶೋಭಿಸಿದವು. ಕಂಚುಗಾರರು, ಕಮ್ಮಾರರು ಹೊಳೆಯುವ ಚಿನ್ನದ ತಯಾರಕರು, ಶಿಲ್ಪಿಗಳು, ಕುಶಲ ವಿದ್ಯಾವಂತರಾದ ಅಕ್ಕಸಾಲಿಗರು ಹೀಗೆ ಬೀದಿಯ ಎರಡು ಪಕ್ಕದಲ್ಲಿ ಪಂಚಾಳರಿದ್ದರು ಎಂದು ವರ್ಣಿಸಿದ್ದಾರೆ.

ವಚನ ಸಾಹಿತ್ಯದಲ್ಲಿ ಕಂಚುಗಾರನ ಕುರಿತು ವಚನಗಳನ್ನು ರಚಿಸಿದ್ದು ಕಾಣುತ್ತೇವೆ. ಹಿತ್ತಾಳೆ, ತಾಮ್ರ, ಸೀಸ, ಈ ಮೂರರ ಮಿಶ್ರಣದಿಂದ ಕಂಚನ್ನು ತಯಾರಿಸುವವರು. ಕಂಚುಗಾರರು ಕಂಚಿನಿಂದ ಕಳಸ, ಕಹಳೆ, ಕೈದೀಪ, ಊಟದ ತಟ್ಟೆ, ದೇವತಾ ಮೂರ್ತಿಗಳಲ್ಲಿದೆ. ತಾಮ್ರ ಹಿತ್ತಾಳೆ ಪಾತ್ರೆಗಳನ್ನು ಮಾಡುವುದು ಇವರ ವೃತ್ತಿ. ಬಸವಣ್ಣನವರ ವಚನವೊಂದರಲ್ಲಿ 'ಎನ್ನ ಹೆಣದ ಮೇಲೆ ಕಂಚಿಬ್ಬುಂಡಡೆಯೂ ಮಾಣೆ' ಎಂಬ ಬಟ್ಟಲು ಬೇರೆ ಕಂಚಲ್ಲ. ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡೆ ಒಂದೆ ಭಾಜನ ಒಂದೆ, ಬೆಳಗ್ಗೆ ಕನ್ನಡಿ ಎನಿಸಿತ್ತಯ್ಯ ಕಂಚಿನ ಕನ್ನಡಿಯಲ್ಲಿ ನೋಡುವುದು, ತಟ್ಟೆ, ಬಟ್ಟಲಿನಲ್ಲಿ ಉಣ್ಣುವುದು ಒಂದು ಕಾಲದ ಸಾಮಾಜಿಕ ಬದುಕಿನ ಕ್ರಮಗಳಾಗಿದ್ದವು. ಇವುಗಳ ರೂಪ ಬೇರೆ ಬೇರೆಯಾದರೂ ಮೂಲ, ಲೋಹ ಒಂದೇ ಕಂಚು ಹಾಗೂ ಕಂಚಿನ ಪಾತ್ರೆಗಳನ್ನು ತಯಾರಿಸುವುದಲ್ಲದೆ, ಅವುಗಳನ್ನು ಮನಸ್ಸಿನಂತೆ ಥಳಥಳ ಬೆಳಗುವ ವಿವರಗಳು ಗಮನಾರ್ಹವಾದಂಥವು.

ನೆನೆದರೆ ಗುಣಂಗಳು ಹರೆದರೆ ಕಂಚುಗಾರರು
ಲಿಂಗವಮಾರೆ ಎಂಬರೆ ಭಂಗಾರರು
ತಮ್ಮ ತಳಿಗೆಯ ಕೊಂಡು ಹೋಗಿ

ಅನ್ಯರ ಮನೆಯಲುಂಬು ಕುನ್ನಿಗಳ ನಾನೆಂದರೆ ರಮನಾಥ ಕಂಚುಗಾರರು ತಮ್ಮ ವೃತ್ತಿ ನಿಷ್ಠೆಯೊಂದಿಗೆ ವಿಭಿನ್ನ ಸಾತ್ವಿಕ ಗುಣಧರ್ಮಗಳನ್ನು ರೂಢಿಸಿಕೊಂಡಿದ್ದನ್ನು ವಚನ ಧ್ವನಿಸುತ್ತದೆ.[೬೦] ತಿಂಥಿಣಿ ಮೌನೇಶ್ವರರ ವಚನದಲ್ಲಿ ಕಂಚುಗಾರರ ಉಲ್ಲೇಖಗಳಿವೆ.

ಕಂಚಿನ ಕಳಸಕ್ಕಾಡಿ ಮುಂಚಿನ ವೀಳೆಕ್ಕಾಡಿ
ಕೆಂಜಿ ಹೆಣ್ಣಿಗೆ ಕಡದಾಡಿ ಸತ್ತಂಥ
ಪಂಚ ಮಹಾಪಾತಕ ಇವರು
ಪಂಚ ಮುಖದಯ್ಯನ ಗುರುತನವರಿಯರು, ಬಸವಣ್ಣ[೬೧]

ಕಂಚಿನ ಕಳಸವೆನ್ನುವುದು ಮಿರಮಿರನೆ ಹೊಳೆದು ಭ್ರಮೆಯುಂಟು ಮಾಡುತ್ತದೆ. ಕಣ್ಣು ಕುಕ್ಕಿಸುವ ತೇರ ಮೇಲಿನ ಕಳಸದಂತೆ ಅದು ದೂರದ ವಸ್ತು. ಅಂತಹ ದೂರದ ವೀಳ್ಯೆಕ್ಕಾಡುವುದು, ಗೌರವಕ್ಕೆ ವಾಲುವುದು, ಜಿದ್ದಿಗೆ ಜೋತು ಬೀಳುವುದು, ಸುಂದರ ಸ್ತ್ರೀಯ ಸಹವಾಸಕ್ಕೆ ಹಾತೊರೆದು ಅದಕ್ಕಾಗಿ ಕಾದಾಡಿ ಸಾಯುವ ಸ್ವಭಾವದವರು ಪಂಚ ಮಹಾಪಾತಕರಿಗೆ ಸಮಾನರು. ಇಂತಹ ಮಹಾಪಾತಕಿಗಳು ಪಂಚಮುಖದ ಮಹಾಪ್ರಭು, ಜಗನ್ನಿರ್ಮಾಪಕ ಮತ್ತು ನಿಯಂತ್ರಕನಾಗಿರುವ ವಿಶ್ವಕರ್ಮನ ಗುರುತನ್ನು ಅರಿಯದ ಮತಿಹೀನರೆಂದು ಈ ವಚನ ಹೇಳುತ್ತದೆ.

ಕಂಚುಗಾರರ ಮನೆಯ ಕಂಚಿನ ತೆರನಂತೆ
ಮಿಂಚು ಹಾರಿದರೆ ಬೆಲೆಯಿಲ್ಲ ಮರ್ತ್ಯಕ್ಕೆ
ಸಂಚು ಹಾರಿದರೆ ನೆಲೆಯಿಲ್ಲ, ಬಸವಣ್ಣಪ್ರಿಯ...

ಅಹಭೂನ ಗೋತ್ರೋದ್ಭವನಾದ ಕಂಚುಗಾರನ ಕೆಲಸವೆಂದರೆ ಕಂಚಿನ ಪಾತ್ರೆ ಹಾಗೂ ದೇವರ ಮೂರ್ತಿ ಮತ್ತು ಕಳಸ ಹಾಗೂ ಪೂಜಾ ಸಾಮಗ್ರಿಗಳನ್ನು ತಯಾರಿಸುವುದು. ಕಂಚುಗಾರನ ಮನೆಯಲ್ಲಿ ನಿರ್ಮಿತವಾಗುವ ಎಲ್ಲ ಕಂಚಿನ ಸಾಮಗ್ರಿಗಳು ಮಿರಿ ಮಿರಿ ಮಿಂಚುತ್ತಿರುತ್ತವೆ. ಮಿಂಚುವ ಮೆರುಗು ನೀಡುವುದು ಕಂಚುಗಾರನ ವೃತ್ತಿ ಮತ್ತು ವ್ಯವಹಾರ ಕೌಶಲ್ಯವಾಗಿದೆ. ವಸ್ತುಗಳು ಮಿಂಚಿದರೆ ಸಾಕಾಗದು, ಅವು ಉಪಯೋಗಕ್ಕೆ ಬರಬೇಕು. ಆಕಾಶದಲ್ಲಿ ತೋರುವ ಮಿಂಚು ಕೇವಲ ಮಿಂಚಿ ಮಾಯವಾದರೆ ಸಾಲದು. ಅದು ಮಳೆ ತರಿಸಬೇಕು. ಭೂಮಿಗೆ ಉಣಿಸಿ ಬೆಳೆ ತರಿಸಿ ಸಕಲ ಜೀವಜಂತುಗಳಿಗೂ ಉಣಲಿಕ್ಕೆ ಆಹಾರವಾಗಿಸಬೇಕು. ಅಂದಾಗ ಮಿಂಚಿನ ಸಾರ್ಥಕತೆಯಾಗುತ್ತದೆ.

ಯಾವುದೇ ಕೆಲಸ ಕೇವಲ ತೋರಿಕೆಯದಾಗದೆ ಅದು ಬದುಕನ್ನು ರೂಪಿಸುವ, ಮುನ್ನಡೆಸುವ ಶಕ್ತಿ ನೀಡಬೇಕೆನ್ನುವುದು ವಚನದ ಭಾವ. ಥಳುಕು ಬಳಕುಗಳೇ ಬದುಕಲ್ಲ. ಅದನ್ನು ಮೀರಿದ ಆತ್ಮಜ್ಞಾನವೇ ಬದುಕಾಗಬೇಕು.

ತವರ ತಾಮ್ರವನು ವಿವರದಲಿ ಕೂಡಿಸಿ
ಮಾಡಿದ ಹರನ ಓಂಕಾರದ
ಹರಿವಾಣದೊಳು ಬಿಟ್ಟು ಎಲೆಯ ಹೊಲಿದು
ತಿಂಬುವದು ಉಚಿತವೆ, ಇದು ನಮ್ಮ
ಕೆರವಿನ ಹೊಲಿಗೆಂದು ಅರಿಯರು
ಹೊಲೆ ಪಾಂಚಾಳರು ಬಸವಣ್ಣಪ್ರಿಯ...

ಕಲಾಜ್ಞಾನಿಯಾದ ಪಾಂಚಾಳನು ಲೋಹ ವಿದ್ಯೆಯಲ್ಲಿ ಪರಿಣತನು. ತವರ ತಾಮ್ರವನು ಹದವಾಗಿ ಮಿಶ್ರಣ ಮಾಡಿ ಪಂಚಲೋಹದಲ್ಲಿ ಹರನನ್ನೇ ಸೃಷ್ಟಿ ಮಾಡುವಂತ ಸೃಷ್ಟಿ ಪುರುಷ. ಇಂತಹ ಸೃಷ್ಟಿಕರ್ತನಾದ ಪಾಂಚಾಳನು ಓಂಕಾರದಿಂದ ಹರಿವಾಣದಲ್ಲಿ ಹರನಿಟ್ಟು ಪೂಜಿಸಿ ಎಲೆ ಹೊಲಿದು ತಿನ್ನುವುದು ಚಿತವೆ. ಇಂತಹ ಹೊಲಿದ ಹೊಲಿಗೆಯು ಸಮಗಾರನೊಬ್ಬ ಕೆರಕ್ಕೆ ಹಾಕಿದ ಹೊಲಿಗೆಯಂತಿರುತ್ತದೆ. ಎರಕ ಹೊಯ್ದು ಮೂರ್ತಿ ಮಾಡುವ ಕಂಚುಗಾರರು ಹರಿವಾಣ ಬಿಟ್ಟು ಇಂತಹ ಹೊಲಿದ ಎಲೆಯೊಳು ಉಣ್ಣುವರು ಎಂದು ಮೌನೇಶ್ವರರು ವ್ಯಂಗ್ಯ ಮಾಡುತ್ತಾರೆ.

ಜನಪದ ಹಾಡಿನಲ್ಲಿ ಕಂಚುಗಾರರನ್ನು ಕಾಣುತ್ತೇವೆ.

ಇಂಚಲ ಹಾದ್ಯಾಗ ಮಿಂಚೂದೇನನ್ನ।
ಕಂಚುಗಾರ ಹುಡುಗ ತಿದಿಯೂದಿ। ನೋಡಿದರೆ
ಚಿಕ್ಕಿ ಚಂದ್ರಮರ ಕಂಡಾರ।

ಹಸರ ಜಾಂಬಳಿ ಸೀರಿ ಕೆಂಚ ರೇಶ್ಮಿ ಸೀರಿ

ಕಂಚಗಾರ ಹುಡುಗ ಕೊಟ್ಟಾನ। ಹುಡುಗಿಗೆ

ಪಂಚಮಿ ಬಂದಾಗ ಉಡುಗೋರ

ಇಲ್ಲಿ ಕಂಚುಗಾರರು ಸಮಾಜದ ಅಗತ್ಯಕ್ಕೆ ತಕ್ಕ ಹಾಗೆ ಸ್ಪಂದಿಸುವ ಗುಣವನ್ನು ಜಾನಪದರು ವಿಶೇಷವಾಗಿ ವರ್ಣಿಸಿದ್ದಾರೆ.

ತಳಿಗಿ-ತಂಬಿಗಿ ಮೂರ್ತಿಗಳ ಗಂಟೆ ಜಾಗಟೆ

ಬೆಳಗುವ ಆರತಿ ದರ್ಪಣ ಮಾಡಿದಾ

ಇಳೆಯೊಳು ವರವಿಯ ನಿಲುವಿಲ್ಲ ಮಹಾಪ್ರಭು [೬೪]

ಮನೆಯ ಬಳಕೆಯ ವಸ್ತುಗಳಾದ ಲೋಟ, ತಂಬಿಗೆ, ಪೂಜಿಸುವ ಗಂಟೆ, ಜಾಗಟೆ ದೇವರಿಗೆ ಬೆಳಗುವ ಆರತಿ ಸೌಂದರ್ಯ ಲೇಪನಕ್ಕೆ ಕನ್ನಡಿ ಮಾಡಿದ ಕಂಚುಗಾರರು ಎಂದು ಹಾಡಿನಲ್ಲಿ ಉಲ್ಲೇಖಗಳಿವೆ.

**ಶಿಲ್ಪಿ**

ಪಾಂಚಾಳ ಸಮುದಾಯದಲ್ಲಿ ಶಿಲ್ಪಗಾರ ಕೂಡ ಒಬ್ಬ. ಶಿಲ್ಪಿ ಎಂದರೆ ಶಿಲೆಯಲ್ಲಿ ಕೆಲಸ ಮಾಡುವವರು. ಭಾರತಕ್ಕೆ ವಿದೇಶಿ ಪ್ರವಾಸಿಗರ ಆಕರ್ಷಣೆಗೆ ಮೂಲ ಕಾರಣ ಶಿಲ್ಪಿಗಳೇ. ಏಕೆಂದರೆ ಶಿಲ್ಪಿ ತಮ್ಮ ಕುಶಲ ಕೆಲಸವನ್ನು ಬೇಲೂರು, ಹಳೇಬೀಡು, ಬಾದಾಮಿ, ಪಟ್ಟದಕಲ್ಲು, ಐಹೊಳೆ, ಹಂಪಿ, ಶ್ರವಣಬೆಳಗೊಳ, ಗೋಕರ್ಣ ಮುಂತಾದ ಸ್ಥಳಗಳಲ್ಲಿ ದೇವಾಲಯಗಳ ಹಾಗೂ ಮೂರ್ತಿಗಳ ಕೆತ್ತನೆಯಲ್ಲಿ ತಮ್ಮ ಕೈಚಳಕವನ್ನು ತೋರಿಸಿದ್ದಾರೆ.

ದೇವಾಲಯ ಮೂರ್ತಿಗಳನ್ನು ಕಲಾರಾಧಕರು ನೋಡಿದರೆ ಮತ್ತೆ ಮತ್ತೆ ಕುಶಲತೆಯನ್ನು ನೋಡಬೇಕು ಎಂದೆನಿಸುತ್ತದೆ. ಇಂತಹವುಗಳಿಂದಲೇ ಶಿಲ್ಪಿಯ ಕಲ್ಪನೆ, ಚಾತುರ್ಯ, ನೈಪುಣ್ಯತೆ ಎಷ್ಟರಮಟ್ಟಿಗೆ ತಮ್ಮಲ್ಲಿ ಅಡಕವಾಗಿತ್ತು ಎಂಬುದನ್ನು ಊಹಿಸಲು ಅಸಾಧ್ಯವಾದುದು. ಶಿಲ್ಪಿಯ ಕಲೆಗಳಿಗೆ ವಿಶೇಷ ಆದ್ಯತೆ ಇದೆ. ಶಿಲ್ಪಿಯು ಆರಾಧನೆಗೋಸ್ಕರ ಶಿಲ್ಪವನ್ನು ಕೆತ್ತುತ್ತಾನೆ.

'ಧ್ಯಾನ, ಭಾವನೆ, ಆಲೋಚನೆ, ಇತ್ಯಾದಿಗಳನ್ನೆಲ್ಲಾ ಒಳಗೊಂಡ ತಪಸ್ಸಿನ ಫಲವೇ ಶಿಲ್ಪ. ಶಿಲ್ಪ ಶಬ್ದವು ಶೀಲ ಸಮದೌ' ಎಂಬ ಧಾತುವಿನಿಂದ ಉತ್ಪನ್ನವಾಗಿದೆ. 'ಸಮಾಧಿ' ಎಂಬ ಅರ್ಥವುಳ್ಳ 'ಶಿಲ್' ಧಾತುವು ತಪಸ್ಸನ್ನೇ ಸೂಚಿಸುತ್ತದೆ. ಎಂದರೆ ತಪಸ್ಸಿನ ಪ್ರಭಾವದಿಂದ ನಿರ್ವಹಿಸಲ್ಪಡುತ್ತಿರುವುದು ಶಿಲ್ಪ ಎಂಬುದು ಒಂದು ಅರ್ಥ. ಶಿಲ್ಪಿ ಆದವನು ತನ್ನ ತಪಸ್ಸಿನಿಂದ ಶಿಲ್ಪ ನಿರ್ಮಾಣವನ್ನು ಮಾಡಿ ಕೃತಕೃತ್ಯನಾಗುತ್ತಾನೆ. ಆದ್ದರಿಂದ ಮೊದಲ ಅರ್ಥವು ಆತನಿಗೆ ಅನ್ವಯವಾಗುತ್ತದೆ. ಶಿಲ್ಪಿಯ ಬಗ್ಗೆ ಮತ್ತು ಕೆತ್ತನೆಯ ಹಲವಾರು ಶಾಸನಗಳಲ್ಲಿ ಉಲ್ಲೇಖಗೊಂಡಿವೆ.

ಕ್ರಿ.ಶ.೧೧೧೬ರ ಒಂದು ಶಾಸನದಲ್ಲಿ ಶಿಲ್ಪಿಗಳ ಒಂದು ಸಂಘವು ಕುಲಾನ್ವಯಕೊತ್ತಳ ಕಮ್ಮಟೇಶ್ವರ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟಂತೆ ಹೇಳಿದೆ. ಶಿಲ್ಪಿಗಳ ಕುಲಕ್ಕೆ ಬಂದ ಕಳಂಕವನ್ನು

ಹೋಗಲಾಡಿಸುವುದಕ್ಕಾಗಿ ಬಾವಣ ಮತ್ತು ರಾವಣ ಎಂಬ ಇಬ್ಬರು ಶಿಲ್ಪಕುಲದ ಸಹೋದರರು ಕುಸುಮೇಶ್ವರ ದೇವಸ್ಥಾನವನ್ನು ಕಟ್ಟುವುದಕ್ಕೆ ತಾವೇ ಹಣವನ್ನು ವ್ಯಯಿಸಿ ಕಟ್ಟಿಸಿದ ವಿವರವಿದೆ.[೬೫]

ಕ್ರಿ.ಶ.೧೨೯೨ರ ವೀರಗಲ್ಲಿನ ಪಾಠದಿಂದ ವೀರಗಲ್ಲಿನ ಶಿಲಾಕ್ಷರಗಳನ್ನು ಬರೆದಾತನು ಗಾವಣದ ಸೇನ ಬೋವನೆಂದು ವೀರಗಲ್ಲನ್ನು ಮಾಡಿದ ಶಿಲ್ಪಿ ಬೀರೋಜನೆಂದು ತಿಳಿದುಬರುತ್ತದೆ. ಬೇಲೂರು ತಾಲೂಕಿನ ಅಗ್ಗಡಲು ಗ್ರಾಮದ ವೀರಗಲ್ಲನ್ನು ಮಾಲೋಜ ಎಂಬುವನು ಮಾಡಿದ್ದರೆ ಅದರ ಮೇಲಿನ ಶಾಸನದ ಪಾಠವನ್ನು ಕುಂದೂರು ರಾಯಣನು ಬರೆದನೆಂದು ತಿಳಿಯುತ್ತದೆ.[೬೬]

ಕ್ರಿ.ಶ.೧೩೦೨ರ ಒಂದು ವೀರಗಲ್ಲಿನಲ್ಲಿ ಸಿಂಗೋಜನ ಮಗ ಬೀರೋಜನೆಂಬುವನು ತಾವೇ ಮಹಾಶಿಲ್ಪಿಗಳು ಎಂದು ಮೆರೆಯುವ ಮುರಣಿಸುವವರ ಗಂಜರಗಾಳ ಮತ್ತಂಪುರವರ ದುಂರಸೂಲನಾಗಿದ್ದನೆಂದು ತಿಳಿಯುತ್ತದೆ. ವೀರಗಲ್ಲುಗಳನ್ನು ಮಾಡಿರುವ ಶಿಲ್ಪಿಗಳು ಕಲುಕುಟಿಕ ಆಚಾರಿ ಎಂದು ವೃತ್ತಿಸೂಚಕ ಪದಗಳಿಂದ ಕರೆದುಕೊಂಡಿರುವುದು ಅವರ ವಿಜಯ ಗುಣವನ್ನು ತಿಳಿಸುತ್ತದೆ.[೬೭]

ಕ್ರಿ.ಶ.೧೪೦೩ರ ವೀರಗಲ್ಲಿನ ಪಾಠದಿಂದ ತಿಳಿಯುವ ಶಾಸನದಲ್ಲಿ ದೇವಪ್ಪ ಎಂಬುವವನು ವೀರಗಲ್ಲನ್ನು ಮಾಡುವುದಕ್ಕೆ ಮಾರೋಜನೆಂಬ ಶಿಲ್ಪಿಗೆ ದೊಡ್ಡಪ್ಪ ಮಾಯಣ್ಣ ಕರಿಯಣ್ಣಂ ಮಸಣ್ಣನವರು ಕೂಡಿಗೆಯಾಗಿ ಜಮೀನನ್ನು ಕೊಟ್ಟ ವಿಷಯ ತಿಳಿಯುತ್ತದೆ.[೬೮]

ರಾಘವಾಂಕನ ಸಿದ್ಧರಾಮ ಚರಿತೆಯಲ್ಲಿ 'ಶಿಲ್ಪಿಗಾರರು ಮತ್ತು ಅವರು ಕೆತ್ತಿದ ಶಿವಲಿಂಗದ ಬಗ್ಗೆ ವಿವರಣೆ ಇದೆ. 'ನೀಲಕಂಠನಾದ ಶಿವನು ಸಿದ್ಧರಾಮನ್ ಮುಂದೆ ಶಿವನ ಪ್ರತ್ಯಕ್ಷನಾಗಿ ತನ್ನ ನಿಜಸ್ವರೂಪವನ್ನು ತೋರಿಸಿ ಶಿವಲಿಂಗ ಕೆತ್ತಿಸುವುದರ ಕುರಿತು ಮಾತನಾಡುತ್ತಿದ್ದ ಸಂದರ್ಭದಲ್ಲಿ ಶಿಲ್ಪಿಗಳ ಬಗ್ಗೆ ಉಲ್ಲೇಖ ಬರುತ್ತದೆ.

'ಸೊನ್ನಲಿಗೆಯ ಪುರದಲ್ಲಿ ನನ್ನ ಎಲ್ಲ ರೂಪವನ್ನು ಒಟ್ಟಾಗಿ ಸೇರಿಸಿ ನನ್ನ ಮೂಲ ಲಿಂಗವ ಹೆಸರಿನಿಂದ ಪ್ರತಿಷ್ಠಾಪನೆ ಮಾಡು ಎಂದು ಶಿವನು ಸಿದ್ಧರಾಮನಿಗೆ ಹೇಳಿದನು. ಸೊನ್ನಲಿಗೆಯ ಪುರದ ವಾಯವ್ಯ ದಿಕ್ಕಿನಲ್ಲಿ ಒಂದು ಲಿಂಗವಿದೆ. ಅದನ್ನು ಶೀಘ್ರವಾಗಿ ತಂದು ಪ್ರತಿಷ್ಠಾಪನೆ ಮಾಡು ಹೋಗು' ಎಂದು ಬೀಳ್ಕೊಟ್ಟನು.

ತರಿಸು ಲಿಂಗದ ಕಥಕೆ ವೃಷಭ ಸಂತತಿಗಳಂ
ಕರಸು ಶಿಲ್ಪಾಭಿಜ್ಞರಂ ಮಂಗಳ ದ್ರವ್ಯ
ಪರಿಕರವ ನೆರೆಪೆಂದು ಶಿವ[೬೯]

ಸಿದ್ಧರಾಮನು ಆ ಲಿಂಗದ ಸ್ವರೂಪವನ್ನು ನೋಡಲು, ಅದನ್ನು ಪರೀಕ್ಷಿಸಲು, ಅದನ್ನು ಶಾಸ್ತ್ರೋಕ್ತವಾಗಿ ಕರೆತರಲು ಶಿಲ್ಪಶಾಸ್ತ್ರ ಪಂಡಿತರನ್ನೂ ಕರೆಯಿಸಿದರು. ನಂತರ ಆ ಲಿಂಗವನ್ನು ರಥದಲ್ಲಿ ಇರಿಸಿ ಮೆರವಣಿಗೆ ಮುಖಾಂತರ ಮುಂದುವರಿಸಿದರು. ಒಂದು ದಿನ ಪಶ್ಚಿಮ ಸಮುದ್ರದಲ್ಲಿ ಸಂಜೆಯಾಗಿತ್ತು. ಇವತ್ತು ಇಲ್ಲೆ ಇದ್ದು ಮುಂಜಾನೆ ಹೊರಟರಾಯಿತು ಎಂದು ಸಿದ್ಧರಾಮನು ಶಿಷ್ಯರಿಗೆ ಹೇಳಿದನು. ಮರುದಿನ ರಥ ನಿಂತಲ್ಲೇ ನಿಂತುಬಿಟ್ಟಿತು. ಎತ್ತುಗಳನ್ನು ಒಂದೆ ಸಮನೆ ಹೊಡೆದರೂ

ಎತ್ತುಗಳು ಸತ್ತು ಬಿದ್ದವು. ಆಗ ಸಿದ್ಧರಾಮನು ಬಂದು ಎತ್ತುಗಳ ಬೆನ್ನ ಮೇಲೆ ಕೃಪವರಿದನು. ಆಗ ಎತ್ತುಗಳು ಎದ್ದು ನಿಂತವು. ಶಿಷ್ಯರು ಎಲ್ಲರೂ ಸಂತೋಷಪಟ್ಟರು. ಆಗ ಸಿದ್ಧರಾಮನು ರಥದ ಮುಂದೆ ನಡೆದನು. ಹಿಂದೆ ರಥ ಮತ್ತು ಶಿಷ್ಯರು ಬಂದರು. ಮುಂದೆ ಚಂದ್ರನನ್ನು ಸಾಗರಕ್ಕೆ ಕರೆತರುವಂತೆ ಆದಿಲಿಂಗದ ಮೆರವಣಿಗೆಯ ರಥವನ್ನು ಸೊನ್ನಲಿಗೆಯ ಪಟ್ಟಣದ ಮಧ್ಯಭಾಗಕ್ಕೆ ತೆಗೆದುಕೊಂಡು ಬಂದರು. ಆ ಸಂದರ್ಭದಲ್ಲಿ ಶಿಲ್ಪಿಗಳನ್ನು ಕರೆಯಿಸಿ ಲಿಂಗವನ್ನು ಪರೀಕ್ಷಿಸುವುದಕ್ಕೆ ಹೇಳುತ್ತಾರೆ.

> ತಿಂಗಳಂ ಸಾಗರಕ ತಪ್ಪಂತೆ ಪುರದ ನಡು
> ಎಂಗೆ ರಥವಂ ತಂದು ಹಲಕೆಲವು ಶಿಲ್ಪಶಾ
> ಸ್ತ್ರಂಗಳೊಳಭಿಜ್ಞರಂ ಕರೆಸಿ ಬೆಸನಕೊಟ್ಟು ಮುಂದಿಟ್ಟ ತೋರಿಲವರು
> ಕಂಗಳಾಲಿಗಳ ಮುಸಕಿರ್ದವೆಯ ಬೆಸಗೆಯಂ
> ಪಿಂಗಿಸುವ ಮನವೆನಿಪ್ಪುಳಿಗಳಂ ಕೊಂಡಾಡಿ
> ಲಿಂಗದ ಮುಖಕ್ಕೆ ಮರೆಯಾದ ಕತ್ತಳಿಕೆಯಂ ಕಳೆಯಲನ್ನುಗೈದರು[೬೦]

ಆಗ ಶಿಲ್ಪಶಾಸ್ತ್ರಜ್ಞರು ಬಂದು ಆ ಲಿಂಗದ ಮುಂದೆ ನಿಂತು ಅದನ್ನು ನೋಡಿದ ಶಿಲ್ಪಗಳು ಕಣ್ಣಿನ ಗುಡ್ಡೆಗಳನ್ನು ಮುಚ್ಚಿದ್ದ ರೆಪ್ಪೆಗಳನ್ನು ಬಿಡಿಸಲು ಮನಸು ಇರುವಂತೆ ಇದ್ದ ಉಳಿಗಳಿಂದ ಆದಿಲಿಂಗಕ್ಕೆ ಮುಟ್ಟಿದ್ದ ಕವಚವನ್ನು ತೆಗೆದುಹಾಕಲು ಸಿದ್ಧರಾಮನು ಕಣ್ಣಿನ ಮೇಲಿನ ರೆಪ್ಪೆಯನ್ನು ತೆಗೆದು ರಸವನ್ನು ಕಳೆಯಲು ಒಳಗಿರುವ ಬೀಜ ಸ್ವಯಂಭುವಾಗಿರುವಂತೆ ಕವಚದ ಹೊರಗಿನ ತೆರೆಸೆರೆಗಳನ್ನು ಪೆಟ್ಟಿಗೆಯ ಮುಚ್ಚಳವನ್ನು ತೆಗೆಯುವ ಹಾಗೆ ಇಂಗಿಸಿ ಕಳೆಯಿತು. ಒಳಗೆ ದೇದಿಪ್ಯ ಮಾನವಾದ ಸ್ವಯಂಭುಲಿಂಗವನ್ನು ಶಿಲ್ಪಿಗಳು ಕಂಡರು. ಅಂತಹ ನಿರ್ಮಲವಾದ ಲಿಂಗದ ವಿಷಯದಲ್ಲಿ ಕಠಿಣವಾಗಿ ವರ್ತಿಸಿದವನಿಗೆ ನಾಯಕ ನರಕವು ಕಟ್ಟಿದ್ದು ಅಲ್ಲ ವಾಕ್ ಮತ್ತು ಅರ್ಥಗಳಂತೆ ದ್ರೋಹ ಮಾಡಿದಂತಾಗುವುದೆಂದು ತಿಳಿದು ಆ ಲಿಂಗವನ್ನು ಬೇರೆ ಬೇರೆಯಾದ ಐದು ಮುಖಗಳನ್ನು ಒಂದು ಲಿಂಗದಲ್ಲಿಯೇ ಮೂಡಿಸಿದರು. ಶಿಲ್ಪಿಗಳನ್ನು ನೋಡಿ ಸಿದ್ಧರಾಮನು ಸಂತೋಷಪಟ್ಟನು. ಮುಂದೆ ಕಾರ ಹುಣ್ಣಿಮೆಯ ಚತುರ್ದಶಿಯ ದಿನ ಅರ್ಧ ರಾತ್ರಿಯಲ್ಲಿ ಆ ಲಿಂಗಗಳನ್ನು ಪ್ರತಿಷ್ಠಾಪಿಸಲು ಮುಹೂರ್ತವನ್ನು ಗೊತ್ತುಪಡಿಸಿದನು. ಶಿಲ್ಪಿಗಳು ತಯಾರಿಸಿದ ಆ ಕಲಾಸೌಂದರ್ಯಕ್ಕೆ ಸಿದ್ಧರಾಮನು ಆನಂದಪಟ್ಟನು.

**ವಚನ ಸಾಹಿತ್ಯದಲ್ಲಿ**

ಸ್ಥಾವರ ಜಂಗಮದ ಪರಿಕಲ್ಪನೆಯ ಪ್ರಭಾವವೋ ಏನೋ ವಚನಗಳಲ್ಲಿ ಶಿಲ್ಪಿಗಳ ಕುರಿತು ಉಲ್ಲೇಖಗಳು ಆಗದ ಪ್ರಮಾಣದಲ್ಲಿ ಕಂಡುಬರುವುದಿಲ್ಲ. ಮೂರ್ತಿಶಿಲ್ಪಿ ಹಾಗೂ ಗುಡಿ ಗುಂಡಾರಗಳ ನಿರ್ಮಾಣವಿದ್ದಲ್ಲಿ ಶಿಲ್ಪಿಗಳಿಗೆ ಕೆಲಸವಿರುತ್ತದೆ. ತ್ವಷ್ಟ, ವರ್ಧಕಿ, ದೈವಜ್ಞ ವಿಶ್ವಶಿಲ್ಪ, ವಿಶ್ವಕರ್ಮನೆಂಬ ಪದಗಳು ವಚನಗಳಲ್ಲಿ ಕಂಡರೂ ಅವು ಮರದ ಶಿಲ್ಪದ ಭಾಗವಾಗಿ ಕಾಣುತ್ತವೆ. ಮರದ ಶಿಲ್ಪ ಮಾಡುವವನು ಬಡಗಿನಾಗಿದ್ದುದು ಗಮನಾರ್ಹ.

**ಚನ್ನಬಸವಣ್ಣನವರ ವಚನದಲ್ಲಿ**

ಶಾಸನಗಳನ್ನು ಕೊರೆಯುವಂತಹ ಕಲ್ಲಿನ ಕೆಲಸಗಳನ್ನು ಇವರು ಮಾಡುತ್ತಿದ್ದರು, ಇವರು ಲಿಂಗಗಳನ್ನು ತಯಾರಿಸುತ್ತಿದ್ದ ಉಲ್ಲೇಖಗಳು ವಚನಗಳಲ್ಲಿ ದೊರೆಯುತ್ತದೆ.

> ಭೂಮಿಗೆ ಹುಟ್ಟಿ ಶಿಲೆಯಾದ ಕಲ್ಲು ಕುಟಿಗ
> ಮುಟ್ಟಿರುಪಾದ ಗುರುಮುಟ್ಟಿ ತೇಜವಾದ
> ಹಿಂದೆ ಮುಟ್ಟಿದವರಿಗೆಲ್ಲ ಪ್ರಾಣಲಿಂಗವಾದ
> ಪರಿಯನ್ನಂತೋ ಕಲ್ಲುಕುಟಿಗ ಎಂದು ಕರೆಯುವ

ಶಿಲ್ಪಿಗಳು ಲಿಂಗಮೂರ್ತಿಗಳನ್ನು ತಯಾರಿಸುವುದನ್ನು ಕೆಲವರು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದರು ಎನ್ನುವುದು ಇಲ್ಲಿ ತಿಳಿಯುತ್ತದೆ.[೨೧]

ತಿಂತಿಣಿ ಮೌನೇಶ್ವರರ ವಚನದಲ್ಲಿ ಶಿಲ್ಪಿಗಳ ಉಲ್ಲೇಖ ಇರುವುದು.

> ಗಟ್ಟಿ ಕಲ್ಲನೆ ಒಡೆದು ಬಸವನ ನಾಮವ ಮಾಡಿ
> ಶಿಶು ಪಶುಗಳ ಹೆಸರಿಟ್ಟು ಕರಿಸಿದಂಥ
> ವಸ್ತು ಬೇರೆ ಹಾನೆ ಕಡೆಯಲ್ಲಿ ಲೋಕದ
> ನುಸಿಗಳಿಂದೇನು ನಡಿಯದು ಬಸವಣ್ಣ[೨೨]

ವಚನ ಶಿಲ್ಪಿಯ ಬಹುಸೃಷ್ಟಿ ಕ್ರಿಯೆಗಳನ್ನು ಸೂಚಿಸುವಂತಿದೆ. ಸೃಷ್ಟಿಕರ್ತನಾದ ವಿಶ್ವಕರ್ಮ ಭೂಮಿಯಲ್ಲಿರುವ ಶಿವ ಶಿಲ್ಪ ಭೂಮಿಯಲ್ಲಿ ದೊರೆಯುವ ಪಂಚಭೂತಾತ್ಮಕ ವಸ್ತುಗಳಾಗಿರುವ ಗಟ್ಟಿ ಕಲ್ಲನ್ನೆ ಒಡೆದು ಕಡೆದು ಕೆತ್ತಿ ಬಸವಾದಿ ರೂಪಗಳ ನಿರ್ಮಾಣ ಮಾಡಿ ಅಂದರೆ ಹಲವು ಮೂರ್ತಿಗಳ ಕೆತ್ತಿ ಅವುಗಳಿಗೆ ಹೆಸರಿಟ್ಟು ಗುರುತಿಸಿದವನು. ಇಂಥ ಪ್ರತಿ ಸೃಷ್ಟಿ ಮತ್ತು ಅದರ ನಾಮನಿರ್ದೇಶನದ ಕೆಲಸ ಶಿಲ್ಪಿಯಿಂದಾಗುತ್ತದೆಯೇ ಹೊರತು ಸಾಮಾನ್ಯ ನರಮಾನವರಾದ ಅಜ್ಞಾನಿಗಳಿಂದ ಸಾಧ್ಯವಿಲ್ಲ.

ಸೃಷ್ಟಿಕರ್ತನಾಗಿರುವ ವಿಶ್ವಕರ್ಮನಂತೆಯೇ ಪಂಚಭೂತಗಳನ್ನು ಬಳಸಿಕೊಂಡು ನೂತನವಾದುದನ್ನು ಭೂಮಿಯ ಮೇಲೆ ಶಿಲ್ಪಿಯು ಸೃಷ್ಟಿಸುತ್ತಾನೆ. ಈ ಕಾರಣದಿಂದಲೇ ಶಿಲ್ಪಿಯನ್ನು ಶಾಸ್ತ್ರಗಳಲ್ಲಿ ವಿಶ್ವಕರ್ಮನೆಂದು ಕರೆದಿರುವುದು ಎಂದು ಮೌನೇಶ್ವರರು ಹೇಳಿದ್ದಾರೆ.

ಅಂಬಿಗರ ಚೌಡಯ್ಯನ ಒಂದು ವಚನದಲ್ಲಿ ಹದಿನೆಂಟು ಕುಲಜಾತಿರು ಎಂದು ಉಲ್ಲೇಖದೊಂದಿಗೆ ಮನುಷ್ಯನ ಅಂಗಾಂಗಗಳನ್ನು ಚಿತ್ರಸಿರುವುದು ಕಂಡುಬರುತ್ತದೆ.

> ಕಣ್ಣೇ ಕಂಚುಗಾರ, ಕರ್ಣವೇ ಬಣಜಿಗ, ಮೂಗೆ ಈಳೀಗ
> ಕೊರಳೇ ಕುಂಬಾರ ತುಟಿಯೇ ಹಂಡಗಾರ ಹಲ್ಲೆ ಕಲ್ಲುಕುಟಿಗ
> ತಲೆಯೆ ಮೋಪಾಗಾರ, ಚಿನ್ನ, ಜೇಡ, ಅಂಗೈಯೇ ಅಕ್ಕಸಾಲಿಗ
> ಮುಂಗೈಯೇ ಬಡಗಿ ಕರವೇ ಕೋಮಟಿಗ
> ಕಣಕಾಲೆ ಕಾಳಿಂಗ, ಕುಂಡಿಯೇ ಕುಡುವುಕ್ಕಲಿಗ

ಮೇಗಾಡಿ ಹೊಲೆಯ ಬುದ್ಧಿಯೇ ಬಯಲುಗಂಬಾರ ಇಂತಪು ಕುಲ ಹದಿನೆಂಟು ಜಾತಿ೬

ಹದಿನೆಂಟು ಜಾತಿಯಲ್ಲಿ ಪಾಂಚಾಳರಾದ ಬಡಗಿ, ಕಮ್ಮಾರ, ಅಕ್ಕಸಾಲಿಗ, ಕಂಚುಗಾರ ಹಾಗೂ ಶಿಲ್ಪಿ ಈ ಐದು ಜಾತಿಗಳ ಕೂಟವನ್ನು ಸೂಚಿಸುತ್ತದೆ.

ಹೀಗೆ ಪಾಂಚಾಳ ವೃತ್ತಿಗಳು ಕ್ರಿಯೆ ಹಾಗೂ ಅರಿವಿನ ಸಂಘಟಿತ ಫಲಿತಗಳು. ದೇಹ ಹಾಗೂ ಮನಸ್ಸು ಭಿನ್ನವಾಗಿ ಇಲ್ಲಿರಲು ಸಾಧ್ಯವಿಲ್ಲ. ಉಲ್ಲೇಖಿತ ವಚನಗಳಲ್ಲಿ ಕಾಣುವ ಪಾಂಚಾಳ ಕುಲ ವೃತ್ತಿ ಹಾಗೂ ಸಲಕರಣೆಗಳಂಥ ಮೂರ್ತ ಹಾಗೂ ಸ್ವಾನುಭಾವದ ನಡೆಗಳನ್ನು ಅಧ್ಯಾತ್ಮದ ಎತ್ತರಕ್ಕೇರಿಸಿದ್ದು ವಿಶೇಷ. ಉಳಿ, ಬಾಚಿ, ಕೊಡತಿ, ಇಕ್ಕಳ, ಚಿಮ್ಮಟಿಗೆ, ತಿಧಿ, ಗರಗಸ, ಕುಲುಮೆ, ಸುತ್ತಿಗೆ, ಕೋವೆ, ಮೂಸೆಯಂತೆ ವೃತ್ತಿ ಉಪಕರಣಗಳೊಂದಿಗೆ, ಕೆತ್ತು, ಬಡಗಿ, ಹಿಡಿ, ಹುಗಿಲುದೆಗಿ, ಕರಗು, ಮೆರಗು, ಪುಟವಿಡು, ಒರೆಗಚ್ಚು ಇತ್ಯಾದಿ ಕ್ರಿಯಾರೂಪಗಳ ಮೂಲಕ ಘನವನ್ನು ವಿವರಿಸಲು ಹಂಬಲಿಸಿದ್ದು ವಚನಕಾರರ ಹಿರಿಮೆಯಾಗಿದೆ. ಪರಂಪರೆಯಲ್ಲಿ ತನ್ನ ಕ್ರಿಯಾಮೂಲ ಕಾರಣದಿಂದಲೆ ಅಲಕ್ಷಿತವಾಗಿದ್ದ ಪಾಂಚಾಳರ ವೃತ್ತಿ ಹಾಗೂ ಅದರ ನುಡಿ ಬೇಡಗಳನ್ನು ಅನುಭಾವದ ಸಂವೇದನೆಗಳನ್ನಾಗಿ ಬಳಸುವ ಮೂಲಕ ಪಾಂಚಾಳರ ವೃತ್ತಿ ಹಾಗೂ ವೃತ್ತಿಕಾರರ ಆತ್ಮಗೌರವವನ್ನು ಗಟ್ಟಿಯಾಗಿಸಿದ್ದು ವಚನಕಾರರ ವೈಶಿಷ್ಟ್ಯ. ಕ್ರಿಯೆ ಇಲ್ಲದ ಜ್ಞಾನ ಪ್ರಯೋಜನವಿಲ್ಲ ಎನ್ನುವ ಮೂಲಕ ಕ್ರಿಯೆ ಮತ್ತು ಅರಿವಿನ ಅಂತಃ ಸಂಬಂಧವನ್ನು ಹುರಿಗೊಳಿಸಿ ಆತ್ಮಜ್ಞಾನಕ್ಕೆ ಆಧ್ಯಾತ್ಮಿಕ ಅನುಭೂತಿಗೆ ಸಾಧನವಾಗಿಸಿದರು.

ಹೀಗೆ ಪ್ರಾಚೀನ ಭಾರತೀಯ ಸಾಹಿತ್ಯ ಮತ್ತು ಪ್ರಾಚೀನ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಪಾಂಚಾಳರು ಸೃಷ್ಟಿಗೆ ಮೂಲ ಕರ್ತೃಗಳೆಂದು ಇವರಿಂದಲೇ ಸಕಲವು ನಿರ್ಮಾಣವಾಯಿತೆಂದು ಋಗ್ವೇದದಲ್ಲಿ ತಿಳಿದುಬರುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳಾದ ಪಂಪ, ರನ್ನ, ಜನ್ನ, ರಾಘವಾಂಕನ ಸಿದ್ಧರಾಮಚಾರಿತ್ರ್ಯ ಕನಕದಾಸರ ಮೋಹನ ತರಂಗಿಣಿ ಜೊತೆಗೆ ಹಲವಾರು ಜನ ಶರಣರ ವಚನಗಳಲ್ಲಿ ದಾಸಸಾಹಿತ್ಯದಲ್ಲಿ ಹಾಗೂ ಜನಪದ ತ್ರಿಪದಿಗಳಲ್ಲಿ ಪಾಂಚಾಳರ ಬಗ್ಗೆ ವಿವಿಧ ರೀತಿಯ ಉಲ್ಲೇಖಗಳಿವೆ.

**ದಾಸ ಸಾಹಿತ್ಯ**

ಶ್ರೀ ವಿಜಯದಾಸರು ತಮ್ಮ ಕೀರ್ತನೆಗಳಲ್ಲಿ ಶಿಲ್ಪಿ ತಯಾರಿಸುವಂತ ಮೂರ್ತಿ ಕೆತ್ತನೆ ಮಾಡುವಂತ ಕಲ್ಲಿನ ಕುರಿತು ಹಾಡಿದು ಅವರ ಕೀರ್ತನೆಗಳಲ್ಲಿ ನೋಡಬಹುದು.

ಕಲ್ಲು ಕಟಿಯಲುವೊಳ್ಳೆ ಅಮೃತವೆ ಪುಟ್ಟಿತು
ಕಲ್ಲೆಯತ್ತಲೆ ಯಲ್ಲರೂ ವುಳಿದರೂ
ಕಲ್ಲೂ ಹೆರಿಪಾದವನು ಸೋಕಿ ಪೆಂಣಾಯಿತೂ
ಕಲ್ಲು ಲೆಂಕಿಗೆ ಮಾರ್ಗ ಚೆನ್ನಾಗಿ ಫಲಿಸಿತು
ಕಲ್ಲಿನೊಳಗೆ ದೈವ ವಡಮೂಡಿ ಕಾಣಿಸುವ
ಕಲ್ಲು ಕೊರಿಯಲು ಮೂರ್ತಿವಂತಾಹದೊ
ಕಲ್ಲೆ ದೇವರ ಗುಡಿಗೆ ಗರುಡ ಗಂಭಾಯಿತು
ಕಲ್ಲು ಕೋಟ್ಯಾನುಕೋಟಿಗೆ ಬೆಲೆ ಆಯಿತೂ

ಕಲ್ಲೆಂದು ಪೇಕ್ಷಿಸದೆ ಕೆಲಕಾಲದಲಿ ನಿಂಮ
ಕಲ್ಲು ವನಸು ಬಿಟ್ಟು ಪೂಜಿ ಮಾಡೆ
ಕಲ್ಲಿನೊಳಗಿದ್ದು ಶ್ರೀ ವಿಜಯವಿಠ್ಠಲ ವಲಿದು
ಕಲ್ಲು ಕಾಶ್ವಿತದ ಪದವಿಯ ಕೊಟ್ಟು ಪಾಲಿಸುವೆ
(ಮೌನೇಶ್ವರ ಆಚಾರ್ಯ; ವಿಶ್ವರೂಪ; ಪು.೨೦೭, ೨೦೧೭)

ಒಬ್ಬ ಶಿಲ್ಪಿ ಒಂದು ಮೂರ್ತಿ ಕೆತ್ತಲು ಕಲ್ಲಿನ ಗುಣ ಅದು ಯಾವ ಕಲ್ಲು ಯಾವ ಮೂರ್ತಿ ಮಾಡಿದರೆ ಒಳ್ಳೆಯದು ಎಂದು ಶಿಲ್ಪಿ ಕಲ್ಲು ನೋಡಿ ನಿರ್ಧಾರ ಮಾಡುತ್ತಾನೆ. ಶ್ರೀ ವಿಜಯದಾಸರು ಕಲ್ಲನ್ನು ಕುರಿತು ಕೀರ್ತನೆಗಳನ್ನು ರಚಿಸಿದ್ದರೆ ಕಲ್ಲಿನಲ್ಲಿ ಅಮೃತ ಹುಟ್ಟಿತು. ಒಂದು ಕಲ್ಲು ಮಾರ್ಗವನ್ನು ತೋರಿಸುತ್ತದೆ. ಆ ಕಲ್ಲಿನಲ್ಲೆ ದೈವ ಕಾಣಿಸುತ್ತಾನೆ. ಆ ಕಲ್ಲೆ ದೇವರ ಗುಡಿಗೆ ಗರುಡ ಕೆಂಬಾವಾಯಿತ್ತು. ಕಲ್ಲೂ ಕೋಟ್ಯಾನು ಕೋಟಿ ಬೆಲೆ ಬಾಳುವಂತದ್ದು ನಿಮ್ಮ ಮನಸ್ಸಿನಲ್ಲಿ ಕಲ್ಲು ಅನ್ನಮೆ ಬಿಟ್ಟು ದೇವರು ಎಂದು ಪೂಜೆ ಮಾಡಿ ಮನಸ್ಸಿನ ಭಾವನೆಗಳನ್ನು ಪಾಲಿಸುವನು. ದೇವರು ಬಂದು ಶ್ರೀ ವಿಜಯದಾಸರು ತಮ್ಮ ಕೀರ್ತನೆಯಲ್ಲಿ ಕಲ್ಲನ್ನು ಕುರಿತು ವರ್ಣಿಸಿದ್ದು ನೋಡಬಹುದಾಗಿದೆ.

ವಿಶ್ವಕರ್ಮ ಪಾಂಚಾಳರು, ವಿಶ್ವಬ್ರಾಹ್ಮಣರು, ಆಚಾರ್ಯ ಸಮಸ್ತು ವೀರ ಪಾಂಚಾಳ ಹಾಗೂ ಓಜ ಎಂಬ ಹೆಸರುಗಳಿಂದ ಶಾಸನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖವಾಗಿರುವ ಪಾಂಚಾಳ ಸಮುದಾಯಕ್ಕೆ ಭವ್ಯವಾದ ಪರಂಪರೆ ಮತ್ತು ವಿಸ್ತಾರವಾದ ಪ್ರಾಚೀನತೆಯಿದೆ ಎಂಬುದು ಇದರಿಂದ ತಿಳಿಯುತ್ತದೆ.

ಭಾರತದ ನಗರೀಕರಣ, ಜಾಗತೀಕರಣದ ಜೊತೆ ವಿವಿಧ ರೀತಿಯ ಶಿಲ್ಪ ಸಂಕುಲಕ್ಕೆ ಕಾರಣರಾಗುವ ಮೂಲಕ ಬಹುದೊಡ್ಡ ಸಾಂಸ್ಕೃತಿಕ ಪರಂಪರೆಗೆ ಪಾಂಚಾಳರು ಕಾರಣರಾಗಿದ್ದಾರೆ ಎನ್ನುವುದು ಈ ಅಧ್ಯಯನದಿಂದ ಖಚಿತವಾಗುತ್ತದೆ. ಭಾರತ ಮತ್ತು ಕರ್ನಾಟಕದ ರಾಜಕೀಯ, ಆರ್ಥಿಕ, ಧಾರ್ಮಿಕ ಮಜಲುಗಳಲ್ಲಿರುವ ಪಾಂಚಾಳರ ಪ್ರತಿನಿಧೀಕರಣದ ಬಗ್ಗೆ ಪ್ರತ್ಯೇಕ ಅಧ್ಯಯನವು ನಡೆದಿರಲಿಲ್ಲ. ಹೀಗಾಗಿ ಅಂಥ ಉಪೇಕ್ಷಿತ ಸಮುದಾಯವನ್ನು ಇಲ್ಲಿ ಅದರ ಪ್ರಮುಖ ಪಾಲುದಾರಿಕೆಯೊಂದಿಗೆ ಚರ್ಚಿಸಲಾಗಿದೆ.

**೩.೨. ದಾಖಲೆಗಳು**

ಲಿಪಿ ಮಾಧ್ಯಮದ ಮೂಲಕ ಹುಟ್ಟಿ ಬಂದ ಸಾಹಿತ್ಯದಲ್ಲಿ ಒಂದು ಕಾವ್ಯಸಾಹಿತ್ಯ ಮತ್ತೊಂದು ದಾಖಲುಸಾಹಿತ್ಯ, ದಾಖಲು ಸಾಹಿತ್ಯ ಗುಂಪಿಗೆ ಶಾಸನ, ಕಡತ, ಕೈಫಿಯತ್ತು, ಬಖೈರುಗಳು ಸೇರುತ್ತವೆ. ದಾಖಲೆಗಳ ಉಗಮಕ್ಕೆ ಕಾರಣ ನಡೆದ ಸಂಗತಿಗಳನ್ನು ಮುಂದಿನ ತಲೆಮಾರಿಗೆ ತಿಳಿಸಬೇಕೆಂಬುದು ಹಾಗೂ ಮನುಷ್ಯನ ಮಾತಿನಲ್ಲಿ ನಂಬಿಕೆ ಹೋದಾಗ ಅಂದರೆ ಅವನು ನುಡಿದಂತೆ ನಡೆದುಕೊಳ್ಳದಿದ್ದಾಗ, ತಾನೇ ಆಡಿದ ಮಾತನ್ನು ಆಡಿಯೇ ಇಲ್ಲವೆಂದು ಭಾಷೆಗೆ ತಪ್ಪಿದಾಗ ಮೌಖಿಕ ಒಪ್ಪಂದವನ್ನು ದಾಖಲೆಯಾಗಿ ಹಿಡಿದಿಡುವ ಪ್ರಯತ್ನದ ಫಲ ಈ ದಾಖಲೆಗಳು.

ನುಡಿದ ಮಾತಿಗೆ ತಪ್ಪಬಾರದೆಂದು ದಾಖಲೆಗಳನ್ನು ನಿರ್ಮಿಸಿದರೆ ಮನುಷ್ಯ ಬುದ್ಧಿ ತನ್ನ ಕುಟಿಲತೆಯಿಂದ ಕೃತಕ ದಾಖಲೆಗಳನ್ನು ಸೃಷ್ಟಿಸಿತು. ಇವುಗಳನ್ನು ತಪ್ಪಿಸುವ ಸಲುವಾಗಿ ಬರೆದವನೂ, ಬರೆಸಿಕೊಳ್ಳುವವನೂ, ಬರೆಸಿಕೊಟ್ಟವನೂ ಅಲ್ಲದೆ ಕಂಡವರು, ಕೇಳಿದವರು ಸಾಕ್ಷಿ ಸಹಿ ಹಾಕಿ

ದಾಖಲೆಗಳಲ್ಲಿ ದಾಖಲಾದರು. ಹೀಗೆ ಅಂಕಿತ ಮುದ್ರೆಗಳಿಂದ ಸಮಸ್ತ ದೈವದ ಸಾಕ್ಷಿ ಸಮ್ಮುಖದಲ್ಲಿ ನಡೆದ ಒಪ್ಪಂದ ಕರಾರು, ಲಿಪಿ ಮಾಧ್ಯಮದ ಮೂಲಕ ದಾಖಲೆಗಳು ಹುಟ್ಟಿದವು.

ಐತಿಹಾಸಿಕ ಕಾಗದ ಪತ್ರಗಳ ಕಾಲವೆಂದು ಗುರುತಿಸುವ ಆಧುನಿಕ ಯುಗದಲ್ಲಿ ಮರಾಠರ, ಪೋರ್ಚುಗೀಸರ, ಇಂಗ್ಲಿಷ್ ಅಧಿಕಾರಿಗಳ ಆಗಮನದಿಂದ ಹಾಗೂ ಬರವಣಿಗೆಯ ಸಾಧನವಾಗಿ ಕಾಗದದ ಬಳಕೆಯಲ್ಲಿ ಬಂದಿದ್ದರಿಂದ ಸ್ಥಳೀಯ ಸಂಸ್ಥಾನಿಕರೊಂದಿಗಿನ ಸಂಬಂಧಗಳು, ಪತ್ರ ವ್ಯವಹಾರಗಳು ಕಾಗದ ಮೂಲಕ ನಡೆಯುವಂತಾಯಿತು. ಅಧಿಕಾರಿಗಳು ಸಹಿ ಹಾಗೂ ಮೊಹರುಗಳಿಂದ ಅಧಿಕೃತಗೊಂಡ ಇಂಥ ಐತಿಹಾಸಿಕ ಪತ್ರಗಳೇ ದಾಖಲೆಗಳಾದವು. ಇವುಗಳ ಉಗಮಕ್ಕೆ ಕೇವಲ ವಿದೇಶಿ ವಿದ್ವಾಂಸರಲ್ಲದೆ, ಸ್ವದೇಶಿ ಹಾಗೂ ಸ್ಥಳೀಯ ವಿದ್ವಾಂಸರು ಕಾರಣರಾದರು.

ಕನ್ನಡ ದಾಖಲು ಸಾಹಿತ್ಯಕ್ಕೆ ಸೇರಿದ ಗುಂಪುಗಳಲ್ಲಿ ಒಂದು ಕೈಫಿಯತ್ತು. ಈ ಕೈಫಿಯತ್ತುಗಳಿಂದ ಹಳೇಬೀಡು ಕೈಫಿಯತ್ತು, ಹಾರನಹಳ್ಳಿ ಕೈಫಿಯತ್ತು, ಸವಿಳೆಕೆರೆ ಸೀಮೆ ಕೈಫಿಯತ್ತು, ದೇವಲಾಪುರ ಪ್ರತಿನಾಮಾ ಮಲ್ಲಿಕಾರ್ಜುನಪುರ ಕೈಫಿಯತ್ತು, ಶಿರಸಿ ಕೈಫಿಯತ್ತು, ಶೃಂಗೇರಿಯ ಕೈಫಿಯತ್ತು, ಕುಂಬಕಾಸಿ ಸ್ಥಳದ ಕುಂಬೇಶ್ವರ ಕೈಫಿಯತ್ತು ಈ ಎಲ್ಲ ಕೈಫಿಯತ್ತುಗಳಲ್ಲಿ ಪಾಂಚಾಳರು ಭಿನ್ನ ಭಿನ್ನ ಸಾಮಾಜಿಕ ಅಗತ್ಯಗಳಿಗಾಗಿ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ. ಜಕಣಾಚಾರಿಯ ಶಿಲ್ಪಿಯ ಕೆತ್ತನೆಯ ಮೂಲಕ ಹೆಸರುವಾಸಿಯಾಗಿದ್ದಾರೆ ಮತ್ತು ಬಡಿಗಿ ಗುರುವೊಜನು ವೈದ್ಯನಾಗಿ ಲೋಹಗಳನ್ನು ತಯಾರಿಸುವ ಮತ್ತು ದಾಖಲೆಗಳನ್ನು ಬರೆಸಿಕೊಡುವ ದೇವಾಲಯಗಳ ನಿರ್ಮಾಣ ಮಾಡುವಲ್ಲಿ ಹೆಸರುವಾಸಿಯಾಗಿದ್ದನು. ಹೀಗೆ ಹಲವು ಸಂದರ್ಭದಲ್ಲಿ ಪಾಂಚಾಳರು ಮುಖ್ಯವಾಗಿ ಈ ದಾಖಲೆಗಳಲ್ಲಿ ಕಾಣಿಸಿಕೊಂಡಿದ್ದಾರೆ.

**ಹಳೇಬೀಡು ಕೈಫಿಯತ್ತು**

ಈ ಕೈಫಿಯತ್ತಿನಲ್ಲಿ ಕಮ್ಮಾರ ಮತ್ತು ಬ್ರಾಹ್ಮಣ ಇವರಿಬ್ಬರಿಗೂ ಲೋಹದ ಸಲುವಾಗಿ ಜಗಳವಾಗಿ ಕೊನೆಗೆ ಜಕಣಾಚಾರಿಯಿಂದ ಈ ಕೈಫಿಯತ್ತು ಕೊನೆಗೊಳ್ಳುವಂತದ್ದನ್ನು ಕಾಣುತ್ತೇವೆ.

ಕೇರಳ ದೇಶದಲ್ಲಿ ಒಬ್ಬ ವಿಷ್ಣುಶರ್ಮನೆಂಬ ಬ್ರಾಹ್ಮಣನು ಬಹುದರಿದ್ರವಂತನಾಗಿದ್ದು ಈ ದರಿದ್ರವನ್ನು ಅನುಭವಿಸಲಾರೆನೆಂದು ಚಂದ್ರದ್ರೋಣ ಪರ್ವತದ ಮೇಲೋಗಿ; ತಪಸ್ಸು ಮಾಡಿ ತನ್ನ ಇಷ್ಟಾರ್ಥವನ್ನೇ ಪಡಕೊಂಡು ಬರುತ್ತೇನೆಂಬುದಾಗಿ ತನ್ನೊಳು ತಾನೆ ಯೋಚಿಸಿಕೊಂಡು ಚಂದ್ರದ್ರೋಣ ಪರ್ವತಕ್ಕೆ ಬಂದು ಈಶ್ವರನ ಕುರಿತು ಬಹುದಿನ ತಪಸ್ಸು ಮಾಡಲಾಗಿ ಆಗ ಈಶ್ವರನು ಅವನ ತಪಸ್ಸಿಗೆ ಮೆಚ್ಚಿ ಬಂದು "ಎಲ್ಲೈ ಬ್ರಾಹ್ಮಣನೇ ನೀನು ಏನು ಕಾರಣ ತಪಸ್ಸು ಮಾಡುತ್ತಾ ಇದ್ದೀಯೇ? ನಿನಗೆ ಏನು ಬೇಕು? ನೀ ಕೇಳಿದ ವರವನ್ನು ಕೊಡುತ್ತೇನೆ" ಎಂದು ಈಶ್ವರ ಹೇಳಿದ ಬಳಿಕ, "ಸ್ವಾಮಿಯೇ ನಾನು ಇದುವರೆಗೆ ಬಹುದರಿದ್ರವನ್ನು ಅನುಭವಿಸಿದೆನು, ಇನ್ನು ಮುಂದೆ ಅನುಭವಿಸಲಾರೆದೆ ನಿನ್ನ ಕುರಿತು ತಪಸ್ಸು ಮಾಡಿದೆ." ಆಗ ಸಿದ್ಧರೂಪಿ ಈಶ್ವರನು ಒಂದು ಪಾತ್ರೆಯಲ್ಲಿ ತಂದು ಈ ಸಿದ್ಧರಸವನ್ನು ಇಟ್ಟುಕೊಂಡು ಲೋಹಕ್ಕೆ ಸ್ವಲ್ಪ ಮಾತ್ರ ರಸವ ಸೋಂಕಿಸಿದರೆ ಆ ಲೋಹವೆಲ್ಲಾ ಸುವರ್ಣವಾಗುತ್ತದೆ. ಸುವರ್ಣಗಳ ಮಾಡಿಕೊಂಡು ಸುಖದಿಂದ ಇರು" ಎಂದು ಅಪ್ಪಣೆ ಕೊಟ್ಟ,

ಆ ಬ್ರಾಹ್ಮಣನು ಸಿದ್ಧರಸವನ್ನು ತಗೊಂಡು ದ್ವಾರಪುರಿಗೆ ಬಂದು ಒಬ್ಬ ಕಮ್ಮಾರನ ಮನೆಗೆ ಬಂದು ತಾನು ತಂದಿರುವಂಥ ಸಿದ್ಧರಸವನ್ನು ಭೂಮಿಯಲ್ಲಿ ಇರಿಸದೆ ಅಂತರದಲ್ಲಿ ತಗಲು ಹಾಕಿದ. ಕಮ್ಮಾರನು ತನ್ನ ಮನೆಯಲ್ಲಿ ತನ್ನ ಕುಲ ಉದ್ಯೋಗವ ಮಾಡುತ್ತಾ ಮನೆಯಲ್ಲಿ ಹೂಡಿರುವಂಥ ಈ ಕಮ್ಮಾರನ ಕುಲುಮೆಯ ಶಕೆಗೆ ಅಂತರದಲ್ಲಿ ತಗಲು ಹಾಕಿರುವಂಥಾ ಲೋಹಗಳ ಮೇಲೆ ಬಿದ್ದು ಅದು ಸುವರ್ಣವಾಯಿತ್ತು.

ಕಮ್ಮಾರನು ತನಗೆ ಬೇಕಾದ ಪಾತ್ರೆಗಳಿಗೆ ಸಿದ್ಧರಸವನ್ನು ಮುಟ್ಟಿಸಿದ್ದ. ಆ ಬ್ರಾಹ್ಮಣ ತನ್ನ ಸ್ನಾನ ಜಪ ಮುಂತಾಗಿ ಭೋಜನವನ್ನು ಮಾಡಿಕೊಂಡು ತಾನು ಇಟ್ಟಿರುವಂಥ ಕಮ್ಮಾರನ ಮನೆಯಲ್ಲಿ ವಸ್ತುವನ್ನು ತೆಗೆದುಕೊಂಡು ಮುಂದೆ ಪ್ರಯಾಣ ಬೆಳೆಸಲು ಕಮ್ಮಾರ ಮನಿಗೆ ಬಂದು ನೋಡಿದ ಅಲ್ಲಿ ಅಗ್ನಿಯಿಂದ ದಹಿಸುತ್ತಾ ಇರುವುದು ಕಂಡು ಈತನು ಬಹು ದುಃಖಪಡುತ್ತಾ ಈ ದ್ವಾರಾಪುರಿಗೆ ಅಧಿಪತಿಯಾದಂಥಾ ಬಲ್ಲಾಳ ರಾಯನ ಬಳಿಗೆ ಬಂದು "ದೊರೆಯೇ ನಿನ್ನ ಪಟ್ಟಣಕ್ಕೆ ಬಂದು ಬಹುದಿನ ತಪಸ್ಸು ಮಾಡಿ ಈಶ್ವರನಿಂದ ಪಡೆದುಕೊಂಡು ಬಂದಿದ್ದಂಥ ಸಿದ್ಧರಸವನ್ನು ಕಳಕೊಳ್ಳುವುದಕ್ಕೆ ಯೋಗ ನನಗಾಯ್ತು" ಎಂದನು.

ಆ ದೊರೆಯು "ಇದೇನು ನಿಮಿತ್ತಾ" ಎಂಬುದಾಗಿ ವಿಚಾರಿಸಿ ಕಮ್ಮಾರನನ್ನು ಕರೆತರಿಸಿ ಅವನು ಸಿದ್ಧ ಮಾಡಿದ ಸಿದ್ಧರಸದ ಪಾತ್ರೆಯನ್ನು ಆ ಬ್ರಾಹ್ಮಣ ವಶಕ್ಕೆ ತಂದುಕೊಡಲು ಹೇಳಿದನು. ಆಗ ಈ ಬ್ರಾಹ್ಮಣನು ಸಿದ್ಧರಸವನ್ನು ಬಲ್ಲಾಳರಾಯನಿಗೆ ಕೊಟ್ಟ, ಅವನಿಂದ ಸ್ವಸ್ತ ವೃತ್ತಿ ತೆಗೆದುಕೊಂಡು ಸ್ವಸ್ತದಲ್ಲಿ ಸ್ನಾನ ಜಪವನ್ನು ಮಾಡಿಕೊಂಡು ಸುಖವಾಗಿದ್ದನು.

ದಕ್ಷಿಣ ದೇಶದಿಂದ ಜಕಣಾಚಾರಿಯೆಂಬ ಒಬ್ಬ ಶಿಲ್ಪಿಯು ಹನ್ನೆರಡು ಸಾವಿರ ಭಂಟಿ ಸಮೇತವಾಗಿ ಈ ದ್ವಾರಾಪುರಿಗೆ ಬಂದನು. ಇವನು ಪೂರ್ವಜನ್ಮದಲ್ಲಿ ವಿಶ್ವಕರ್ಮನು. ಆವನು ಶಿಲ್ಪಿಯಾಗಿ ಚೋಳ ದೇಶದಿಂದ ಇಲ್ಲಿಗೆ ಬರುವಾಗ ಅನೇಕವಾದ ದೇವಾಲಯಗಳನ್ನು ಕಟ್ಟಿ ಇಲ್ಲಿಗೆ ಬಂದು ಬಲ್ಲಾಳರಾಯನ ಕಂಡು ಚೋಳದೇಶದ ದೊರೆಯು ನನ್ನ ಕೈಯಿಂದ ಅನೇಕವಾದ ದೇವಾಲಯಗಳನ್ನು ಕಟ್ಟಿಸಿದನು. ಇಲ್ಲಿಗೆ ನಿಮ್ಮ ಮಹಿಮೆಯನ್ನು ಕೇಳಿ ಬಂದೆನು. ಅಪ್ಪಣೆ ಕೊಟ್ಟರೆ ಇಲ್ಲಿಯೂ ದೇವಾಲಯಗಳನ್ನು ಕಟ್ಟುವೆನು ಎಂದನು.

ಬಲ್ಲಾಳರಾಯನಿಗೆ ಕುಷ್ಠವ್ಯಾಧಿಯಾಗಿತ್ತು. ಬೇಟೆಯಾಡಲು ಅರಣ್ಯಕ್ಕೆ ಹೋಗುತ್ತಾನೆ. ಅಲ್ಲಿ ಪರ್ವತ ಋಷ್ಯಶೃಂಗನೆಂಬ ಋಷಿಯು ತಪಸ್ಸು ಮಾಡಿಕೊಂಡು ಇರುತ್ತಿದ್ದನು. ಬಲ್ಲಾಳನು ಋಷಿಗಳ ಸಮೀಪಕ್ಕೆ ಬಂದು ಸ್ವಾಮಿ ಋಷಿಗಳಿಗೆ ದರ್ಶನದಿಂದ ನಾನು ಕೃತಾರ್ಥನಾದೆನು. ನಾನು ಕುಷ್ಠವ್ಯಾಧಿಯಿಂದ ಬಹು ಸಂಕಟಪಡುತ್ತಾ ಇದ್ದೇನೆ. ಇದಕ್ಕೆ ಪರಿಹಾರವೇನು ಎಂದು ಕೇಳಿಕೊಂಡಿದ್ದರಿಂದ ಆಗ ಆ ಋಷಿಗಳು ಎಲೈ ರಾಯನೇ ಶಿವಾಲಯ ಕಟ್ಟಿಸಿ ಶಿವಪ್ರತಿಷ್ಠೆಯನ್ನು ಮಾಡಿಸು ಇಹಲೋಕದಲ್ಲಿ ಸಂಪದವೂ ಪರಲೋಕದಲ್ಲಿ ಅನೇಕ ಪುಣ್ಯವು ಉಂಟಾಗುತ್ತದೆ ಎಂದು ಹೇಳಿದರು.

ಆಗ ಬಲ್ಲಾಳರಾಯನು ಈ ಜಕಣಾಚಾರಿಗೆ ಶಿಲ್ಪಿಯು ನೀ ಹೇಳಿದಂತೆ ಆಗಲಿ ಅನೇಕ ದೇವಾಲಯಗಳ ನಿರ್ಮಾಣ ಮಾಡು ನಿನಗೆ ಅನೇಕ ದ್ರವ್ಯವನ್ನು ಕೊಡುತ್ತೇನೆ ಎಂದು ಹೇಳಿದನು.

ಆಗ ಆ ಶಿಲ್ಪಿಯು ನನಗೆ ಕುಷ್ಠವುಂಟು. ನಾನು ನಿಲ್ಲಿಸಿದ ಪ್ರತಿಮೆಗಳಲ್ಲಿ ಉದುರವಂಥಾ ಸಣ್ಣ ಕಲ್ಲಪುಡಿ ಎಷ್ಟು ಉಂಟೋ ಆ ತೂಕದ ದ್ರವ್ಯವನ್ನು ಕೊಟ್ಟರೆ ನಾನು ನಿರ್ಮಾಣ ಮಾಡುವೆನು ಎಂಬುದಾಗಿ ಕೇಳಿಕೊಂಡ ಕಾರಣ ಅದೇ ಪ್ರಾರಕ್ಕೆ ದೇವಾಲಯಗಳ ಕಟ್ಟಿಸಿದನು.

ಹೊಯ್ಸಳನೆಂಬ ನಾಮಧೇಯವನ್ನು ಈಶ್ವರನಿಗ ನಾಮವನ್ನು ಮಾಡಿ ಹೊಯ್ಸಳೇಶ್ವರನೆಂಬುದಾಗಿ ಈಶ್ವರ ಪ್ರತಿಷ್ಠೆಯನ್ನು ಮಾಡಿದನು.[೪೪]

**ಹಾರನಹಳ್ಳಿ ಕೈಫಿಯತ್ತು**

ಈ ಕೈಫಿಯತ್ತಿನಲ್ಲಿ ಜಕಣಾಚಾರಿಯರ ಉಲ್ಲೇಖವಿದೆ. ಜಕಣಾಚಾರಿ ತ್ರಿಕೂಟಾಚಲ ದೇವಸ್ಥಾನವನ್ನು ಕಟ್ಟಿಸಿ ಮತ್ತು ಶಿವ, ನರಸಿಂಹ ಗೋಪಾಲಸ್ವಾಮಿ ದೇವರ ಪ್ರತಿಷ್ಠೆ ಮಾಡಿದನು ಎಂದು ತಿಳಿದುಬರುತ್ತದೆ.

"ಅಮರಗಿರಿ ಪರ್ವತದಿಂದ ಸಹಸ್ರ ಬ್ರಾಹ್ಮಣರು ಬಂದು ದೊರೆಯನ್ನು ಕಾಣಿಸಿಕೊಂಡು ಯೀ ಬ್ರಾಹ್ಮಣರಿಗೆ ಪ್ರತ್ಯೇಕವಾಗಿ ಅವರ ಮರ್ಯಾದೆಯಿಂದ ಬಹಳ ಭಯಭಕ್ತಿಯಲ್ಲಿ ಆರಾಧನೆಯನ್ನು ಮಾಡಿ ದೇವರಾಯಪಟ್ಟಣ ಇದು ಮಹಾಸಿದ್ಧಿ ಸ್ಥಳೀಯ ಸ್ಥಳದಲ್ಲಿ ಭಗವಂತನೇ ಬ್ರಾಹ್ಮಣ ಮುಖದಲ್ಲಿ ಅವತಾರವಾಗಿಯಿದ್ದಾನೆ. ಈ ಸ್ಥಳದಲ್ಲಿ ಪಟ್ಟಣವನ್ನು ಕಟ್ಟಿಸಿ ಬ್ರಾಹ್ಮಣರಿಗೆ ಅಗ್ರಹಾರವನ್ನು ಕೊಡಿಸಿ ಕೊಟ್ಟು ದೇವಾಲಯ ಮುಂತಾಗಿ ಕಟ್ಟಿಸಿದರ ಆಚಂದ್ರಾರ್ಕವಾಗಿ ಕೀರ್ತಿ ನಿಂತು ಸಾರೋದ್ಧಾರವಾಗಿ ಧರ್ಮ ಬೀರುತ್ತಾಯಿದೆ.

ದೇವರಾಯಪಟ್ಟಣವೆಂಬ ಗ್ರಾಮಕ್ಕೆ ಕೊಂಬಿನ ಸನ್ನೆಯಲ್ಲಿ ಈ ಶ್ಯಾನುಭೋಗದಲ್ಲಿ ಕೋಟೆ ಕಟ್ಟುವಂತೆ ನೇಮಕ ಮಾಡಿಸಿ ದಕ್ಷಿಣ ದಿಕ್ಕಿನಲ್ಲಿ ಕೆರೆಯನ್ನು ಕಟ್ಟಿಸಿ ಅದಕ್ಕೆ ಬ್ರಹ್ಮಪುರಿಯೆಂಬ ಹೆಸರುಯಿಟ್ಟು ಈ ಊರ ಮಧ್ಯೆ 'ಜಕಣಾಚಾರಿ ಕೈಯಿಂದ ತ್ರಿಕೂಟಾಚಲ ದೇವಸ್ಥಾನವನ್ನು ಕಟ್ಟಿಸಿ ಶಿವ, ನರಸಿಂಹ ಗೋಪಾಲಸ್ವಾಮಿ ಮೂರು ದೇವರ ಪ್ರತಿಷ್ಠೆಯನ್ನು ಮಾಡಿ ಈ ದೇವರ ಪೂಜೆಗೆ ರಥೋತ್ಸವ, ಮಾಸೋತ್ಸವ ಮುಂತಾದವು ಸಾರೋಧಾರವಾಗಿ ನಡೆದವು.

**ದೇವಲಾಪುರ ಪ್ರತಿನಾಮ ಮಲ್ಲಿಕಾರ್ಜುನಪುರ ಕೈಫಿಯತ್ತು**

ಇಲ್ಲಿ ಬಡಗಿ ಗುರುವೋಜನು ವೈದ್ಯನಾಗಿದ್ದನು. ಕಮ್ಮಾರ ಸೋಮಜನು ಅಚ್ಯುತರಾಯ ಮಲ್ಲಪ್ಪಣ್ಣನವರ ಕಾಲದಲ್ಲಿ ದೇವಲಾಪುರ ಕಟ್ಟುವ ಸಂದರ್ಭದಲ್ಲಿ ಬಡಗಿ, ಕಮ್ಮಾರರು ಇದ್ದರು ಎಂದು ಉಲ್ಲೇಖವಿದೆ.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೪೨೦. ಪ್ರಭವನಾಮ ಸಂವತ್ಸರದ ಕಾರ್ತಿಕ ಶುದ್ಧ ೧೫ಯಲ್ಲು ತೀರ್ಥಹಳ್ಳಿ ಮಕೈರಾ॥ ಸಾಳ್ವ ನರಸಿಂಗರಾಯರ ಆಳಿಕೇಲಿ ಗ್ರಾಮಕ್ಕೆ ಸ್ಥಳಜ್ಞರು ಗೌಡರು ಯಿಂಡಿ ಮಾದವರಸಯ್ಯ ಬಡಿಗಿ ಗುರುವೋಜ, ತಳವಾರ ನಲ್ಲೋಲ ಮಾನಯ್ಯ ಗ್ರಾಮದ ಗೌಡ ಶ್ಯಾನಭೋಗ ಬಡಿಗಿ, ತಳವಾರರು ಸಹ ವಿಜಯನಗರ ಬಿಟ್ಟು ಹೋದರು ವಿಜಯನಗರ ಹೇರಿಕೊಂಡು ಕೆಲವು ಹೋದ ಮೇಲೆ ಶಕ೧೪೫೧ನೆಯ ದುಮು ೯೫ ಸಂವತ್ಸರ ಅಚ್ಚುತರಾಯ ಮಲ್ಲಪ್ಪಣ್ಣನವರ ಕಾಲದಲ್ಲಿ ದೇವಲಾಪುರ ಪ್ರತಿನಾಮವಾದ ಮಲ್ಲಿಕಾರ್ಜುನ ಪುರವರ್ಗೆಲು ಮುಂದೆ ಗಂಗಲಾಪುರದಲ್ಲಿ ನಿಂತರು.

ಅಚ್ಯುತರಾಯನ ಎದುರಿಗೆ ಪರಿವಿನಾಯಕ ಮಂಗಿನಾಯಕನವರು ತುಪ್ಪದ ಕೊಡಗಳನ್ನೆತ್ತಿಕೊಂಡು ಬಂದು ಹೇಳಿಕೊಂಡ ವಿವರವು 'ಈ ಭೂಮಿ ಪಂಡರಬಿದ್ದುಯಿದ್ದೀತೆ ನೇಮಗೆ ಕೋಟೆ ಊರುಗಳ ಕಟ್ಟಿಸಿ ಭೂಮಿಕಿರ್ದಿ ಮಾಡಿಕೊಟ್ಟೇವು ಎಂಬ ಹಾಗೆ ಹೇಳಿ ಭೂಮಿ ಇಸುಕೊಂಡು ರಾಯರ ಅಪ್ಪಣೆ ಮೇಲೆ ಬಂದು ತೀರ್ಥಕ್ಕೆ ಪ್ರತಿನಾಮವಾದ ಹಿರೇಹಾಳಿಗೆ ಗ್ರಾಮಕ್ಕೆ ಗೌಡ ಶ್ಯಾನಭೋಗರು ಎಲ್ಲಾ ಯಿದ್ದರೆ ಎಂದು ವಿಚಾರಣೆ ಮಾಡಲಾಗಿದೆ.

ಕಾಲವೆಹಳ್ಳಿಯ ಮಾಧವರಸಯ್ಯನ ಮಗ ತಿಪ್ಪರಸಯ್ಯನು ರಾಯರಲ್ಲಿ ಅರಮನೆ ಶ್ಯಾನುಭೋಗನಾಗಿಯಿದ್ದನು. ಬಡಿಗಿ ಗುರುವೋಜನು ವೈದ್ಯನಾಗಿಯಿದ್ದನು. ಕಮ್ಮಾರನೂ ಸೋಮಜನು ರಾಜಪನಲ್ಲಿ ನಾಲು ಬಂದಿ ಆಗಿತ್ತು. ಗೆ ನಾಲು ಕಟ್ಟುತ್ತಾಯಿದ್ದನು. ವಿಜಯನಗರ ಪೆನುಗೊಂಡೆ ಸಹ ೭೦೦ ವರಹಕ್ಕೆ ಗುತ್ತಿಗೆದಾರನಾಗಿಯಿದ್ದನು ಅಲ್ಲಿ ಊರು ಕಟ್ಟುವಾಗಯಿದ್ದವರು ಭೋಜನ ಗೌಡನ ಗೌಡಕಿ ಶ್ಯಾನಭೋಗ ಕಾಲವೇಹಳ್ಳಿ ತಿಪ್ಪರಸಯ್ಯ ಬಡಿಗಿ, ಗುರುವೋಜ ಕಮ್ಮಾರ ಜಡೆತಲೆ ಸೋಮಜನು ಅಲ್ಲಿ ಮಂಗಿನಾಯಕ ಕಾಲವಾದನು. ಮುಂದೆ ಬುರಿನಾಯಕನ ಕಾಲದಲ್ಲಿ ಊರು ಕಟ್ಟಿದರು. ಆಗ್ಗೆ ಗೌಡರು ಗಿರಿಯಪ್ಪಗೌಡ ಹನುಮಂತಗೌಡ ಶ್ಯಾನಭೋಗ ಬಡಿಗ ಜನವೋಜ ಕಮ್ಮಾರ ಸೋಮಜ ಇವರೆಲ್ಲರು ಇದ್ದರು.

ಆಮೇಲೆ ರಾಮರಾಜನ ಆವಾಂತರ ಸ್ವಾಸ್ಥ ಬಿದ್ದ ಬಳಿಕಾ ಬುರಿನಾಯಕನವರು ಗೌಡ ಶ್ಯಾನುಭೋಗರು ಪ್ರಜೆಗಳುವೊಳಗೆ ಕರೆ ಹೋದವರು ವುಳದವರು ಹಿರೆವಾಬಣ್ಣ ಚಿಕ್ಕವಾಬಣ್ಣ ಬಡಿಗಿ ಬನವೋಜ ಕಮ್ಮಾರ ಜಡತಲೆ ಸೋಮಜ ಬಡಿಗಿ ಬನವೋಜ ತನ್ನ ಹೆಂಡರು ಮಕ್ಕಳು ಹುಡುಕುತ್ತಾ ಹೋಗಿ ತಮ್ಮ ಕುಲದವರಲ್ಲಿ ಯಿರಲಿಕ್ಕೆ ಹೋಗಿ ಕರಕೊಂಡು ಬಾಹಾಗಲು ತನ್ನ ಹೆಂಡರು ಮಕ್ಕಳು ಕರೆಸಿಕೊಂಡು ವೀರಣ್ಣನ ಹೆಸರುವೊಬ್ಬ ಮಗನ ಹೆಸರು ಯಿಟ್ಟು ವಿರೋಜನೆಂದು ಕರೆದುರುಣ ಹಿಂಗಿಸಿಕ್ಕೊಂಡನು. ಹೆಂಡರ ಮಕ್ಕಳ ಕರೆಕೊಂಡು ಬಂದನು. ಉಳಿದವರು ಕಾರೆಕಲ್ಲು ವಾಬಣ್ಣನು ನಿಂದ್ರಲಾರದೆ ಕಾರೆಕಲ್ಲಿಗೆ ವೋಡಿ ಹೋದನು. ಯೀ ಪ್ರಕಾರ ಯಿರಲಿಕ್ಕೆ ಪೂರ್ವದವರು ಬಂದು ಯಥಾಪ್ರಕಾರಕ್ಕೆ ಸ್ತಲಾ ಮನೆ ಹೊಂದಿಕ್ಕೊಂದು ಸಂರಕ್ಷಿತಯಿದ್ದಾರೆ, ಯಿಂದು ಬರೆದ ಕೈಫಿಯತ್ತು.[೬]

**ಶಿರಸಿ ಕೈಫಿಯತ್ತು**

ಈ ಕೈಫಿಯತ್ತಿನಲ್ಲಿ ಪಾಂಚಾಳ ನರಸಣ್ಣ ಯೆಂಬುವನು ಬಂಕಾಪುರದ ಮಾರಿ ದೇವತೆಯ ಪೂಜಾರಿಯಾಗಿ ಕಾರ್ಯ ನಿರ್ವಹಿಸುತ್ತಿರುತ್ತಾನೆ. ಭಾವ ಸಂವತ್ಸರದ ಆಷಾಢ ಶುದ್ಧ ೧೫ಲ್ಲು ಶಿರಶಿಮಾಗಣಿ ಶ್ಯಾನುಭೋಗ ರಾಮಯ್ಯ ನಾಡಿಗ ಶೇಷಯ್ಯ ಪಡಿಗೆರಿ ಶಿವಯ್ಯ ಮೊದಲಾದವರು ಬರಶಿಕೊಟ್ಟ ಶಿರಶಿ ಮಾಗಣಿ ಕೈಫಿಯತ್ತು.

**ಶಿರಶಿ ಮಾರಮ್ಮ ದೇವರ ಕೈಫಿಯತ್ತು**

ಪ್ರಾಕು ಮೊಗಲರ ಅವಾಂತ್ರದಲ್ಲಿ ಅವರ ದಂಡು ಎಂದು ಬಂಕಾಪುರ ಕಿಲ್ಲೆಗೆ ಮುತ್ತಿಗೆ ಹಾಕಿ ಯುದ್ಧ ಮಾಡಿ ಕಿಲ್ಲೆಠಾಣ್ಯ ಹಾಕಿದರು. ಆಗ್ಯ ಗುಳ್ಯಾದ ಜನರೆಲ್ಲಾ ಕಿಲ್ಲೆದಿಂದ ಹೋರಟು ಗಡಿಪಾರು ಬರುವಾಗ್ಯ ಆ ಸ್ಥಳದಲ್ಲಿ ಮಾರಿದೇವರು ಇರುವಂತೆ ಒಂದು ಪೆಟ್ಟಿಗೆ ಇತ್ತು ಅದನ್ನು ಒಬ್ಬ ಇದರಲ್ಲಿ

ಏನಾದರು ಇರಬಹುದು ಎಂದು ಹೊತಗೊಂಡು ಬಂದನು. ಶಿರಶಿ ಕೋಟೆ ಕೆರೆ ಮೇಲಗಡೆ ಗುಡ್ಡದ ಮೇಲೆ ವುಳಕೊಂಡನು. ಆ ಮಾರಿ ದೇವವೊಬ್ಬನ ಮೇಲೆ ಬಂದು "ನಾನು ಬಂಕಾಪುರದ ಮಾರಿ ಯೀ ಸ್ಥಳದಲ್ಲಿ ಯಿದ್ದವರು ಯಜಮಾನರ ಕರಶಿ" ಅಂತ ಅಪ್ಪಣಿ ಆಯಿತು. ಆ ಯಜಮಾನ ಕೆಳದಿ ನೀನು ಯಾರು? ಅಂತ 'ನಾನು ಬಂಕಾಪುರದಲ್ಲಿ ಯಿದ್ದೆ ನನ್ನ ಹೆಸರು ಮಾರಮ್ಮ ನಾನು ಆವಾಂತ್ರದಿಂದಾಯೀ ಜನರ ಸಂಗಡಾ ಬಂದೆ ನಿಮ್ಮ ಸ್ಥಳದಲ್ಲಿ ನಾನು ಯಿರಬೇಕು. ನನಗೆ ವೊಂದು ಸ್ಥಳಾ ಮಾಡಿಕೊಡಿ' ಯಂತಾ ಅಪ್ಪಣಿ ಆದ್ದರಿಂದಾ ವಾಲಗ ಬಜಂತ್ರಿಯಿಂದ ವೂರ ವೊಳಗ ಕರಕೊಂಡು ಬಂದು ಕಸುಬೆಯಲ್ಲು ಸ್ಥಾಪನೆ ಮಾಡಿ ಅಮೃತಪಡಿ ನೈವೇದ್ಯದ ಬಗ್ಯೆ ಮಾರೀಸರುವಿನ ಹೊದ್ಯಲದ ೫ ಗುತ್ತಿಗೆ ಭತ್ತ ಖಂಡಗ ೧೮ (ಹದಿನೆಂಟು) ಖಂಡಗ ಭತ್ತ ಸಲ್ಲುತ್ತಿತ್ತು. ಮೂರು ವರುಷಕ್ಕೊಂದು ಧಪಾತಿ ಹಬ್ಬಾ ಮಾಡಬೇಕಂತ ಅಪ್ಪಣಿ ಆಯಿತು.

ಆ ಪ್ರಕಾರ ಪೊಜೆಗೆ ಪಾಂಚಾಳ ನರಸಣ್ಣ ಯೆಂಬವನ ಪೊಜೆಗೆ ಯಿಟ್ಟು ಯಿ ವರಿಗು ಸದಾಶಿವರಾಜರ ಆಮಲುಯಿದ್ದ ಪರಿಯಂತ್ರ ಅಮೃತಪಡಿ ಭತ್ತ ಸಲ್ಲುತಬಂತು ಅಲ್ಲಿಂದಾ ಪೊಜೆ ನಡೆದು ಬಂತು[೬೬] ಎಂದು ತಿಳಿಯಬರುತ್ತದೆ.

**ಶೃಂಗೇರಿಯ ಕೈಫಿಯತ್ತು**

ಹಜೂರಿನಲ್ಲಿ ಇದ್ದ ಪಂಚಾಳ ಸೊನ್ನಾಚಾರಿ ಮತ್ತು ಅರ್ಕಾಟ್ ಸೀಮೆ ಬಡಾಯಿ ಅಕ್ಕನ್ನ ಇವರಿಬ್ಬರು ಬಂದೂಕು ಮತ್ತು ಲೋಹದ ವಸ್ತುಗಳನ್ನು ತಯಾರಿಸುವಂತರಾಗಿದ್ದರು.

ಛೊಂಡಜಿ ನಗರ ಬಾರುದ್‌ಖಾನೆಯಲ್ಲಿ ಚಕ್ರಯಾರು ಮಾಡಿದರು ಎಂದರೆ ಮುಂಬೈಯಿಂದ ಇಲ್ಲಿಗೆ ಮಹಮ್ಮದ್ ಪಂಜಾನು ಎಂಬ ಕರೇ ಮನುಷ್ಯದರೋಗಿ ಮಾಡಿಕೊಂಡು ಸಕ್ಕರದಲ್ಲಿ ಸಂಬಳಕ್ಕಿದ್ದನು. ಈತನು ಮುಂಬೈಯಿಂದ ತಮ್ಮ ನೆಂಟರನ್ನು ಕರೆಯಿಸಿ ಬಿಟ್ಟು ಚಕ್ರವನ್ನು ಮಾಡಿಸಿ ಕಾರ(ಕಾರು) ಖಾನೆಯಲ್ಲಿಟ್ಟು ಇದ್ದ ಈ ಹಂಗಾಮದಲ್ಲಿ ಊರ ಬಿಟ್ಟು ಹೋದನು. ಈಗ ಎಲ್ಲಿದ್ದನೋ ಅವನು ಗೊತ್ತಿಲ್ಲ ಎಂಬ ಕಲಂ, ಕಾರ್ಖಾನೆ ನಿಂತ ಬಳಿಕ ಹೊಸದಾಗಿ ಟಿಪ್ಪುಸುಲ್ತಾನ ದಿವಸದಲ್ಲಿ ಅವರು ವಿಶ್ವಾವಸು ಸಂವತ್ಸರದಲ್ಲಿ ಬನಾರಿ ಕಾರ್ಖಾನೆ ಮಾಡಿದ್ದು ಸೈದದಾಉದ್ ಎಂಬುವನು ನಗರದಲ್ಲಿಂದ ಹಜೊರಿಗ ಹೋಗಿ ಕಾರಗಾರು ಕರೆದುಕೊಂಡು ಬಂದದ್ದು ಅರ್ಕಾಟ್, ಸೀಮೆಬಡಾಯಿ ಅಕ್ಕನ್ನ, ಪಂಚಾಳ ಸೊನಾಚಾರಿ. ಈ ಎರಡು ಜನವನ್ನು ಕರೆತಂದಿಟ್ಟು ಇವರ ತಾಬಿಕೆಯಲ್ಲಿ ಲೋಹದ ಬಡಾಯಿ ಜನಗಳನ್ನು ಸಹಾಕೊಟ್ಟು ತಯಾರು ಮಾಡಿದಂತಹ ನಗು ಬಂದುಕು, ತಲವಾರು, ಲೊಸ್ತಾನು ಕೋಪಿನ ಜೇನು ಬೈಕೆ, ಗಾಡಿ, ರಣಗಾಡಿ, ಮುಂತಾಗಿ ಆಗುತ್ತಾ ಇದ್ದಿತೆಂಬ ಕಲಂ[೬೭] ಇದೆ.

**ಕುಂಬಕಾಸಿ ಸ್ಥಳದ ಕುಂಬೇಶ್ವರ ಕೈಫಿಯತ್ತು**

ಕುಂಬಕಾಸಿ ಸ್ಥಳದಲ್ಲಿ ವಿಶ್ವಕರ್ಮನು ಚಿತ್ತವಾದಂತಾ ದೇವಾಲಯಗಳನ್ನು ನಿರ್ಮಿಸುತ್ತಿದ್ದನು ಎಂದು ಈ ಕೈಫಿಯತ್ತಿನಿಂದ ತಿಳಿದುಬರುವಂತದ್ದು. ಕುಂಭಕಾಸಿ ಸ್ಥಳದ ಕುಂಬೇಶ್ವರ ದೇವರ

ಆಣೆಗುಡ್ಡೆ. ಗಣಪತಿ ಸಹಾ ಕೈಫಿಯತ್ತಿನ ವಿವರ: ಕ್ಷಯನಾಮ ಸಂವತ್ಸರದ ಜೇಷ್ಠ ಶು॥ ೧೨ಲ್ಲು ಆ ಸ್ಥಳದ ಉಪಾಧ್ಯಾಯ ಪುರಾಣಿಕ ರಾಮಭದ್ರಾಚಾರ್ಯ ಅರ್ಚಕ ವೆಂಕಣ್ಣ ಭಟ್ಟ ಮುಂತಾದವರು ಕುಂಪಣಿ ಸರಕಾರಕ್ಕೆ ಬರಸಿಕೊಟ್ಟ ಕೈಫಿಯತ್ತು ನಾಮವಿವರ

ಪದ್ಮಪುರಾಣ ಪುಷ್ಕರಖಂಡ ೬೫ ಅಧ್ಯಾಯದ ಮೇಲೆ ಅಧ್ಯಾಯ ಪರಿಯಂತ್ರ ೨೪ ಅಧ್ಯಯನದಿಂದ ಹೇಳಲ್ಪಟ್ಟ ಆ ಕ್ಷೇತ್ರ ಮಹಿಮಾ ವ್ಯವಸ್ತಶ ಮನ್ವಂತರದಲ್ಲಿ ೨೮ನೆ ತ್ರತಾಯುಗ ಅಂತ್ಯ ದ್ವಾಪಾರಯುಗ ಕಾಲದಲ್ಲು ಮದುನಾಯಕನಾದ ವಸಂತಪುರುಷನು ಯಿ ಸ್ಥಳದಲ್ಲಿ ನಾರಾಯಣನನ್ನು ಕುರಿತು ತಪಸ್ಸು ಮಾಡಿದ್ದರಿಂದ ಆ ದೇವರು ಅವನಿಗೆ ಪ್ರಸನ್ನರಾಗಿ "ಯೀ ಸ್ಥಳ ಪ್ರಸಿದ್ಧವಾಗೂ ರೀತಿಗೂ ಆ ಸ್ಥಳದಲ್ಲಿ ತಪಸ್ಸು ಮಾಡಿದವರಿಗೆ ಶೀಘ್ರ ಮನಸಾಭಿಷ್ಟವಾಗೂ ರೀತಿಗು ಅನುಗ್ರಹ ಮಾಡಿದನು.

ತದನಂತರ ಪರಶರಾಮ ದೇವರು ತಮ್ಮಿಂದ ನಿರ್ಮಿತವಾದ ಕ್ಷೇತ್ರಗಳನ್ನು ನೋಡಿಕೊಂಡು ಬರುತ ಯೀ ಕ್ಷೇತ್ರಕ್ಕೆ ಒಂದು ಈ ಕ್ಷೇತ್ರ ಉತ್ತಾಂತವನ್ನು ತಿಳಿದು ಯಿದೇ ರೀತಿಯಲ್ಲಿ ಪ್ರಸಿದ್ಧವಾಗಲಿಯೆಂದ ನೇಮಿಸಿದರು ಶ್ರೀ ನಾರಾಯಣ ದೇವರನ್ನು ಕುರಿತು ತಪಸ್ಸು ಮಾಡಿದ್ದಲ್ಲಿ ಮನಸಾಭಿಷ್ಟವನ್ನು ಕೂಡುತ್ತಿದ್ದರು. ಅದೇರೀತಿಯಾಗಿ ವಸಿಷ್ಟಾದಿ ಸಕಲರುಷಿಗಳು ಆದಿಮಧುವನಕ್ಕೆ ಶ್ರೀಕೃಷ್ಣ ದೇವರು ಸಹ ನಾರಾಯಣದೇವರು ಸಹಾಯೀ ಕೋಟಿರುಷಿಗಳಿಗೆ ಪ್ರಸನ್ನರಾಗಿ ಯಿವರ ಶಾಪವಿಮೋಚನೆ ಮಾಡಿ ಯಥಾ ಪ್ರಕಾರ ಜ್ಞಾನಿಗಳಾಗಿರಿ ಯೆಂಬುದಾಗಿ ವರವನ್ನು ಕೊಟ್ಟು ಯೀ ಸ್ಥಳದಲ್ಲು ನಾವು ಉಭಯಸ್ಥರು ಯಿರಬೇಕೆಂಬುದಾಗಿ ಹೇಳಿ ಸುನೇತ್ರದಿಂದ ಯರಡು ತೀರ್ಥವನ್ನು ನೇಮಿಸಿ ಚಂದ್ರಸೂರ್ಯ ಪುಷ್ಕರಣ್ಯಾಭಿಧಾನವಾಗಿ ನಿರ್ಮಿಸಿ ವಿಶ್ವಕರ್ಮಗೆ ವಿಜ್ಞಾಪಿಸಿದರು. ಉಭಯತ್ರಕರುಗೆ ವಾಸಪ್ರವಾಸ ಪ್ರಯುಕ್ತ ಚಿತ್ರವಾದಂತಾ ದೇವಾಲಯಗಳು ಯರಡು ನಿರ್ಮಿಸು ಯಂತಾ ಕೊಟ್ಟ ಆಜ್ಞೆಯನ್ನು ಸಿರಸಾವಹಿಸಿಕೊಂಡು ತಮ್ಮಾ ಮಯಗಳಾದ ದೇವಾಲಯಗಳನ್ನು ನಿರ್ಮಿಸಿ ಉಭಯ ದೇವರಿಗೆ ಅರಿಕೆ ಮಾಡಲಾಗಿ, ಆಗ ತಾಯಿ ಉಭಯಸ್ತರು ಕೆಲವು ದಿನಾ ವಾಸಮಾಡಿಯಿದ್ರು ಮುಂದೆ ಕಲ್ಪಾಂತಕವಾಗುತದೆಯಾ ಯೀ ಯರಡು ಆಲಯನ್ನೆ ನಾಗಾಚಲವನ್ನು ಆ ದೇವಾಲಯದಿಂದ ಆ ಶಿವನು ಭಾಗೀರತಿಯನ್ನು ಬಿಡೆ ಚಂದ್ರ ಸೂರ್ಯ ಪುಷ್ಕರಣೆಗೆ ಪೂರ್ವದಲ್ಲಿ ಚಿಕ್ಕ ಸರೋವರದಲ್ಲಿ ಪ್ರಖ್ಯಾತವಾಯಿತು.

**೩.೩. ಶಾಸನಗಳು**

ಪ್ರಾಚೀನ ಕಾಲದಲ್ಲಿ ಪಾಂಚಾಳರು ತಾವು ನಿರ್ವಹಿಸುವ ವಿವಿಧ ರೂಪದ ದಾನ ಪಡೆದ ಹಾಗೂ ಪಡೆದುದರಲ್ಲಿ ಭಾಗಶಃ ತಿರುಗಿ ಸತ್ಪಾತ್ರಕ್ಕಾಗಿ ದಾನ ಮಾಡಿದ ಉಲ್ಲೇಖಗಳು ಕನ್ನಡ ಶಾಸನಗಳಲ್ಲಿ ದೊರೆಯುತ್ತವೆ. ಪಾಂಚಾಳರು ಅಂದಿನ ಕಾಲದಲ್ಲಿ ತಮ್ಮ ವೃತ್ತಿಯ ನಿಯಮಗಳನ್ನು ಕಾಪಾಡಿಕೊಂಡು ಬರಲು ಸಂಘ ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿದ್ದರು. ಸಾಮಂತರಾಗಿ ಮಂತ್ರಿಗಳಾಗಿ, ಭಂಡಾರಿಗಳಾಗಿ, ಕವಿಗಳಾಗಿ, ಜ್ಯೋತಿಷಿಗಳಾಗಿ ಸಮಾಜದಲ್ಲಿ ಪಾಂಚಾಳರ ಪಾತ್ರ ಬಹುಮುಖ್ಯವಾಗಿತ್ತು. ದೇವಸ್ಥಾನಗಳ ನಾನಾ ವಿಧವಾದ ವಿಗ್ರಹಗಳು, ಗರುಡಕಂಬಗಳು, ಸಿಂಹಾಸನ, ಮಂದಾಸನ,

ದೇವರ ಗದ್ದಿಗೆ, ವೀರಗಲ್ಲುಗಳು ಹೀಗೆ ಹತ್ತು ಹಲವಾರು ಉಪಕರಣಗಳ ಜೊತೆಗೆ ಯುದ್ಧೋಪಕರಣಗಳನ್ನು ಮೊದಲಾದ ಉಪಕರಣಗಳನ್ನು ತಯಾರಿಸುವ ಕಾರ್ಯ ಪಾಂಚಾಳರದಾಗಿತ್ತು. ಶಾಸನ, ದಾಖಲೆಗಳು ಹಾಗೂ ಕನ್ನಡ ಸಾಹಿತ್ಯ ಕೃತಿಗಳ ಅವಲೋಕನದಿಂದ ಪಾಂಚಾಳಕರು ಪರಂಪರಗತವಾಗಿ ಮುಂದುವರಿಸಿಕೊಂಡು ಬಂದು ತಮ್ಮ ಕಲೆಯ ಪ್ರಾವೀಣ್ಯತೆಯಿಂದ ರಾಜ ಮಹಾರಾಜರುಗಳಿಂದ ಸನ್ಮಾನವನ್ನು ಸ್ವೀಕರಿಸಿದವರು.

ರೈತ ಕುಟುಂಬಗಳಿಗೆ ಬೇಕಾದ ಸಲಕರಣೆಗಳನ್ನು ಸಕಾಲಕ್ಕೆ ಒದಗಿಸಿ ರೈತಾಪಿ ಜನಗಳಿಂದ ಆಯಗಾರರು ಎಂದು ಕರೆಸಿಕೊಂಡಿದ್ದಾರೆ. ಪಾಂಚಾಳರ ಬಗ್ಗೆ ನೂರಾರು ಶಾಸನಗಳು ದೊರೆಯುತ್ತವೆ. ದಾನ ಹಾಗೂ ದೇವಾಲಯಗಳ ನಿರ್ಮಾಣ, ಕೆರೆ ಕಟ್ಟಿಸಿ, ಅವುಗಳಿಗೆ ಸ್ವತಃ ದಾನಗಳನ್ನು ನೀಡಿದ್ದಾರೆ. ತುರುಗಳ ಕಳ್ಳತನ ಸ್ತ್ರೀಯರ ಮಾನ ಕಾಪಾಡುವ ಸಂದರ್ಭದಲ್ಲಿ ತಮ್ಮ ಜೀವನದ ಹಂಗು ತೊರೆದು ಹೋರಾಡಿ ಸಾಹಸ ಧೈರ್ಯಗಳನ್ನು ತೋರಿದ್ದಾರೆ. ಇವರು ಶಾಸನಗಳಲ್ಲಿ ಪಾಂಚಾಳರು, ವಿಶ್ವಕರ್ಮರು, ವಿಶ್ವಬ್ರಾಹ್ಮಣರು, ಪಂಚಕರ್ಮಿಯರು ಮುಂತಾದ ಹೆಸರುಗಳಿಂದ ಗುರುತಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಪಾಂಚಾಳರಿಗೆ ಸಂಬಂಧಿಸಿದ ಶಾಸನಗಳ ಚರ್ಚೆಯನ್ನು ಇಲ್ಲಿ ಮಾಡಲಾಗಿದೆ.

**ಪಾಂಚಾಳರಿಗೆ ದಾನ ಕೊಟ್ಟ ಶಾಸನೋಕ್ತ ಉಲ್ಲೇಖಗಳು**

ಕ್ರಿ.ಶ.೧೦೭೪ರ ಶಾಸನದಲ್ಲಿ ಶಾಸನವನ್ನು ಮಾಡಿದ ಕಾಳೋಜನಿಗೆ ಶ್ರೀಮತ್ ತಿಳಿಪಳ್ಳಿಯ ಬೀನೋಜನ ಮಗಂ ಕಾಳೋಜ ಶಾಸನಮಂ ಮಾಡಿದ ಬೆಸಕ್ಕೆ ಸೋಮೇಶ್ವರ ಪಂಡಿತರ ವರ್ಷಂ ಪ್ರತಿ ಅವಲಕ್ಕಿಗೆ ಖಣ್ಣುಗೆ ಭತ್ತಮಂ ಕೊಟ್ಟರ ಎಂದು ಹೇಳಿದೆ. ಕ್ರಿಶ.೧೪೫೮ರ ಶಾಸನದಲ್ಲಿ ತಿಮ್ಮೋಜನ ಬರಹಮಾಗಲು ನಾಡ ಹರುವಿನಯಿಪ್ಪತ್ತು ಸಲಿಗೆ ಭತ್ತ[೮೦] ಎಂದು ಹೇಳಿದೆ. ಹೀಗೆ ಅವರ ಕೆಲಸಕ್ಕೆ ಪ್ರತಿಯಾಗಿ ಭತ್ತ ಇತ್ಯಾದಿಗಳನ್ನು ಕೊಟ್ಟಿದ್ದು ಕಂಡುಬರುತ್ತದೆ. ವಿಶ್ವಕರ್ಮರು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಊರಿನ ಸಮುದಾಯದವರು ವಿಶ್ವಕರ್ಮದವರಿಗೆ ಭೂಮಿಯನ್ನು ದಾನವಾಗಿ ನೀಡಿರುವುದುಂಟು.

ಕ್ರಿಶ.೧೦೨೫ರ ಶಾಸನದಲ್ಲಿ ಶಿಲ್ಪಿ ಬೀರೋಜಂಗೆ ಸುರೋಜಂಗೆ ರಾಯಗಟ್ಟಯಿಂ ಬಡಿಗ ಮತ್ತರು ೧೨ ಸಿಡೀಹುಣಸೆಯಿಂ ಪಡುವ ಮತ್ತರು ೧೨ ತೊಂಟಮತ್ತರು[೮೧] ಮತ್ತೊಂದು ಶಾಸನದಲ್ಲಿ ಆ ಸಂಧಿಯ ಸೋಮಜನ ಮಗ ಹರಿಯೋಜ ಸಾಂತೇಶ್ವರ ದೇವರ ದೇವಾಲ್ಯವಂ ಎರಡು ತಾಮಜಿ ಶಾಸನವುವಂಗೆಯ್ದು ಹರಿಯೋಜಂಗೆ ಸಾತ ಸಮುದ್ರದ ಕೆಳಗ ಗದ್ದಕೋಣಂ ಎಂದಿದೆ[೮೨]. ಪ್ರಾಚೀನ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಶಾಸನಗಳ ಬಗ್ಗೆ ಲಿಖಿತ ಆಧಾರಗಳು ಸಿಗುವುದು ಕ್ರಿಶ.೧೦೩೫ರ ಒಂದು ಶಾಸನದಲ್ಲಿ ಅಕ್ಕಸಾಲಿಯಾಯ ವಿಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ ಕ್ರಿ.ಶ.೧೦೭೭ ವೀರಗಲ್ಲೊಂದರಲ್ಲಿ ಆಳ ಎಂಬ ಅಕ್ಕಸಾಲಿ ಮತ್ತು ರಾಯ ಎಂಬ ಅಗಸ ಇಬ್ಬರು ಊರಿನವರಿಂದ ಆಯ ಪಡೆದುಕೊಂಡ ವಿವರ ಸಿಗುತ್ತದೆ.

ಕ್ರಿ.ಶ.೧೧೩೮ರ ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದ ಬೊಮ್ಮನಹಳ್ಳಿ ಶಾಸನದಲ್ಲಿ ಕಿರಿಯ ಬಸವಾಚಾರಿ ಸಾರ್ವಜನಿಕರಿಗಾಗಿ ಕೆರೆ ಹಾಗೂ ದೇವಾಲಯ ಕಟ್ಟಿಸಿ ತಾನೇ ತಪಸ್ವಿಯಾಗಿ ಧರ್ಮ ಪಾಲನೆ ಮಾಡಿದ ಉಲ್ಲೇಖವಿದೆ.[೮೪] ಅದೇ ರೀತಿ ಕ್ರಿ.ಶ.೧೧೮೬ರ ಶಾಸನದಲ್ಲಿ ಬಡಿಗ ಕಲ್ಲೋಜನು ತನಗೆ ಬರುವ ಕೊಟುಯಲ್ಲಿಯೇ ಹೊಸೂರು ಮೋರಕೇಶ್ವರ ನಿತ್ಯ ನೈವೇದ್ಯಕ್ಕಾಗಿ ಅಕ್ಕಿಯನ್ನು ಶ್ರೀ ಅಗಸ್ತ್ಯ ಮುನಿಗಳ ಕಾಲ್ತೊಳೆದು ದಾನ ಬಿಡುತ್ತಾನೆ.[೮೫]

ಕ್ರಿ.ಶ.೧೧೬೨ರ ಖಾನಾಪೂರ ತಾಲೂಕಿನ ಬೈಲೂರು ಶಾಸನದಲ್ಲಿ ಹೆಗ್ಗಡೆಯವರ ಮಲ್ಲಣ್ಣನಕ್ಕಸಾಲೆ ಸಿಂಗೋಜಂ ಕಮ್ಮಾ ದಾಸೋಜಂ ಮಡಿವಳ ಸೊಪ್ಪಯನಿಂತೆಂಟು ಹಿಟ್ಟು ಸಹಿತವಿದ್ದುದ ಎಂದು ಎಂಟ್ಟು ಹಿಟ್ಟಿನವರ ಉಲ್ಲೇಖ ಬರುತ್ತದೆ. ನಾಲ್ಕು ಜನರನ್ನೇ ಎಂಟು ಹಿಟ್ಟು ಎಂದು ಕರೆದಿರುವುದು ಗಮನಾರ್ಹ. ಹುಬ್ಬಳ್ಳಿ ತಾಲ್ಲೂಕಿನ ಮಂಟೂರ ಗ್ರಾಮಕ್ಕೆ ಸೇರಿದ ಹೊಯ್ಸಳ ವೀರಬಲ್ಲಾಳನ ತಾಮ್ರಪಟದಲ್ಲಿ (ಕ್ರಿ.ಶ.ಸು.೧೨೦೦) ಹಿಟ್ಟಿನ ತಳವಾರಿ ಮಾರನಾಯಕ, ಹಿಟ್ಟಕಾರ, ಬಡಗಿ, ಹಿಲೋಜ, ಹಿಟ್ಟಿನ ಕಮ್ಮಾರ ದೇವೋಜ ಮತ್ತು ಹಿಟ್ಟಿನ ಅಕ್ಕಸಾಲೆ ಪಾರಸೋಜ, ಇವರಿಗೆ ಭೂಮಿಯನ್ನು ಬಿಟ್ಟುಕೊಟ್ಟ ಉಲ್ಲೇಖ ಬರುತ್ತದೆ.[೮೬]

ಕ್ರಿ.ಶ.೧೧೬೩ರ ಶಾಸನವೊಂದರಲ್ಲಿ ಕಲುಕುಟಿಗ ಕೇತೋಜಂಗೆ ಸ್ಥಾನಿಕಂಪ್ಪತ್ತು ಕಮ್ಮಗದೆಯನುಂ ಬಳಿಯಂ ಸಲಿಸುವರು[೮೭]. ಕ್ರಿ.ಶ.೧೨೫೯ರ ವಿಜಾಪುರದ ಖ್ವಾಜಾಜಹಾನ್ ಮಸೀದೆ ೨ನೆಯ ಕಂಬದಲ್ಲಿ ದೊರೆತ ಶಾಸನದಲ್ಲಿ ಸ್ಥಾನಾಚಾರ್ಯ ಸರ್ವಜ್ಞ, ರಾಶಿ ದೇವನಿಂದ ಸ್ವಯಂಭೂ ಶಿವಲಿಂಗ ದೇವಾಲಯಕ್ಕಾಗಿ ಬಡಿಗಿ ಕಾಮೋಜನ ಮಗ ಮಲ್ಲನಿಗೆ ಭೂದಾನ ನೀಡಿದ ವಿವರವಿದೆ.[೮೮]

ಕ್ರಿ.ಶ.೧೨೫೯–೬೦ ಮಳವಳ್ಳಿ ತಾಲ್ಲೂಕು ಮಾರೆಹಳ್ಳಿ ಗ್ರಾಮದ ಶಾಸನದಲ್ಲಿ ಸಿದಾರ್ಥಿ ಸಂವತ್ಸರದ... ಬ ೫ ... ಲು ಶ್ರೀ ನಾರಸಿಂಹದೇವರು ಅಕಸಾಲೆ ಕಾಳಜೀಗೆ ಕೊಟ್ಟ ಕೊಡುಗೆ ನಕಾ ಬಂಗಾರದ ಕೆಲಸ ವಿಸತಾಯನೊ ಮಾಡುವುದಕೆ ಮಾಸ ಹೇಳಿದಲು ಕೊಡುಗೆ ಗದ್ದೆ ಹಲಕೊಳಗವನೂ ಅನುಭವಿಸುವನು[೮೯] ಅಂದರೆ ಅಕಸಾಲಿ ಕಾಳಜಿ ಎನ್ನುವನು ಹೊಯ್ಸಳ ನರಸಿಂಹ ರಾಜನಿಗೆ ಬಂಗಾರದ ಕೆಲಸ ಮಾಡಿಕೊಟ್ಟಿದ್ದಕ್ಕೆ ಗದ್ದೆಯ ಹೊಲವನ್ನು ಅನುಭವಿಸಲು ಬಿಟ್ಟುಕೊಡುತ್ತಾನೆ.

ಕ್ರಿ.ಶ.೧೩೧೨ರಲ್ಲಿ ಕೃಷ್ಣರಾಜಪೇಟೆ ತಾಲೂಕು ಬೈರಾಪುರದ ಶಾಸನದಲ್ಲಿ ಪಾಂಚಾಳರಿಗೆ ಆಯಿ ಘಂಡುಗ ಗದ್ದೆಯನ್ನು ಬೈರಾಪುರದ ಮಹಾಜನಂಗಳು ಕೊಟ್ಟಿರುವುದರ ಉಲ್ಲೇಖವಿದೆ.[೯೦] ಕ್ರಿ.ಶ.೧೪೦೩ರ ವೀರಗಲ್ಲಿನ ಪಾಠದಿಂದ ತಿಳಿಯುವ ಶಾಸನದಲ್ಲಿ ದೇವಪ್ಪ ಎಂಬುವನ ವೀರಗಲ್ಲನ್ನು ಮಾಡುವುದಕ್ಕೆ 'ಮಾರೋಜ'ನೆಂಬ ಶಿಲ್ಪಿಗೆ ದೊಡ್ಡಪ್ಪ ಮಾಯಣ್ಣ ಕರಿಯಣ್ಣಂ ಮಸಣ್ಣನವರು ಕೂಡಿಗೆಯಾಗಿ ಜಮೀನನ್ನು ಬಿಟ್ಟ ವಿಷಯ ತಿಳಿಯುತ್ತದೆ.[೯೧]

ಕ್ರಿ.ಶ.೧೪೫೯ರ ಕನಕಪುರ ತಾಲ್ಲೂಕಿನ ಕಬ್ಬಾಳು ಗ್ರಾಮದಲ್ಲಿರುವ ವೀರಗಲ್ಲಿನ ಮೇಲಿರುವ ಒಂದು ಶಾಸನದಲ್ಲಿ ವಿಶ್ವಕರ್ಮ ಸಮುದಾಯಕ್ಕೆ ದಾನ ನೀಡಿದ ವಿವರಗಳಿವೆ. ಸಮಸ್ತ ವೀರಪಾಂಚಾಳರು ಸೇರಿಕೊಂಡು ಪರುಗಳ ಮಲ್ಲೋಜ ಬಯರೋಜರಿಗೆ ಈ ದಾನವನ್ನು ಬಿಟ್ಟಿದ್ದಾರೆ. ಇನ್ನೊಂದು

ವಿಶೇಷವೆಂದರೆ ಈ ಉದ್ಯೋಗಸ್ಥರ ಕುಲದೇವಿಯಾದ ಕಾಳಿಕಾದೇವಿಯ ಪ್ರಸ್ತಾಪ ಶಾಸನದ ಎರಡು ಹಾಗೂ ಇಪ್ಪತ್ಮೂರನೆಯ ಸಾಲಿನಲ್ಲಿ ಬಂದಿರುವುದು.

೧೩. ಸಮಸ್ತ ನಗರ ವೀರಪಾಂಚಾಳ

೧೪. ಪೆರುಗಳ ಮಲ್ಲೋಜ ಬಯಿರೋಜನವರಿಗೆ ಕೊಟ್ಟಸಾ

೧೫. ಸನದ ಕ್ರಮವಂತೆಂದರೆ ಸಂವತೆರಹಳ್ಳಿ ಸರ

೧೬. ಮಹಾಳಿ ಹಿರಿಯರ ಬಡಿಗೆ ಕಮ್ಮರಿಕೆ ಅಕ್ಕಸಾಲಿಕೆ

೧೭. ಪಾಂಚಾಳ ಕೊಲವರ್ತನೆ ಬೇಡಿಗೆಯೇನುಳವನು ಸರ್ವಮಾ

೧೮. ನ್ಯವಾಗಿ ಕೊಟೆಲು.[೨]

ಕ್ರಿ.ಶ.೧೪೩೧ರ ಮಾಲೂರು ತಾಲೂಕಿನ ತೇಕಲ್ಲು ಶಾಸನದಲ್ಲಿ ಮಹಾ ಮಂಡಳೇಶ್ವರನಾದ ಸಾಳುವ ಗೋಪರಾಜವೊಡೆಯರ ಪ್ರಧಾನಿಯಾದ ಸಿಂಗರಾಜನು ತೇಕಲ್ಲಿನ ವರದರಾಜ ದೇವರ ಮುಖ ಮಂಟಪದ ಗೋಪುರಕ್ಕೆ ಬಾಗಿಲು ಮಾಡಿದ ಬಡಿಗ ಬೇಟೋಜದೇವನಿಗೆ ಕಬ್ಬಿಣದ ಕೆಲಸ ಮಾಡಿದ ಕಮ್ಮಾರ ಅಂಗೋಜನಿ ಭೂದಾನ ನೀಡುತ್ತಾನೆ. ಅಷ್ಟೇ ಅಲ್ಲದೆ, ಕುದುರೆ ಸತ್ತಿಗೆಗಳನ್ನು ಲಾಂಛನವಾಗಿ ನೀಡಿದ ವಿವರಗಳು ದೊರೆಯುತ್ತವೆ. ಇದರಿಂದ ವಿಧಿತವಾಗುವುದೇನೆಂದರೆ ಕಮ್ಮಾರ ಹಾಗೂ ಬಡಗಿ ವೃತ್ತಿಗಳು ಕೇವಲ ಕೂಲಿ ವೃತ್ತಿಗಳಾಗಿರಲಿಲ್ಲ ಎನ್ನುವುದು ತಿಳಿಯುತ್ತದೆ.[೩]

೧೪-೧೫ನೇ ಶತಮಾನಕ್ಕೆ ಸೇರಿರಬಹುದಾದ ಒಂದು ಶಾಸನದಲ್ಲಿ ಮಳಿಯಪ್ಪನ ಮಗ ಮೋನಪ್ಪಯ್ಯನಿಗೆ ಕರೆಕಟ್ಟಿದ್ದಕ್ಕೆ ಮಾನ್ಯ ನೀಡಿದ ಉಲ್ಲೇಖವಿದೆ.

ಶ್ರೀಗುರು ಮಾಳಿಗ(ಪ್ಪ)ನ

ಮಗ ಮೋನಪತ್ಯೆ(ಯ)

ನವರಿಗೆ ಕರೆಕಟಿ

ದಕ್ಕ ಕೊಟ್ಟ(ಮಾನ್ಯ)[೪]

ಕ್ರಿ.ಶ. ೧೪೮೦ರ ಶಾಸನದಲ್ಲಿ ಬಡಗಿ ಲಿಂಗೋಜನು ಜಗಳೂರು ತಾಲ್ಲೂಕು ನಿಬಗೋರಿನಲ್ಲಿ ಆಂಜನೇಯ ಗುಡಿಯ ಕೆಲಸ ಮಾಡುತ್ತಾನೆ. ಇದಕ್ಕಾಗಿ ಗೌಡನು ಇವನಿಗೆ ಅರವತ್ತು ಒಕ್ಕಲು ಮಾನ್ಯವನ್ನು ಕೊಡುತ್ತಾನೆ.[೫]

**ಪಾಂಚಾಳರು ದೇವಸ್ಥಾನಗಳಿಗೆ ದಾನ ಕೊಟ್ಟ ಉಲ್ಲೇಖಗಳು**

ಕ್ರಿ.ಶ.೧೧೭೫ರ ಶಾಸನದಲ್ಲಿ ಶಿಲ್ಪಿ ಬೀರೋಜಂಗೆ ಸುರೋಜಂಗೆ ರಾಯಗಟ್ಟಿಯಿಂ ಬಡಿಗ ಮತ್ತರು ೧೨ ಸಿಡೀ ಹುಣಸೆಯಿಂ ಪಡುವ ಮತ್ತರು ೧೨ ತೊಂಟ ಮತ್ತರು ೨ ಮತ್ತೊಂದು ಶಾಸನದಲ್ಲಿ ಆ ಸಂದಿಯ ಸೋಮಜನ ಮಗ ಹರಿಯೋಜ ಸತೇಶ್ವರ ದೇವರ ದೇವಾಲ್ಯವಂ ಎರಡು ತಾಯಿಜ ಶಾಸನವು ವಂಗೆಯ್ದು ಹರಿಯೋಜಂಗೆ ಸಾತ ಸಮುದ್ರದ ಕೆಳಗೆ ಗದ್ದೆಕೋ ೧೦ ಎಂದಿದೆ.[೬]

ಕ್ರಿ.ಶ.೧೧೧೬ರ ಒಂದು ಶಾಸನದಲ್ಲಿ ಶಿಲ್ಪಿಗಳ ಒಂದು ಸಂಘವು 'ಕುಲಾನ್ವಯಕೊತ್ತಳ' ಕಮ್ಮಟೇಶ್ವರ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟಂತೆ ಹೇಳಿದೆ. ಶಿಲ್ಪಿಗಳ ಕುಲಕ್ಕೆ ಬಂದ ಕಳಂಕವನ್ನು ಹೋಗಲಾಡಿಸುವುದಕ್ಕಾಗಿ ಬಾವಣ ಮತ್ತು ರಾವಣ ಎಂಬ ಇಬ್ಬರು ಶಿಲ್ಪಕುಲದ ಸಹೋದರರು ಕುಸುಮೇಶ್ವರ ದೇವಸ್ಥಾನವನ್ನು ಕಟ್ಟುವುದಕ್ಕೆ ತಾವೇ ಹಣವನ್ನು ವ್ಯಯಿಸಿ ಕಟ್ಟಿಸಿದ ವಿವರವಿದೆ.[೯೬]

ಕ್ರಿ.ಶ.೧೧೧೮ ಶಾಸನವೊಂದರಲ್ಲಿ ಭರತೇಶ್ವರ ದೇವರ ಕಮಾಪೆರೆಯ ದಶವನಯ ಗಂಗಯನ ಕೇಲೋಜನುಂ ಗಂಗನುಂ ದೇವರ್ಗಿಲಂ ಕರ್ಚಿಕೊಟ್ಟರು, ಎಂಬ ಉಲ್ಲೇಖ ದೊರೆಯುತ್ತದೆ. ಇಲ್ಲಿ ಕಮ್ಮಾರಿಕೆಯಿಂದ ದೊರೆಯುವ ಆದಾಯದಲ್ಲಿ ೧/೧೦ ಭಾಗದಂತೆ ದೇವರಿಗೆ ಅರ್ಪಿಸಿದ ವಿವರ ದೊರೆಯುತ್ತದೆ.[೯೮]

ಕ್ರಿ.ಶ.೧೧೩೮ರ ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದ ಬೊಮ್ಮನಹಳ್ಳಿ ಶಾಸನದಲ್ಲಿ ಕಿರಿಯ ಬಸವಾಚಾರಿ ಸಾರ್ವಜನಿಕರಿಗಾಗಿ ಕೆರೆ ಹಾಗೂ ದೇವಾಲಯ ಕಟ್ಟಿಸಿ ತಾನೇ ತಪಸ್ವಿಯಾಗಿ ಧರ್ಮಪಾಲನೆ ಮಾಡಿದ ಉಲ್ಲೇಖವಿದೆ.[೯೯] ಅದೇ ರೀತಿ ಕ್ರಿ.ಶ.೧೧೮೯ರ ಶಾಸನದಲ್ಲಿ ಬಡಿಗ ಕಲ್ಲೋಜನು ತನಗೆ ಬರುವ ಕೂಟುಯಲ್ಲಿಯೇ ಹೊಸುರು ಮೋರಕೇಶ್ವರ ನಿತ್ಯ ನೈವೇದ್ಯಕ್ಕಾಗಿ ಅಕ್ಕಿಯನ್ನು ಶ್ರೀ ಅಗಸ್ತ್ಯ ಮುನಿಗಳ ಕಾಲ್ತೊಳೆದು ದಾನ ಬಿಡುತ್ತಾರೆ. ಇದು ಪುತ್ರ ಪೌತ್ರಾದಿಗಳೆಲ್ಲರೂ ಮುಂದುವರಿಸಿಕೊಂಡು ಬರಬೇಕೆಂದು ಹೇಳಿದೆ.[೧೦೦]

ಕ್ರಿ.ಶ.೧೧೮೯ರ ಗದಗ ತಾಲೂಕಿನ ಹೊಂಬಳ ಗ್ರಾಮದ ಶಾಸನದಲ್ಲಿ ಕಂಚಗಾರ ದೇವರ ಉಪಕರಣಗಳಲ್ಲೆವೂಂ ಕೂಲಿಯಂ ಕೊಳ್ಳದೆ ಮಾಡಿ ಕೊಡುವಂತಾಗಿ ಬಿಟ್ಟರು ಎಂದು ಹೇಳಿದೆ. ದೇವರ ಉಪಕರಣ ಮುಂತಾದ ಕೆಲಸಗಳು ತಮ್ಮ ಸೇವೆ ಎಂದುಕೊಂಡು ಅವುಗಳಿಗೆ ಪ್ರತಿಫಲವನ್ನು ತೆಗೆದುಕೊಳ್ಳದೆ ಕೆಲಸ ಮಾಡಿಕೊಡುತ್ತಿದ್ದರು.[೧೦೧]

ಕ್ರಿ.ಶ.೧೨೩೧ರ ಕಡೂರು ತಾಲೂಕಿನ ಸೋಮನಹಳ್ಳಿಯ ಶಾಸನವು ಅಕ್ಕಸಾಲೆ ಮಾರೋಜನು ತನ್ನ ಅಕ್ಕಸಾಲೆ ಹಿಟ್ಟಿನ ಭೂಮಿಯೊಳಗೆ ಬ್ರಹ್ಮೇಶ್ವರ ದೇವರ ಅಂಗಭೋಗಕ್ಕೆ ಬಿಟ್ಟದತ್ತಿ ಬೆದ್ದಲು ಕಂಬ ೫೫ ಎಂದು ಹೇಳಲಾಗಿದೆ.[೧೦೨]

ಕ್ರಿಶ.೧೩೭೨ರ ಗುಂಡ್ಲುಪೇಟೆ ಗ್ರಾಮದ ಶಾಸನವೊಂದರಲ್ಲಿ ಸಮಸ್ತ ವೀರಪಾಂಚಾಳರು ಸರ್ವ ಏಕಮತ್ಯವಾಗಿ ವಿಜಯಪುರದ ದೇವರಾದ ಕೇತವ್ವಯಗೆ ಪ್ರತಿಗ್ರಾಮದಲ್ಲಿರುವ ವೀರಪಾಂಚಾಳರ ವರ್ಷಂ ಪ್ರತಿ ೧ ಅಕ್ಕಸಾಲೆಗರು, ೧ ಕಂಚುಗಾರರು ಅಹಳಕ್ಕೆ ಪ್ರತಿ ವರ್ಷವು ದಾನವಾಗಿ ಕೊಡುತ್ತಿದ್ದರು ಎಂಬ ಉಲ್ಲೇಖ ದೊರೆಯುತ್ತದೆ.[೧೦೩]

ಕ್ರಿ.ಶ.೧೪೩೦ರ ಬಂಗಾರಪೇಟೆ ತಾಲ್ಲೂಕಿನ ಮರಗಲ್ಲು ಶಾಸನದಲ್ಲಿ ಮರಗಲ್ಲು ಗ್ರಾಮದ ಹಲವು ಪಾಂಚಾಳರು ಸೇರಿ ಸಂತೆಯನ್ನು ಕಟ್ಟಿಸಿ ಭೂಮಿ ಹಾಗೂ ತೆರಿಗೆಯನ್ನು ಮಾನ್ಯವಾಗಿ ಬಿಟ್ಟ ಉಲ್ಲೇಖಗಳು ದೊರೆಯುತ್ತವೆ.

೧೦ ವ ಮರಗಲು ಆಯಿವತ್ತಾರು ದೇಶದಸಾಲಿ

೧೧. ಮೂಲೆ ಸಮಸ್ತ ಹಲರು ಪಂಚಾಳ ಸಹಿತವಾಗಿಕೂ

೧೨. ಡಿ. ಸಂತೆಯ ಕಟ್ಟಿಸಿದ ಸಂಬಂಧ ಆ ಸಂತೆಯ ಪ

೧೩. ಟ್ಟಣಸ್ವಾಮಿ ಚಿಯಿಯ ಬಸ್ಸಿಪೆಟ್ಟಿಗೆ ಮಾಂನ್ಯವಾಗಿ

೨೦. ಕಬ್ಬಿಣದ ಕೆಲಸ ಮರಕೆಲಸ ಅಕ್ಕಸಾಲಿ

೨೧. ಕಬ್ಬಿಣದ ನಾವಿಂದ ಹೊಲೆಯನು ಯಿಂ

೨೨. ತಿವರು ಸರ್ವ ಮಾನ್ಯ ಸಲಿಸುವರು.[೧೦೪]

ಕ್ರಿ.ಶ.೧೮೫೯ರ ಇತ್ತೀಚೆಗೆ ಪಾಂಡವಪುರ ಕನ್ನಂಬಾಡಿ ಗ್ರಾಮದಲ್ಲಿರುವ ಮಹಾಲಕ್ಷ್ಮಿ ಗುಡಿಗೆ ಸೇರಿದ ರಥವನ್ನು "ವರ್ಮಲಿಂಗಾಚಾರಿ ರಚನೆ ಮಾಡಿದ್ದಾನೆ. ಶಾಸನವು ಧರ್ಮಲಿಂಗಾಚಾರಿ ನಿರ್ಮಿತ" ಎಂದು ಮಾತ್ರ ಹೇಳದೆ ಬೊಗಗೌಡನ ಹೆಂಡತಿ ಮಹಾಲಕ್ಷ್ಮಿ ಶ್ರೀ ಮಹಾಕಾಳಿ ಅಮ್ಮನವರ ಸೇವಾರ್ಥ ಎಂಬುವುದಾಗಿ ಮಾಡಿಸಿದ್ದಾರೆ.[೧೦೫]

ಕ್ರಿ.ಶ.೧೮೬೪ರ ಶ್ರೀರಂಗಪಟ್ಟಣ ಗ್ರಾಮದ ಶಾಸನದಲ್ಲಿ ಲಕ್ಕನಾಚಾರ್ಯನು 'ಸುಪರ್ನಸ' ಗೋತ್ರ ಕಾತ್ಯಾಯನ ಸೂತ್ರ ಪ್ರಣಮಶ್ಯಾಖ ಎಂದು ತನ್ನ ಗೋತ್ರದ ಬಗ್ಗೆ ಹೇಳಿಕೊಂಡಿರುವುದನ್ನು ಕಾಣಬಹುದು. ಶ್ರೀ ಮತ್ಕಾಳಿಕಾಂಬ ಕಮತೇಶ್ವರ ಸಂನಿಧಿಗೆ ತಾನು ಮಾಡಿದ ಸೇವೆ ಎಂದು ಹೇಳಿಕೊಂಡಿದ್ದಾನೆ.[೧೦೬]

ಕ್ರಿ.ಶ.೧೬೧೬ ಮೂಡಗೆರೆ ತಾಲೂಕು ಗೋಣಿಬೀಡು ಗ್ರಾಮದ ಶಾಸನದಲ್ಲಿ ಬಿಡಕಾಳಾಂಮನ ಸುನಾರರು ಕಾಳಪನಾಯಕರಿಗೆ ಧರ್ಮವಾಗಲಿಯಂದು ಗೋಣೀಬೀಡು ಪಾಂಚಾಳದವರು. ಯಿ ಮಾಘ ಶುದ್ಧಲು ವೀರ ಸಮಯದ ಸುನಾಲುವಿನ ಕನ್ನಡ ವೀರಪಾಂಚಾಳದವರಲು ಕೊಡಿಕೊಡದವರು ತಮ್ಮ ಹೆಂಡರ ಪರರಿಗೆ ಕೊಟಹಾಗೆ ಕಾಳಪನಾಯಕರ ಸಾಸನವ ಸಂಣಲಿಂಗಣನು ಬರೆದ ಕುಲದೊಳಗೆ ಮದುವಲಿ ಹೆಂಣು ಗಂಡಿನಲಿ ಬಂದ ಹಣವನು ದೇವರಿಗೆ ಕೊಡಲುಳ್ಳವರು ಕೊಡದೆಯಿದರ ಮಕ್ಕಳು[೧೦೭] ಎಂದಿದೆ.

ಕ್ರಿ.ಶ.೧೨೧೫ರ ಗದಗ ತಾಲೂಕಿನ ನಾಗಾವಿಯ ಯಾದವ ಸಿಂಘಣನ ಕಾಲದ ಶಾಸನದಲ್ಲಿ ಅಲ್ಲಿಯ ಮಹಾಬಳೇಶ್ವರ ದೇವರಿಗೆ ಕಮ್ಮರ ಬೋಮ್ಮಜನು ತನ್ನ ಕಮತದ ಕೆಲಸದಿಂದ ಬಂದ ಆದಾಯವನ್ನು ದಾನವಾಗಿ ಬೀಡುತ್ತಾನೆ. ಇದನ್ನು ಊರಗೌಡ ಮತ್ತು ಸಮಸ್ತ ಪ್ರಜೆಗಳು ಕಾಪಾಡಬೇಕೆಂದು ಹೇಳಿದೆ.[೧೦೮]

**ಪಾಂಚಾಳರ ಹೋರಾಟದ ಶಾಸನಗಳು**

ಕ್ರಿ.ಶ.೪೪೬ರ ಗಂಗ ಅರಸ ಅವನೀತನಿಂದ ಕ್ರಿ.ಶ.೯೦೪ರ ಅದೆ ಗಂಗ ಅರಸ ಇಮ್ಮಡಿ ಎರಿಯಂಗನವರಿಗೆ ಸತತವಾಗಿ ೪೩೮ ವರ್ಷಗಳ ಅವಧಿಯವರೆಗೆ ರಚನೆಯಾದ ೧೨ ತಾಮ್ರ ಶಾಸನಗಳು ನಡುವೆ ಒಂದು ಶಿಲಾಶಾಸನ ವಿಶ್ವಕರ್ಮ ಮತ್ತು ವಿಶ್ವಕರ್ಮಾಚಾರ್ಯರ ಹೆಸರಿನಲ್ಲಿ

ರಚನೆಯಾಗಿವೆ. ಆದರೆ ಇಷ್ಟು ವರ್ಷಗಳ ಕಾಲ ಒಬ್ಬನೇ ವ್ಯಕ್ತಿ ಜೀವಿಸಿರಲಾರ. ವಿಶ್ವಕರ್ಮಚಾರ್ಯ ಎಂಬುದು ವ್ಯಕ್ತಿನಾಮವಲ್ಲ. ಅದು ಒಂದು ಅಭಿಮತವಾಗಿ ಈ ಅಧಿಕಾರವನ್ನು ಸಹಜವಾಗಿಯೇ ಅಕ್ಕಸಾಲಿಕೆ ಬಡಗಿತನ ಕಂಚುಗಾರಿಕೆಯನ್ನು ಮಾಡುವ ವಿಶ್ವಕರ್ಮ ಮತೀಯರಿಂದ ನೇಮಕ ಮಾಡಲಾಗುತ್ತಿತ್ತು. ವಿಶ್ವಕರ್ಮ ಒಂದು ಮನೆತನವು ಆನುವಂಶಿಕವಾಗಿ ಈ ಒಂದು ಜವಾಬ್ದಾರಿಯನ್ನು ನಿರ್ವಹಿಸಿಕೊಂಡು ಬರುತ್ತಿತ್ತು. ಏಕೆಂದರೆ ವಿಜಯನಗರದ ಅರಸರ ಅಧಿಪತ್ಯದಲ್ಲಿ ಹೀಗೆಯೇ ಬಡಗಿ, ಅರ್ಥದ ತ್ವಷ್ಟ ಎಂಬ ಪದನಾಮ ವೀರಣಾಚಾರ್ಯ ಎಂಬುವನ ಮನೆತನವು ಆನುವಂಶಿಕವಾಗಿ ಕಾರ್ಯವನ್ನು ನಿರ್ವಹಿಸುತ್ತಿತ್ತು.[೧೦೯]

ಕ್ರಿ.ಶ.೧೧೩೮ರ ಧಾರವಾಡದ ಜಿಲ್ಲೆಯ ಮತ್ತೂರ ಗ್ರಾಮದ ಶಾಸನದಲ್ಲಿ ಕಮ್ಮನವಳ್ಳಿಯ ಜಕ್ಕಿ ಸೆಟ್ಟಿಯು ಮತ್ತೂರಿನ ಮೇಲೆ ದಾಳಿ ಮಾಡಿ ಹೆಣ್ಣುಮಕ್ಕಳನ್ನು ಅಪಹರಿಸಬೇಕೆಂದು ಕೊಂಡಾಗ ಆ ಗ್ರಾಮದ ಕಮ್ಮಾರ ಮಾಚನು ಅವನೊಂದಿಗೆ ಹೋರಾಟವನ್ನು ಮಾಡಿ ಅವನನ್ನು ಕೊಂದು ಆ ಹೋರಾಟದಲ್ಲಿ ಮರಣ ಹೊಂದಿದನೆಂದು ಹೇಳಿದ ಗೊಟ್ಟಿಗೊಂಡ ಗ್ರಾಮದ ಜಕ್ಕಿಗೌಡ. ಕಂಕಗೌಡ ಮತ್ತು ಅಲ್ಲಿಯ ಸಮಸ್ತ ಪ್ರಜೆಗಳು ಸೇರಿ ಮಾಚನ ಅಣ್ಣನಿಗೆ ೨೨ ಕಮ್ಮ ಭೂಮಿ ಮತ್ತು ೫೦ ಕಮ್ಮ ಹಕ್ಕಲನ್ನು ದಾನವಾಗಿ ನೀಡಿದ್ದು ತಿಳಿಯುತ್ತದೆ.[೧೧೦]

ಕ್ರಿ.ಶ.೧೧೫೨ರ ಧಾರವಾಡ ಜಿಲ್ಲೆಯ ಮತ್ತೊಂದು ಶಾಸನದಲ್ಲಿ ಗಮ್ಮಾರಗಳಯಾನೆಂಬ ಮಹಾಯೋಧನು ಯುದ್ಧದಲ್ಲಿ ಹೋರಾಡಿ ಮಡಿದ ವಿಷಯ ಬರುತ್ತದೆ.[೧೧೧] ಅಂದರೆ ಸ್ವರ್ಗವೇರಿದನೆಂದು ಹೇಳಿದೆ. ಇದರಿಂದ ಪಾಂಚಾಳರು ತಮ್ಮ ವೃತ್ತಿಯೊಂದಿಗೆ ಸಾಹಸ ಕಾರ್ಯದಲ್ಲಿಯೂ ಪಾಲ್ಗೊಂಡಿದ್ದರು ಎಂಬುದು ತಿಳಿಯುತ್ತದೆ.

**ಪಾಂಚಾಳರು ಬರೆದ ಶಾಸನಗಳು**

ಕ್ರಿ.ಶ.೭೭೬-೭೭ರ ನಾಗಮಂಗಲ ತಾಲೂಕಿನ ದೇವರಹಳ್ಳಿ ಗ್ರಾಮದ ಶಾಸನದಲ್ಲಿ ಸರ್ವ್ವಕಲಾಧಾರ ಭೂತಚಿತ್ರ ಕಲಾಭಿಜ್ಞೇನ ವಿಶ್ವಕರ್ಮಾಚಾರ್ಯ್ಯೇಣೇದಂ ಶಾಸನಮ್ ಲಿಖಿತಮ್[೧೧೨] ಎಂದಿದೆ. ಈ ಬಿರುದನ್ನು ಪಡೆದಿರುವ ವಿಶ್ವಕರ್ಮನು ಶಾಸನವನ್ನು ಬರೆದಿದ್ದಾನೆ ಎಂದು ಉಲ್ಲೇಖಿಸುತ್ತದೆ.

ಕ್ರಿ.ಶ.೧೧೧೬ ದೇವಸ್ಥಾನವನ್ನು ನಿರ್ಮಿಸಿದ ಹೊಯ್ಸಳಾಚಾರಿ ಎಂದು ಒಂದು ಶಾಸನವು ಹೇಳುತ್ತದೆ. ಇವರ ಜಾತಿಯ ರಕ್ತದಲ್ಲೇ ಕಲೆಯ ಬೀಜಗಳು ಹುದುಗಿರುವಂತೆ ಕಾಣುತ್ತದೆ. ವಾಸ್ತುವಿದ್ಯೆ ಶಿಲ್ಪ, ಲೋಹವಿಗ್ರಹಗಳ, ಕೆತ್ತನೆ ಪತ್ರಚ್ಛೇದಾದಿ ಕುಶಲಕಲೆಗಳಲ್ಲಿ ಇವರು ನಿಷ್ಣಾತರಾಗಿದ್ದರು. ಒಂದು ಶಾಸನದಲ್ಲಂತೂ ಚಿತ್ರಕಲೆಯೇ ಎಲ್ಲ ಕಲೆಗೂ ಮೂಲಭೂತವಾದ ಕಲೆ ಎಂದು ಹೇಳಿದೆ. 'ಸರ್ವಕಲಾಧಾರಭೂತ ಚಿತ್ರಕಲಾಭಿಜ್ಞೆಯ ವಿಶ್ವಕರ್ಮಾಚಾರ್ಯೇಣ...' ಇವರು ತಮ್ಮನ್ನು ಸರಸ್ವತಿ ಗಣದಾಸಿಗಳೆಂದು ಕರೆದುಕೊಳ್ಳುತ್ತಾರೆ. 'ಮುವರಗಂಡ ಬಿರುದರೂವಾರಿಗಿರಿ ವಜ್ರದಂಡ ರೂವಾರಿ ಕಾಳಿದಾಸಿಗಯ್ದ ಮಕರ ತೋರಣ' ಬಿಳಿಗ್ರಾಮೆಯ ರೂವಾರಿ ದಾಸೋಜ ಬಿರುದರ ಬಿಡಿದಗೊಂದಳ ಬಿಡಿವ ಸರಸ್ವತಿ ಗಣದಾಸಿ ಮಚ್ಚರಿಪರುವಾಬಿದಿಸ್ವ ರಭೆ ಬೇರುಂಡ ಇದನ್ನು ನೋಡಿದರೆ ಅವರವರಲ್ಲಿಯೇ

ತೀವ್ರವಾದ ಸ್ಪರ್ಧೆಯಿದ್ದಿತೆಂದು ಉಹಿಸಬಹುದು. ಈ ಸವಾಲು ಹಾಕುವ ಮನೋಧರ್ಮವು ಕಲಾವಿದರ ರಕ್ತಗತವಾದ ಸ್ವಭಾವ.[೧೧೩]

ಕ್ರಿ.ಶ.೧೧೪೮ರಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕ ಮಲ್ಲನ ಆಳ್ವಿಕೆಗೆ ಒಳಪಟ್ಟಿದೆ. ಶಿರಸಂಗಿ ಶಾಸನವು ಪ್ರಾರಂಭದಲ್ಲಿ ವಿಶ್ವಕರ್ಮನ ಸ್ತುತಿಯಿದೆ 'ನಗರ್ದ್ದ ಮಹಾಬ್ಮತಿಗಳೊಳಂ ನಗರ್ದ್ದ ಮಹಾಪಾಸುಪತದೊಳಂ ಸ್ತೋತ್ರಿಯೊರೋಳು ನೆಗರ್ದ್ದುದ ಗಣಿತಮನೆಲ್ಕೆ ನಗರ್ದ್ದಪ ಕಾಳಾಮುಖಂ ಸುಧರ್ಮ್ಯ ಪ್ರಮುಖಂ' ಪ್ರಸಿದ್ಧವಾದ ಮಹಾಪಶುಪದಲ್ಲಿ ವೇದಾಭ್ಯಾಸ ಮಾಡಿದ ಬ್ರಾಹ್ಮಣರಲ್ಲಿ ಅಸಾಮಾನ್ಯರಾಗಿ ಪ್ರಸಿದ್ಧವಾದ ಕಾಳಾಮುಖರು ಶ್ರೇಷ್ಠ ಧರ್ಮಗಳಲ್ಲಿ ಪ್ರಮುಖವಾಗಿರುತ್ತಾರೆ ಎಂದು ಕಾಳಾಮುಖ ಪಂಥವು ಅಂದರೆ ಪಾಂಚಾಳ ಧರ್ಮವು ಎಲ್ಲ ಪಂಥಗಳಿಗಿಂತಲೂ ಶ್ರೇಷ್ಠವಾದುದೆಂದು ಹೇಳಲಾಗಿದೆ. ವಿಶ್ವಬ್ರಾಹ್ಮಣ ಧರ್ಮವು ಜಗತ್ತಿನಲ್ಲಿ ಎಲ್ಲ ಧರ್ಮಗಳಿಗಿಂತ ಶ್ರೇಷ್ಠವಾದುದೆಂದು ತಿಳಿಸುತ್ತದೆ ಮತ್ತು ಅವರಿಗೆ ಅಲಭ್ಯವಾದ ಅಪರೂಪದ ದಾಖಲೆಯನ್ನು ಒದಗಿಸುತ್ತದೆ. ಈ ಶಾಸನವನ್ನು ರೂವಾರಿ ಚಕ್ರವರ್ತಿ ಚಂಡೋಜನ ಮೊಮ್ಮಗ ಸಾತೋಜನ ಕೆತ್ತಿದನೆಂದು ಹೇಳಿ ಮುಕ್ತಾಯಗೊಳ್ಳುತ್ತದೆ.[೧೧೪]

ಕ್ರಿ.ಶ.೧೨೯೨ರ ವೀರಗಲ್ಲಿನ ಪಾಠದಿಂದ ವೀರಗಲ್ಲಿನ 'ಶಿಲಾಕ್ಷರಗಳನ್ನು ಬರೆದಾತನು ಗಾವಣದ ಸೇನ ಬೋವನೆಂದು ವೀರಗಲ್ಲನ್ನು ಮಾಡಿದ ಶಿಲ್ಪಿ ಬೀರೋಜನೆಂದು ತಿಳಿದುಬರುತ್ತದೆ. ಬೇಲೂರು ತಾಲ್ಲೂಕಿನ ಅಗ್ಗಡಲು ಗ್ರಾಮದ ವೀರಗಲ್ಲನ್ನು 'ಮಾಲೋಜ' ಎಂಬುವನು ಮಾಡಿದ್ದರೆ ಅದರ ಮೇಲಿನ ಶಾಸನದ ಪಾಠವನ್ನು 'ಕುಂದೂರ ರಾಯಣ್ಣನು ಬರೆದನೆಂದು' ತಿಳಿಯುತ್ತದೆ.[೧೧೫]

ಕ್ರಿ.ಶ.೧೩೮೧ರ ವೀರಗಲ್ಲಿನ ಶಿಲ್ಪವನ್ನು ಬೆಳೆತೂರಮಾಲಿಯೋಜನು, ಮಾಡಿದ್ದರೆ ಅದಕ್ಕೆ ಬರಹವನ್ನು ಪಾಂಚಾಳ ಬಯಿರೋಜ ಎಂಬುವನು ಬರೆದಿದ್ದಾರೆ ಎಂದು ತಿಳಿದುಬರುತ್ತದೆ.[೧೧೬]

ಕ್ರಿ.ಶ.೧೫೧೧ರಲ್ಲಿ ಗೌರಯ್ಯ ಎನ್ನುವವನು ದೇವಸ್ಥಾನವನ್ನು ಕಟ್ಟಿದ ಮತ್ತೊಬ್ಬ ಬಡಗಿ. ಇವನ ಊರು ಸೊಂಡೇಕೆರೆ. ಇವನ ತಂದೆ ಪರವ್ವೋಜ ಎಂದು ಚಿತ್ರದುರ್ಗ ತಾಲ್ಲೂಕು ಜಂಪಳನಾಯ್ಕನ ಕೋಟೆಯ ಹತ್ತಿರ ಹನುಮಂತ ದೇವರ ಗುಡಿ ಇವನ ಕೃತಿ[೧೧೭] ಎಂದು ತಿಳಿದುಬರುತ್ತದೆ.

ಕ್ರಿ.ಶ.೧೫೧೫ರ ಬಡಿಗಿ ಲಿಂಗೋಜನ ಜಗಲೂರು ತಾಲೂಕ ನಿಬಗುರಿನಲ್ಲಿ ಆಂಜನೇಯ ಗುಡಿಯನ್ನು ಕಟ್ಟಿದ್ದಾನೆ. ಇದಕ್ಕಾಗಿ ಗೌಡನು ಇವನಿಗೆ ಅರವತ್ತು ವಕ್ಕಲು ಮಾನ್ಯವನ್ನು ಕೊಡುತ್ತಾನೆ.[೧೧೮]

ಕ್ರಿ.ಶ.೨೫೦ರ ಶಿಕಾರಿಪುರದ ಶಾಸನವೊಂದರಲ್ಲಿ ವಿಶ್ವಕರ್ಮ ಎಂಬ ಪದದ ಉಲ್ಲೇಖ ದೊರೆಯುತ್ತದೆ. ಕ್ರಿ.ಶ.೧೪೩೦ರಲ್ಲಿ ಲಕ್ಕಣ ದಂಡೇಶ ಕಾಳಾಮುಖ ಗುರುವನ್ನು ಹೊಗಳುತ್ತಾನೆ. ಕಾಳಾಮುಖರು ವೀರಶೈವರಾಗಿ ಪರಿವರ್ತನೆ ಹೊಂದುವ ಕಾರ್ಯ ಸರಿಸುಮಾರು ಕ್ರಿ.ಶ.೧೪೧೦-೩೦ರಲ್ಲಿ ಅಥವಾ ಅದಕ್ಕೂ ಹಿಂದೆ ಆರಂಭವಾಗಿ ನಿಧಾನವಾಗಿ ಮುಂದುವರಿದಂತೆ ಕಾಣುತ್ತದೆ.[೧೧೯] ಕಾಳಾಮುಖರು ವೀರಶೈವ ಜಂಗಮರಿಗೆ ಗುರುಗಳೇ ಪೂರ್ವಜರು ಎಂದು ಕಪಟರಾಳ ಕೃಷ್ಣರಾಯರು ಅಭಿಪ್ರಾಯ ಪಡುತ್ತಾರೆ.[೧೨೦]

ಕ್ರಿ.ಶ.೧೫೪೯ರ ಶಾಸನದಲ್ಲಿ ಎಲ್ಲೋಜ, ತಿಮ್ಮೋಜ ಮತ್ತು ಉಲ್ಲೋಜ ಎಂಬ ಮೂವರ ಕಮ್ಮಾರರು ಕೃಷಿ ಕೆಲಸಕ್ಕೆ ನೀರನ್ನು ಎತ್ತುವ ಏತಕ್ಕಾಗಿ ಕಬ್ಬಿಣದ ಬಾನಿಯನ್ನು ಧರ್ಮಕ್ಕೆಲದು ಮಾಡಿಕೊಡುತ್ತಾರೆ.[೧೨೧] ಇವರು ತಮ್ಮನ್ನು ಶ್ರೀಮತು ಕಾಳಿಕಾ ಕಮಟೇಶ್ವರ ದೇವರ ವರಪ್ರಸಾದಿಗಳು ಎಂದು ಹೇಳಿಕೊಂಡಿದ್ದಾರೆ.

**ವೀರಗಲ್ಲು ಶಾಸನಗಳು**

ಕ್ರಿ.ಶ.೯೭೧ರ ನೇರ್ಲಿಗೆಯ ವೀರಗಲ್ಲನ್ನು 'ವಿಭೋಗ' ಎಂಬುವನು ಮಾಡಿದಂತೆ ತಿಳಿದುಬರುತ್ತದೆ.[೧೨೨] ಕ್ರಿ.ಶ.೧೦೧೬ರ ಎರಡು ವೀರಗಲ್ಲಗಳನ್ನು ಕಟಕರ್ಜ್ಜನೆಂಬುವನು ಮಾಡಿದಂತೆ ತಿಳಿದುಬರುತ್ತದೆ. ಸುಮಾರು ಕ್ರಿ.ಶ.೧೨೪೯ ರಿಂದ ೧೩೦೨ರ ಅವಧಿಯಲ್ಲಿ ಸಿಂಗೋಜನ ಮಗ ಬೀರೋಜನೆಂಬುವನು ಒಬ್ಬತ್ತು ವೀರಗಲ್ಲುಗಳನ್ನು ಕಡೆದಿರುವಂತೆ ತಿಳಿದುಬರುತ್ತದೆ.[೧೨೩] ಕ್ರಿ.ಶ.೧೦೭೭ ವೀರಗಲ್ಲೊಂದರಲ್ಲಿ ಆಳ ಎಂಬ ಅಕ್ಕಸಾಲಿ ಮತ್ತು ರಾಯ ಎಂಬ ಅಗಸ ಇಬ್ಬರು ಊರಿನವರಿಂದ ಆಯ ಪಡದಕೊಂದು ವಿವರ ಸಿಗುತ್ತದೆ.[೧೨೪] ಕ್ರಿ.ಶ.೧೧೧೭ರ ಒಂದು ವೀರಗಲ್ಲಿನ ಶಿಲ್ಪವನ್ನು ಮಸಣೋಜ ಎಂಬುವನು ಕಡೆದುದಾಗಿಯೂ ಅದರ ಮೇಲೆ ಶಾಸನವನ್ನು ಮಾದೆಯೋಜ ಎಂಬುವನು ಬರೆದುದಾಗಿಯೂ ತಿಳಿದುಬರುತ್ತದೆ.[೧೨೫]

ಕ್ರಿ.ಶ.೧೧೯೫ರ ಚಿಕ್ಕಮಗಳೂರು ತಾಲ್ಲೂಕು ಕೆಂಕೆರೆ ಗ್ರಾಮದ ಶಾಸನದಲ್ಲಿ ಚಂದ್ರಮ ಉಳಿಯಣ್ಣನ ಬಡಗಿ ಸಂಕೋಜ, ಮಲೋಜ, ಬುತೋಜ ಮಾಡಿದ ವೀರಗಲ್ಲು ಎಂದು ಉಲ್ಲೇಖವಾಗಿದೆ. ಸಂಕೋಜ ಮಲೋಜ ಬುತೋಜ ಬಡಿಗಿಗಳಾಗಿದ್ದರು. ಈ ವೀರಗಲ್ಲುಗಳನ್ನು ಇವರೇ ರಚನೆ ಮಾಡಿದರು ಎಂದು ತಿಳಿಸುತ್ತದೆ.[೧೨೬] ಇದೇ ತರ ವೀರಗಲ್ಲುಗಳನ್ನು ಮಾಡಿದ ಹಲವಾರು ಶಿಲ್ಪಿಗಳ ಹೆಸರುಗಳು ದೊರೆಯುತ್ತವೆ. ಅವರು ನತೋಜನ ಮಗ ಕಡೋಜನು ಮಲ್ಲೋಜ ಸರಸ್ವತಿ ವರಪುತ್ರ ಕಲುಕುಟಿಗ, ಹಾಲೋಜ, ಹುಲ್ಲೋಜ ಕಲುಕುಟಿಗ, ಸಿಂಗೋಜ ಸೋಮೋಜ ಬಮ್ಮೋಜನ ಕೆಲಸಂ ಮುಂತಾದವರ ಶಿಲ್ಪಿಗಳ ಹೆಸರುಗಳು ತಿಳಿದುಬರುತ್ತವೆ.[೧೨೭] ಕ್ರಿ.ಶ.೧೨೯೨ರ ವೀರಗಲ್ಲಿನ ಪಾಠದಿಂದ ವೀರಗಲ್ಲಿನ ಶಿಲಾಕ್ಷರಗಳನ್ನು ಬರೆದಾತನು ಗಾವಣದ ಸೇನ ಬೋವನೆಂದು ವೀರಗಲ್ಲನ್ನು ಮಾಡಿದ ಶಿಲ್ಪಿ ಬೀರೋಜನೆಂದೂ ತಿಳಿದುಬರುತ್ತದೆ. ಬೇಲೂರು ತಾಲೂಕಿನ ಅಗ್ಗಡಲು ಗ್ರಾಮದ ವೀರಗಲ್ಲನ್ನು ಮಾಲೋಜ ಎಂಬುವನು ಮಾಡಿದ್ದರೆ ಅದರ ಮೇಲಿನ ಶಾಸನದ ಪಾಠವನ್ನು ಕುಂದೂರು ರಾಯಣ್ಣನು ಬರೆದನೆಂದು ತಿಳಿಯುತ್ತದೆ.[೧೨೮] ಕ್ರಿ.ಶ.೧೩೦೦ರ ವೀರಗಲ್ಲನ್ನು ಮಾಡಿದ ಶಿಲ್ಪಿ ಮಧುಕೋಜ ನಾದರೆ ಆ ವೀರಗಲ್ಲಿನ ಪಾಠವನ್ನು ಬರೆದವನು ಬರೆದವಳ್ಳಿಯ ಬೆಳಬೇಯನ ಮಗ ಮಂಜೇಯನೆಂದು ತಿಳಿದುಬರುತ್ತದೆ.[೧೨೯]

ಕ್ರಿ.ಶ.೧೩೦೨ರ ಒಂದು ವೀರಗಲ್ಲಿನಲ್ಲಿ ಸಿಂಗೋಜನ ಮಗ ಬೀರೋಜನೆಂಬುವನು ತಾವೇ ಮಹಾಶಿಲ್ಪಿಗಳು ಎಂದು ಮರೆಯುವ ಮರಣೆಸುವರ ಗಂಜರಗಾಳ ಮತ್ಸಂಪುವರ ದುಂರಸೂಲನಾಗಿದ್ದನೆಂದು ತಿಳಿಯುತ್ತದೆ. ವೀರಗಲ್ಲುಗಳನ್ನು ಮಾಡಿರುವ ಶಿಲ್ಪಿಗಳು 'ಕಲುಕುಟಿಕ'

ಆಚಾರಿ ಎಂದು ವೃತ್ತಿಸೂಚಕ ಪದಗಳಿಂದ ಕರೆದುಕೊಂಡಿರುವುದು. ಅವರ ವಿನಯ ಗುಣವನ್ನು ತಿಳಿಸುತ್ತದೆ.[೧೩೦] ಕ್ರಿ.ಶ.೧೩೦೭ರಲ್ಲಿ ಸಿಂಗೋಜನ ಮಗ ಬೀರೋಜನೆಂಬುವನು ಒಂಭತ್ತು ವೀರಗಲ್ಲಗಳನ್ನು ಕಡೆದಿರುವಂತೆ ತಿಳಿದುಬರುತ್ತದೆ.[೧೩೧]

ಕ್ರಿ.ಶ.೧೩೮೧ರ ವೀರಗಲ್ಲಿನ ಶಿಲ್ಪವನ್ನು ಬೆಳತೂರ ಮಾಲಿಯೋಜನು ಮಾಡಿದ್ದರೆ ಅದಕ್ಕೆ ಬರಹವನ್ನು ಪಾಂಚಾಳ ಬಯಿರೋಜ ಎಂಬುವನು ಬರೆದಿದ್ದಾನೆ ಎಂದು ತಿಳಿದುಬರುತ್ತದೆ.[೧೩೨] ಕ್ರಿ.ಶ.೧೪೦೩ ವೀರಗಲ್ಲಿನ ಪಾಠದಿಂದ ತಿಳಿಯುವ ಶಾಸನದಲ್ಲಿ ದೇವಪ್ಪ ಎಂಬುವನ ವೀರಗಲ್ಲನ್ನು ಮಾಡುವುದಕ್ಕೆ ಮಾರೋಜನೆಂಬ ಶಿಲ್ಪಿಗೆ ದೊಡ್ಡಪ್ಪ ಮಾಯಣ್ಣ ಕರಿಯಣ್ಣಂ ಮಸಣ್ಣನವರು ಕೊಡಿಗೆಯಾಗಿ ಜಮೀನನ್ನು ಬಿಟ್ಟ ವಿಷಯ ತಿಳಿಯುತ್ತದೆ.[೧೩೩]

**ಇತರೆ ಶಾಸನಗಳಲ್ಲಿ ಉಲ್ಲೇಖಗಳು**

ಕ್ರಿ.ಶ.೧೦೯೮ರ ಶಾಸನದಲ್ಲಿ ಅಕ್ಕಸಾಲಿ ಖಾವೋಜನ ಭಾಗದಾಯದ ಹೆಸರಿದೆ. ಈ ಶಾಸನಗಳ ಅಕ್ಕಸಾಲಿಗಳು ಬಡಿಗಿಯ ಅಥವಾ ಕಮ್ಮಾರನ ಕೆಲಸಗಳನ್ನು ಮಾಡುತ್ತಿದ್ದಿರಬೇಕು. ಏಕೆಂದರೆ ಪ್ರತಿ ವರ್ಷವು ಅಥವಾ ವರ್ಷದುದ್ದಕ್ಕೂ ಅಕ್ಕಸಾಲಿಯ ಹತ್ತಿರ ಚಿನ್ನದ ಕೆಲಸವನ್ನು ಮಾಡಿಸುವುದನ್ನು ಈಗಲೂ ನೋಡಬಹುದು.[೧೩೪] ಕ್ರಿ.ಶ.೧೧೩೦ರ ಶಾಸನದಲ್ಲಿ ಅಕ್ಕಸಾಲೆ ಕಮ್ಮಾರನಾಗಿದ್ದ ಕದಿಟ್ಟಯನಾಥಾಚಾರಿಯ ಉಲ್ಲೇಖ ಬರುತ್ತದೆ.[೧೩೫]

ಕ್ರಿ.ಶ.೧೧೧೬ರಲ್ಲಿ ದೇವಸ್ಥಾನವನ್ನು ನಿರ್ಮಿಸಿದ ಹೊಯ್ಸಳಾಚಾರಿ ಎಂದು ಒಂದು ಶಾಸನವು ಹೇಳುತ್ತದೆ. ಇವರ ಜಾತಿಯ ರಕ್ತದಲ್ಲೇ ಕಲೆಯ ಬೀಜಗಳು ಹುದುಗಿರುವಂತೆ ಕಾಣುತ್ತದೆ. ವಾಸ್ತುವಿದ್ಯೆ ಶಿಲ್ಪ, ಲೋಹವಿಗ್ರಹಗಳ ಕೆತ್ತನೆ ಪತ್ರಚ್ಛೇದಾದಿ ಕುಶಲಕಲೆಗಳಲ್ಲಿ ಇವರು ನಿಷ್ಣಾತರಾಗಿದ್ದರು. ಒಂದು ಶಾಸನದಲ್ಲಂತೂ ಚಿತ್ರಕಲೆಯೇ ಎಲ್ಲ ಕಲೆಗೂ ಮೂಲಭೂತವಾದ ಕಲೆ ಎಂದು ಹೇಳಿದೆ. "ಸರ್ವಕಲಾಧಾರಭೂತ ಚಿತ್ರಕಾಭಿಜ್ಞೆಯ ವಿಶ್ವಕರ್ಮಾಚಾರ್ಯೇಣ" ಇವರು ತಮ್ಮನ್ನು 'ಸರಸ್ವತಿ ಗಣದಾಸಿಗಳೆಂದು' ಕರೆದುಕೊಳ್ಳುತ್ತಾರೆ. ಮಲವರ ಗಂಡ ಬಿರುದರೊವಾಗಿರಿ ವಜ್ರದಂಡ ರೂವಾರಿ ಕಾಳಿದಾಗಯ್ದು ಮಕರ ತೋರಣ ಬಿಳಿಗ್ರಾಮೆಯ ರೂವಾರಿ ದಾಸೋಜ ಬಿರುದರ ಬಡಿದ ಗೊಂದಳ ಬಿಡವ ಸರಸ್ವತೀ ಗಣದಾಸಿ ಮಚ್ಚರಿಪುರುವಾದಿಸ್ವ ರಭೆಭೇರುಂಡ ಇದನ್ನು ನೋಡಿದರೆ ಅವರವರಲ್ಲಿಯೇ ತೀವ್ರವಾದ ಸ್ಪರ್ಧೆಯಿದ್ದತೆಂದು ಊಹಿಸಬಹುದು. ಈ ಸವಾಲು ಹಾಕುವ ಮನೋಧರ್ಮವು ಕಲಾವಿದರ ರಕ್ತಗತವಾದ ಸ್ವಭಾವವಾಗಿತ್ತು ಎಂದು ತಿಳಿದುಬರುತ್ತದೆ.[೧೩೬] ೧೪ನೇ ಶತಮಾನದ ಮುದ್ದೇಬಿಹಾಳ ತಾಲೂಕಿನ ಹುಲ್ಲೂರು ಶಾಸನದಲ್ಲಿ ನಡುಗಂಡೆಯ ಬಿಯಿಚೋಜನ ಮಗ ಗೋಪಣನು ಕುಲುಮೆಯಯಿಕುವ ಮೂಲಸ್ಥಾನದ ಗುಡಿ ಪುಲುವರದ ಎನ್ನುವ ಉಲ್ಲೇಖ ಬರುತ್ತದೆ.[೧೩೭]

ಕ್ರಿ.ಶ.೧೪೭೬ರ ಶ್ರೀರಂಗಪಟ್ಟಣದ ಶಾಸನದಲ್ಲಿ ಶಾಸನ ರಚನಕಾರ ತನ್ನನ್ನು ತ್ವಷ್ಟಾ ಎಂದು ಹೇಳಿಕೊಂಡಿದ್ದಾನೆ. ಎಲ್ಲಾ ಸಂದರ್ಭದಲ್ಲಿಯೂ ಒಂದೊಂದು ವೃತ್ತಿಯನ್ನು ಸಂಭಾವನೆಯಾಗಿ ಸ್ವೀಕರಿಸಿದ್ದಾನೆ. ಸುಗುಣೋಧಿಮನ್ ವೀರಣ ಎಂದು ಹೆಮ್ಮೆಪಡುತ್ತಾನೆ. ಇದರಂತೆಯೇ ಕ್ರಿ.ಶ.೧೪೪೫,

೪೭ ಹಾಗೂ ೫೫ರ ಶಾಸನಗಳಲ್ಲಿ ತ್ವಷ್ಟಾ ಸುಗುಣೋಧಿಮನ್ ವೀರಣ[೧೩೮] ಒಳ್ಳೆಯ ಗುಣದಿಂದ ಕೂಡಿರುವ ಎಂದು ಕರೆದುಕೊಳ್ಳುತ್ತಾನೆ.

ಕ್ರಿ.ಶ.೧೫೮೩ ಬೊಮ್ಮಗೌಡನೆಂಬುವನು ಕೊಪ್ಪಳದ ಕಸಬೆ ಗೌಡಕಿಯನ್ನು ವಿವಿಧ ಕಾರಣಗಳಿಂದ ತನಗೆ ತೂಗಿಸಿಕೊಂಡು ಹೋಗಲು ಅಸಾಧ್ಯವಾದಾಗ ಅದನ್ನು ಜಡಣಗೌಡನೆಂಬವನಿಗೆ ೨೭೫ ವರಹಗಳಿಗೆ ಮಾರುತ್ತಾನೆ. ತನಗೆ ಬಂದ ಆಯಗಾರಿಕೆ ಮಾನ್ಯವನ್ನು ಹಿಟ್ಟು, ಹುಗ್ಗಿ-ನಿಧಿ, ನಿಕ್ಷೇಪ ಜಲ, ಪಾಷಾಣ, ಅಕ್ಷಣಿ-ಆಗವಿ, ಸಿದ್ಧ ಸಾಧ್ಯಗಳೆಂಬ ಅಷ್ಟಭೋಗವನ್ನು ಹೆಂಡತಿ-ಮಕ್ಕಳ ಅನುಮತಿಯೊಂದಿಗೆ ನೀಡುತ್ತಾನೆ. ಇದಕ್ಕೆ ಕೊಪ್ಪಳ ಸೀಮೆಯ ದೇಸಾಯಿಗಳ ಸೇನಭೋವರು ಮತ್ತು ಅಷ್ಟಾದಶ ಪ್ರಜೆಗಳು ಸಾಕ್ಷಿಯಾಗಿದ್ದಾರೆ. ಈ ಅಷ್ಟಾದಶ ಪ್ರಜೆಗಳಲ್ಲಿ ಅಕ್ಕಸಾಲಿ ಸಿರುಮಣ್ಣನೂ ಹಾಗೂ ಕಮ್ಮಾರ ಮುದಿಯಪರ ಪ್ರಸ್ತಾಪ ಬರುವುದು ವಿಶೇಷವಾಗಿದೆ.

ಕ್ರಿ.ಶ.೧೬೭೧ರ ಕೊಪ್ಪಳದ ತಾಮ್ರ ಶಾಸನದಲ್ಲಿ ಹಸ್ತಿವತಿ(ಆನೆಗೊಂದಿ) ನಾಡಿನ ಕಾತರಕಿ-ಲರಲ್ಲಿನ ಕೊಪ್ಪಳದ ಸೇನಬೋವಿಕೆಯನ್ನು ಕ್ರಯಕ್ಕೆ ಮಾರಿದ ವಿಷಯವನ್ನು ದಾಖಲಿಸುತ್ತದೆ.[೧೩೯] ಈ ಸಂದರ್ಭದಲ್ಲಿ ಕೊಪ್ಪಳ ಸೀಮೆಯ ದೇಸಾಯಿಗಳು ಮುಂತಾದ ಆಯಗಾರರೂ ಸಾಕ್ಷಿಗಳಾಗಿರುತ್ತಾರೆ. ಇದರಲ್ಲಿ ಕಮ್ಮಾರ ಪಡಂಣುನು ಒಬ್ಬ ಸಾಕ್ಷಿಗಾರ ಅಂದರೆ ಅಷ್ಟಾದಶ ಪ್ರಜೆಗಳಲ್ಲಿ ಕಮ್ಮಾರ ಬಡಿಗ ಅಥವಾ ಅಕ್ಕಸಾಲಿಗಳು ಇದ್ದೇ ಇರುತ್ತಾರೆನ್ನುವ ವಿವರ ಈ ಎರಡು ಶಾಸನಗಳಿಂದ ಸಿಗುತ್ತದೆ. ಕಮರ ಎನ್ನುವ ಪದ ೪೯ ಮತ್ತು ೫೮ನೇ ಸಾಲಿನಲ್ಲಿ ಪುನರಾವರ್ತನೆಯಾಗುತ್ತದೆ. ಅದೇ ರೀತಿ ಬಡಿಗೇರ ವೀರಣ್ಣನ ಹೆಸರು ಪ್ರಸ್ತಾಪವಾಗುತ್ತದೆ.[೧೪೦]

ಹೀಗೆ ಪಾಂಚಾಳರ ಬಗ್ಗೆ ನೂರಾರು ಶಾಸನಗಳು ಲಭ್ಯವಿದ್ದು ಅವು ದಾನ ದೇವಾಲಯ ನಿರ್ಮಾಣ ಪ್ರಶಸ್ತಿ ಇವೇ ಮೊದಲಾದ ಸಾಮಾಜಿಕ ಸಂಸ್ಕೃತಿ ಚಟುವಟಿಕೆಗಳನ್ನು ಸಮುದಾಯದ ಕೊಡುಗೆಗಳನ್ನು ತಿಳಿಸಿಕೊಡಲು ನೆರವಾಗಿದ್ದರೆ ವಿವರವಾಗಿ ನೋಡಿದರೆ ಅಂದಿನ ಕಾಲದಲ್ಲಿ ಪಾಂಚಾಳರ ಮಹತ್ವವನ್ನು, ಅವರು ನಿರ್ವಹಿಸುತ್ತಿದ್ದ ಕಾರ್ಯವನ್ನು ಶಾಸನದ ಮೂಲಕ ತಿಳಿಯಬಹುದಾಗಿದೆ. ಪಾಂಚಾಳರ ಗುರು ವಿಶ್ವಕರ್ಮ. ವಿಶ್ವಕರ್ಮ ಜಗತ್ತಿನ ಸೃಷ್ಟಿಕರ್ತ ಎಂದು ಆ ಸಮುದಾಯದಲ್ಲಿ ನಂಬಿಕೆ ಇದೆ. ಇವರೂ ಕೂಡ ರಾಜಮನ್ನಣೆ ಪಡೆದಿದ್ದರು ಎಂಬ ಅಂಶ ತಿಳಿಯಬಹುದಾಗಿದೆ.

**ಅಡಿಟಿಪ್ಪಣಿ**


೧. ವೀರಭದ್ರಾಚಾರ್ಯ ಎಸ್., ದೇವಪೂರ, ಮೂಲಸ್ತಂಭ ಪುರಾಣ, ಪು.೬೬; ೨೦೧೪.

೨. ಶೇಖರಾಚಾರಿ ಕೆ., ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪು.೩೭, ೨೦೧೩.

೩. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂ.೧, ಪು.೧೨೯೪, ೧೯೯೫.

೪. ಕುಮಾರಸ್ವಾಮಿ ಕೆ.ಎಸ್., ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು.೧೧, ೨೦೧೩.

೫. ಅದೇ, ಪು.೧೨, ೨೦೧೩.

೬. ಅದೇ, ಪು.೧೩, ೨೦೧೩.

೭. ಅದೇ, ಪು.೧೪, ೨೦೧೩.

೮. ನರಸಿಂಹಶಾಸ್ತ್ರಿ ಕೆ.ಎಲ್., ಆದಿಪುರಾಣ, ಪು.೯೭, ೨೦೧೧.

೯. ಬಸವರಾಜು ಎಲ್., ರನ್ನನ ಸರಳ ಗದಾಯುದ್ಧ, ಪು.೫೦, ೨೦೦೬.

೧೦. ಶೇಖರಾಚಾರಿ ಕೆ., ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ, ಪು.೪೭, ೨೦೧೩.

೧೧. ಕುಮಾರ ಆರ್.ಬಿ., ಮುದ್ದೆ ಕಂಬಾರರು; ಪು.೩೪, ೨೦೦೪.

೧೨. ವಿವೇಕ ರೈ ಬಿ.ಎ., ರಾಘವಾಂಕನ ಸಮಗ್ರ ಕಾವ್ಯ; ಪು.೨೪೨.

೧೩. ಕುಮಾರ ಆರ್.ಬಿ., ಮುದ್ದೆ ಕಂಬಾರರು; ಪು.೩೪, ೨೦೦೪.

೧೪. ಅದೇ, ಪು.೩೪.

೧೫. ಜಯರಾಮ ಕೆ., ಜೆನಿಗಿ, ತ್ರೈಮಾಸಿಕ ಪತ್ರಿಕೆ, ೨೦೧೬, ಉಲ್ಲೇಖ, ಡಾ.ವೀರೇಶ ಬಡಿಗೇರ, ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು, ಪು.೧೩, ೨೦೧೬.

೧೬. ವಿದ್ಯಾಶಂಕರ ಎಸ್., ನೆಲದ ಮರೆಯ ವಿಧಾನ, ಪು.೭೮, ೧೯೯೫.

೧೭. ಜಯರಾಮ ಕೆ., ಜೆನಿಗಿ, ತ್ರೈಮಾಸಿಕ ಪತ್ರಿಕೆ, ೨೦೧೬ ಉಲ್ಲೇಖ, ಡಾ.ವೀರೇಶ ಬಡಿಗೇರ, ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು, ಪು.೧೫, ೨೦೧೬.

೧೮. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೩, ೨೦೧೭.

೧೯. ಅದೇ, ಪು.೨೩, ೨೦೧೭.

೨೦. ಅದೇ, ಪು.೧೮೬, ೨೦೧೭.

೨೧. ಅದೇ, ಪು.೧೮೭, ೨೦೧೭.

೨೨. ಶ್ರೀನಿವಾಸಾಚಾರಿ ಬಿ., ಪಾಂಚಾಳ ಜಾನಪದ, ಪು.೧೩೮, ೨೦೦೬.

೨೩. ಅದೇ, ಪು.೧೩೭, ೨೦೦೬.

೨೪. ವೀರೇಶ ಬಡಿಗೇರ, ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ, ಪು.೧೩, ೨೦೧೦.

೨೫. ಕುಮಾರಸ್ವಾಮಿ ಕೆ.ಎಸ್., ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು; ಪು.೨೦, ೧೯೯೪.

೨೬. ವೀರೇಶ ಬಡಿಗೇರ, ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ, ಪು.೧೨, ೨೦೧೦.

೨೭. ಅಂಗಡಿ ಎಸ್.ಎಸ್., ಬಡಗಿ ವೃತ್ತಿಪದ ಮಂಜರಿ, ಪು.೧೭, ೧೯೯೯.

೨೮. ವೀರೇಶ ಬಡಿಗೇರ, ಅಡಿಗಲ್ಲು, ಪು.೭, ೧೯೯೭.

೨೯. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೨೫, ೨೦೧೭.

೩೦. ಅದೇ, ಪು.೨೧೩, ೨೦೧೭.

೩೧. ಅದೇ, ಪು.೨೭೨, ೨೦೧೭.

೩೨. ವೀರೇಶ ಬಡಿಗೇರ, ಬಾಚಿಕಾಯಕದ ಬಸವಯ್ಯ ವೃತ್ತಿ ಹಾಗೂ ತತ್ವ ಮೀಮಾಂಸೆ, ಪು.೪೩, ೨೦೦೭.

೩೩. ಅದೇ, ಪು.೪೪, ೨೦೦೭.

೩೪. ವೀರಣ್ಣ ರಾಜೂರ; ಸಂಕೀರ್ಣ ವಚನ ಸಂಪುಟ.೫, ಪು.೨೦೮, ೧೯೯೩.

೩೫. ವೀರಣ್ಣ ರಾಜೂರ; ಸಂಕೀರ್ಣ ವಚನ ಸಂಪುಟ.೫, ಪು.ವ.ಸಂ.೩೩೯೦, ೧೯೯೩.

೩೬. ಬೋರಲಿಂಗಯ್ಯ ಹಿ.ಚಿ(ಸಂ), ಮಂಟೇಸ್ವಾಮಿ, ಬುಡಕಟ್ಟು ಮಹಾಕಾವ್ಯ ಮಾಲೆ, ಪು.೩೬೨, ೧೯೯೭.

೩೭. ಅಂಗಡಿ ಎಸ್.ಎಸ್., ಬಡಗಿ ವೃತ್ತಿಪದ ಮಂಜರಿ, ಪು.೬೫ಮ ೬೭, ೧೯೯೯.

೩೮. ಡಾ. ದಸ್ತಗಿರಿ ಅಲ್ಲೀಬಾಯಿ, ದಣಿವು ಕಾಣದ ಪದಗಳು, ಪು.೧೩, ೧೯೮೪.

೩೯. ಡಾ. ವೀರೇಶ ಬಡಿಗೇರ, ರಾಶಿಬುತ್ತಿ, ಪು.೨೬, ೧೯೯೬.

೪೦. ಅದೇ, ಪು.೨೬, ೧೯೯೬.

೪೧. ಸಿದ್ಧು ದಿವಾಣ, ಹಂತಿ ನೀ ಎಲ್ಲೋ ಕುಂತಿ, ಪು.೧೩, ೨೦೧೬.

೪೨. ಜ್ಞಾನಾನಂದ ಜಿ., ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು, ಪು.೨೫, ೨೦೦೮.

೪೩. ಕುಮಾರಸ್ವಾಮಿ ಕೆ.ಎಸ್., ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ; ಪು.೧೬೦, ೨೦೧೩.

೪೪. ಅದೇ, ಪು.೧೬೦, ೨೦೧೩.

೪೫. ನರಸಿಂಹಾಚಾರ್ಯ ಡಿ.ಎಲ್., ವಡ್ಡಾರಾಧನೆ, ಪು.೨೧೪, ೧೯೭೮.

೪೬. ವಿದ್ಯಾಶಂಕರ ಎಸ್., ಚಾಮರಸ ಪ್ರಭುಲಿಂಗಲೀಲೆ, ಪು.೧೨೩, ೨೦೧೪.

೪೭. ಜಯರಾಮು ಕೆ., ಜೆನಿಗೆ ತ್ರೈಮಾಸಿಕ ಪತ್ರಿಕೆ, ಲೇಖನ, ಡಾ.ವೀರೇಶ ಬಡಿಗೇರ, ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು, ಪು.೧೭, ೨೦೧೬.

೪೮. ಚನ್ನಪ್ಪ ಉತ್ತಂಗಿ, ಸರ್ವಜ್ಞನ ವಚನಗಳು, ಪು.೧೮೨, ೧೯೯೯.

೪೯. ಡಾ. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೭, ೨೦೧೦.

೫೦. ಅದೇ, ಪು.೨೧, ೨೦೧೭.

೫೧. ಅದೇ, ಪು.೨೪, ೨೦೧೭.

೫೨. ಅದೇ, ಪು.೫೩, ೨೦೧೭.

೫೩. ಜಯರಾಮು ಕೆ., ಜೆನಿಗೆ, ತ್ರೈಮಾಸಿಕ ಪತ್ರಿಕೆ, ಲೇಖನ, ಡಾ.ವೀರೇಶ ಬಡಿಗೇರ, ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು, ಪು.೧೭, ೨೦೧೬.

೫೪. ಹಾಡಿದವರು: ತುಳಸಬಾಯಿ ಬಡಿಗೇರ, ಊರು; ಬೆಣ್ಣೂರು, ವ.೬೫.

೫೫. ಬಸವರಾಜ ಸಬರದ; ಜನಪದ ದೈವಗಳು, ಪು.  , ೨೦೦೯.

೫೬. ಕುಮಾರಸ್ವಾಮಿ ಕೆ.ಎಸ್., ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ; ಪು.೧೫೬, ೨೦೧೩.

೫೭. ಅದೇ, ಪು.೧೫೬, ೨೦೧೩.

೫೮. ವೆಂಕಟರಾಮಪ್ಪ ಕೆ., ನಯಸೇನನ ಧರ್ಮಾಮೃತಂ, ಪು.೧೧೩, ೧೯೭೭.

೫೯. ಕೋತಿನ ಎಸ್.ಎಸ್., ಕನಕದಾಸರ ಮೋಹನ ತರಂಗಿಣಿ, ಪು.೮೦, ೧೯೮೪.

೬೦. ಹಿರೇಮಠ ಆರ್., ಷಟ್‌ಸ್ಥಲ ಚಕ್ರವರ್ತಿ, ಚನ್ನಬಸವಣ್ಣನವರ ವಚನಗಳು, ಪು.೪೫೦, ೧೯೯೫.

೬೧. ಡಾ. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೬೫, ೨೦೧೭.

೬೨. ಅದೇ, ಪು.೧೦೧, ೨೦೧೭.

೬೩. ಅದೇ, ಪು.೨೦೧, ೨೦೧೭.

೬೪. ಶ್ರೀನಿವಾಸಾಚಾರಿ ಬಿ., ಪಾಂಚಾಳ ಜಾನಪದ, ಪು.೧೩೭, ೨೦೦೭.

೬೫. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೮೫, ೨೦೦೭.

೬೬. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೫೫೪, ೨೦೦೪.

೬೭. ಅದೇ, ಪು.೩೫೨, ೨೦೦೪.

೬೮. ಅದೇ, ಪು.೩೫೬, ೨೦೦೪.

೬೯. ರಾಘವಾಂಕನ ಸಿದ್ಧರಾಮ ಚರಿತ್ರೆ, ಪು.೧೭೪.

೭೦. ಅದೇ, ಪು.೧೮೦.

೭೧. ಹಿರೇಮಠ ಆರ್.ಸಿ., ಷಟ್‌ಸ್ಥಲ ಚಕ್ರವರ್ತಿ, ಚನ್ನಬಸವಣ್ಣನವರ ವಚನಗಳು, ಪು.೪೫೦, ೧೯೯೫.

೭೨. ಡಾ. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೧೭೦, ೨೦೧೭.

೭೩. ಕಲಬುರ್ಗಿ ಎಂ.ಎಂ., ಸಂಕೀರ್ಣ ವಚನ ಸಂಪುಟ ೧, ಪು.೧೬೩, ೧೯೯೩.

೭೪. ಡಾ. ಎಂ.ಎಂ.ಕಲಬುರ್ಗಿ; ಕರ್ನಾಟಕದ ಕೈಫಿಯತ್ತುಗಳು; ಪು.೧೭೮ರಿಂದ ೧೮೦, ೧೯೯೪.

೭೫. ಅದೇ, ಪು.೧೮೬, ೧೯೯೪.

೭೬. ಅದೇ, ಪು.೫೨೧, ೧೯೯೪.

೭೭. ಅದೇ, ಪು.೫೨೨, ೧೯೯೪.

೭೮. ಅದೇ, ಪು.೩೬೫, ೧೯೯೪.

೭೯. ಅದೇ, ಪು.೧೩೮, ೧೯೯೪.

೮೦. ಕೆ.ವಾಸುದೇವಾಚಾರ್, ಶಿವಮೊಗ್ಗ(ಸಂ) ಶಿಲ್ಪಸಹ್ಯಾದ್ರಿ; ಪು.೬, ೧೯೯೧.

೮೧. ಅದೇ; ಪು.೬, ೧೯೯೧.

೮೨. ಅದೇ; ಪು.೬, ೧೯೯೧.

೮೩. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೨, ೨೦೧೦.

೮೪. ಅದೇ; ಪು.೧೫, ೨೦೧೦.

೮೫. ಅದೇ; ಪು.೫, ೨೦೧೦.

೮೬. ಕೆ.ವಾಸುದೇವಾಚಾರ್, ಶಿವಮೊಗ್ಗ(ಸಂ) ಶಿಲ್ಪಸಹ್ಯಾದ್ರಿ; ಪು.೩, ೧೯೯೧.

೮೭. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೨, ೨೦೧೦.

೮೮. ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೩೦, ೨೦೧೩.

೮೯. ಅದೇ; ಪು.೩೦, ೨೦೧೩.

೯೦. ಶೇಷಶಾಸ್ತ್ರಿ ಆರ್.; ಕರ್ನಾಟಕದ ವೀರಗಲ್ಲುಗಳು; ಪು.೩೫೬, ೨೦೦೪.

೯೧. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೩, ೨೦೧೦.

೯೨. ಅದೇ; ಪು.೧೪, ೨೦೧೩.

೯೩. ಅದೇ; ಪು.೧೬, ೨೦೧೩.

೯೪. ಡಾ.ಕೆ.ಎಸ್.ಕುಮಾರಸ್ವಾಮಿ; ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು; ಪು.೨೦, ೧೯೯೪.

೯೫. ಕೆ.ವಾಸುದೇವಾಚಾರ್, ಶಿವಮೊಗ್ಗ(ಸಂ) ಶಿಲ್ಪಸಹ್ಯಾದ್ರಿ; ಪು.೬, ೧೯೯೧.

೯೬. ಚಿದಾನಂದಮೂರ್ತಿ ಎಂ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೮೫, ೨೦೦೭.

೯೭. ಡಾ.ಆರ್.ಬಿ.ಕುಮಾರ್; ಮುದ್ದೆಕಂಬಾರರು; ಪು.೩೩, ೨೦೦೪.

೯೮. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೫, ೨೦೧೦.

೯೯. ಕೆ.ವಾಸುದೇವಾಚಾರ್, ಶಿವಮೊಗ್ಗ(ಸಂ) ಶಿಲ್ಪಸಹ್ಯಾದ್ರಿ; ಪು.೭, ೧೯೯೧.

೧೦೦. ಅದೇ; ಪು.೬, ೧೯೯೧.

೧೦೧. ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೩೦, ೨೦೧೩.

೧೦೨. ಅದೇ; ಪು.೩೦, ೨೦೧೩.

೧೦೩. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೩, ೧೪, ೨೦೧೦.

೧೦೪. ಚಿದಾನಂದಮೂರ್ತಿ ಎಂ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೮೫, ೨೦೦೭.

೧೦೫. ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೩೧, ೨೦೧೩.

೧೦೬. ಅದೇ; ಪು.೨೯, ೨೦೧೩.

೧೦೭. ಅದೇ; ಪು.೧೮, ೨೦೧೩.

೧೦೮. ಶ್ರೀನಿವಾಸಾಚಾರಿ ಬಿ.; ಬಡಗಿತನದ ದೇಶಿಯ ತಂತ್ರಜ್ಞಾನ; ಪು.೧೯, ೨೦೦೪.

೧೦೯. ಕೆ.ವಾಸುದೇವಾಚಾರ್, ಶಿವಮೊಗ್ಗ(ಸಂ) ಶಿಲ್ಪಸಹ್ಯಾದ್ರಿ; ಪು.೩, ೧೯೯೧.

೧೧೦. ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೫, ೨೦೧೦.

೧೧೧. ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೨೩, ೨೦೧೩.

೧೧೨. ಅದೇ; ಪು.೩೦, ೨೦೧೩.

೧೧೩. ದಿಕ್ಷೀತ್ ವ್ಹಿ.ಜಿ.; ಕಾಳಿಕಾ ಸಂದೇಶ ಮಾಸಪತ್ರಿಕೆ ಜೂನ್, ಪು.೧೧, ೨೦೧೫.

೧೧೪.ಶೇಷಶಾಸ್ತ್ರಿ ಆರ್.; ಕರ್ನಾಟಕದ ವೀರಗಲ್ಲುಗಳು; ಪು.೩೫೪, ೨೦೦೪.

೧೧೫.ಅದೇ; ಪು.೩೫೫, ೨೦೦೪.

೧೧೬.ಶ್ರೀನಿವಾಸಚಾರಿ ಬಿ.; ಬಡಿಗಿತನದ ದೇಶಿಯ ತಂತ್ರಜ್ಞಾನ; ಪು.೨೦, ೨೦೦೪.

೧೧೭.ಅದೇ; ಪು.೨೦, ೨೦೦೪.

೧೧೮.ಡಾ.ಆರ್.ಬಿ.ಕುಮಾರ್; ಮುದ್ದೆ ಕಂಬಾರರು; ಪು.೩೦, ೨೦೦೪.

೧೧೯.ಚಿದಾನಂದಮೂರ್ತಿ ಎಂ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೪, ೨೦೦೭.

೧೨೦.ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೬, ೨೦೧೦.

೧೨೧.ಶೇಷಶಾಸ್ತ್ರಿ ಆರ್.; ಕರ್ನಾಟಕದ ವೀರಗಲ್ಲುಗಳು; ಪು.೩೫೪, ೨೦೦೪.

೧೨೨.ಅದೇ; ಪು.೩೫೨, ೨೦೦೪.

೧೨೩.ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೬, ೨೦೧೦.

೧೨೪.ಶೇಷಶಾಸ್ತ್ರಿ ಆರ್.; ಕರ್ನಾಟಕದ ವೀರಗಲ್ಲುಗಳು; ಪು.೩೫೪, ೨೦೦೪.

೧೨೫.ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೨೯, ೨೦೧೩.

೧೨೬.ಅದೇ; ಪು.೩೫೪, ೨೦೦೪.

೧೨೭.ಶೇಷಶಾಸ್ತ್ರಿ ಆರ್.; ಕರ್ನಾಟಕದ ವೀರಗಲ್ಲುಗಳು; ಪು.೩೫೧, ೨೦೦೪.

೧೨೮.ಅದೇ; ಪು.೩೫೪, ೨೦೦೪.

೧೨೯.ಅದೇ; ಪು.೩೫೪, ೨೦೦೪.

೧೩೦.ಅದೇ; ಪು.೩೫೪, ೨೦೦೪.

೧೩೧.ಅದೇ; ಪು.೩೫೨, ೨೦೦೪.

೧೩೨.ಅದೇ; ಪು.೩೫೫, ೨೦೦೪.

೧೩೩.ಅದೇ; ಪು.೩೫೬, ೨೦೦೪.

೧೩೪.ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೮೮, ೨೦೦೭.

೧೩೫.ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೬, ೨೦೧೦.

೧೩೬.ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೮೫, ೨೦೦೭.

೧೩೭.ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೬, ೨೦೧೦.

೧೩೮.ಶೇಖರಾಚಾರಿ ಕೆ.; ಪಾಂಚಾಳರ ಭಾಷೆ ಮತ್ತು ಸಂಸ್ಕೃತಿ; ಪು.೩೦, ೨೦೧೩.

೧೩೯.ವೀರೇಶ ಬಡಿಗೇರ; ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ; ಪು.೧೭, ೨೦೧೦.

೧೪೦.ಅದೇ; ಪು.೧೮, ೨೦೧೦.

ಅಧ್ಯಾಯ ನಾಲ್ಕು

# ಕನ್ನಡ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪಾಂಚಾಳರ ಪ್ರಾತಿನಿಧ್ಯ

ಪಾಂಚಾಳರಿಗೂ ಜಾನಪದ ಜಗತ್ತಿಗೂ ಅವಿನಾಭಾವ ಸಂಬಂಧವಿದೆ. ಕಸುಬುದಾರರಲ್ಲದೆ ಪ್ರಬುದ್ಧ ಕಲಾವಿದರಾಗಿ ಜಾನಪದ ಲೋಕದ ವಿವಿಧ ರಚನಾತ್ಮಕ ಕಲಾ ಪ್ರಕಾರಗಳಲ್ಲಿ ಪಾಂಚಾಳ ಕುಲದ ಪುರುಷರು, ಮಹಿಳೆಯರು ಮತ್ತು ಮಕ್ಕಳು ತೊಡಗಿಕೊಂಡಿದ್ದು ಚಾರಿತ್ರಿಕ ಹೆಗ್ಗಳಿಕೆಯಾಗಿದೆ. ಜಾನಪದ ಹಾಡು, ಕುಣಿತ, ವಾದನ, ಅಭಿನಯ, ವೈದ್ಯ ಇತ್ಯಾದಿ ಪ್ರಕಾರಗಳಲ್ಲಿ ಪಾಂಚಾಳರದು ಎತ್ತಿದ ಕೈ. ಜಾನಪದ ರಂಗ ಪ್ರಕಾರದಲ್ಲಿ ಹಾಗೂ ವಾದನ ಪ್ರಕಾರದಲ್ಲಿ ಗಾಯನ ಪ್ರಕಾರದಲ್ಲಿ ಭಾಗವಹಿಸದೇ ಇರುವ ಪಾಂಚಾಳರೇ ಇಲ್ಲವೆನ್ನುವುದು ಅತಿಶಯೋಕ್ತಿಯೇನಲ್ಲ.

ವಿಶೇಷವಾಗಿ ಮಹಿಳೆಯರು ಬೀಸುವ, ಕುಟ್ಟುವ, ಜೋಗುಳ, ಮದುವೆ, ಸೋಬಾನ, ಕೋಲಾಟ, ಸಿಗಿ–ಗೌರಿ, ಮಂಗಳಾರತಿ ಹಾಡುಗಳು, ಗಾದೆ, ಒಗಟುಗಳ ರಚನೆಗಳಲ್ಲಿ ವಿಶೇಷ ಪ್ರತಿಭೆಯುಳ್ಳವರಾಗಿದ್ದರು. ಪುರುಷರು, ಭಜನೆ, ತತ್ವಪದ, ರಿವಾಯಿತ, ಲಾವಣಿ, ಕೋಲಾಟ, ಹೋಳಿ–ಹುಣ್ಣಿಮೆಪದ, ಹಂತಿಪದಗಳನ್ನು ಹಾಡುತ್ತಾರೆ. ಅಲ್ಲದೆ ಹಲಗಿ ಮಜಲು, ಕರಡಿ ಮಜಲು, ಪುರವಂತಿಕೆ, ಕಣೀವಾದನದಂತಹ ಚರ್ಮವಾದ್ಯಗಳನ್ನು ನುಡಿಸುವುದರಲ್ಲಿ ಪಳಗಿದಂಥವರು. ಹಾರ್ಮೋನಿಯಂ, ತಬಲಾ, ದಮಡಿ, ಸೀತಾರ ನುಡಿಸುವುದರಲ್ಲಿ ನಿಪುಣರು. ಅಂದರೆ ಜಾನಪದ ಕಲಾಲೋಕದಲ್ಲಿ ಅಷ್ಟೇ ಅಲ್ಲದೆ ಶಿಷ್ಟ ಸಂಗೀತ ಪ್ರಕಾರದಲ್ಲೂ ಪಾಂಚಾಳರು ನಿಷ್ಣಾತರು.

ಈ ಅಧ್ಯಯನದಲ್ಲಿ ಕೆಲವು ಪ್ರಮುಖ ಜಾನಪದ ಕಲಾಪ್ರಕಾರಗಳಲ್ಲಿ ಕಂಡುಬರುವ ಪಾಂಚಾಳರ ಪ್ರಾತಿನಿಧ್ಯ ಕುರಿತು ಚರ್ಚಿಸಿದ್ದೇನೆ. ಇಲ್ಲಿನ ಜಾನಪದ ಕಲಾಪ್ರಕಾರಗಳನ್ನು ೧. ಗೀತಪ್ರಧಾನ ಪ್ರಕಾರಗಳು, ೨. ಕಥನಪ್ರಧಾನ ಪ್ರಕಾರಗಳು, ೩. ವಾದ್ಯಪ್ರಧಾನ ಪ್ರಕಾರಗಳು, ೪. ಪ್ರದರ್ಶನ ಪ್ರಕಾರಗಳೆಂದು ವಿಭಾಗಿಸಿಕೊಂಡು ಚರ್ಚಿಸಿದ್ದೇನೆ.

**೪.೧. ಗೀತಪ್ರಧಾನ ಪ್ರಕಾರಗಳು**

**ಬೀಸುವ ಹಾಡುಗಳು**

ಪ್ರಾಚೀನ ಕಾಲದಲ್ಲಿ ಪ್ರತಿಯೊಂದು ಧಾನ್ಯದವಸಗಳನ್ನು ಬೀಸುವ ಕಲ್ಲಿನಲ್ಲಿ ಬೀಸಿ ಅಥವಾ ಒಳಕಲ್ಲಿನಲ್ಲಿ ಕುಟ್ಟಿ ಹಿಟ್ಟು ಅಥವಾ ನುಚ್ಚು ಮಾಡುವ ಸಂದರ್ಭಗಳಲ್ಲಿ ಹಾಡುವ ಪದ್ಧತಿಯನ್ನು ನಮ್ಮ

ಗ್ರಾಮೀಣ ಜನಪದರು ಬೆಳೆಸಿಕೊಂಡು ಬಂದಿದ್ದಾರೆ. ಬೀಸುವ, ಕುಟ್ಟುವ ಹಾಡುಗಳನ್ನು ಪಾಂಚಾಳರು ಮತ್ತು ಪಾಂಚಾಳೇತರ ಮಹಿಳೆಯರು ಹಾಡುವರು. ಬಾಗಲಕೋಟೆಯ ಬೆಣ್ಣೂರು, ನಂದಿಕೇಶ್ವರ, ತೊಗುನಸಿ, ವಡಗೇರಿ, ರಕ್ಕಸಗಿ, ಇಲ್ಲಕಲ್ಲ ತುಳಸಿಗೇರಿಯಲ್ಲಿ ಪಾಂಚಾಳ ಸಮುದಾಯದ ಮಹಿಳೆಯರು ಈ ಕುಟ್ಟುವ ಬೀಸುವ ಪದಗಳನ್ನು ಹಾಡಿದ್ದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿದ್ದೇನೆ. ಇದರ ಜೊತೆಗೆ ನನ್ನ ತಾಯಿ ಮತ್ತು ನಮ್ಮ ಚಿಕ್ಕಮ್ಮಂದಿರು ಹಾಡಿದ್ದನ್ನು ಬಾಲ್ಯದಲ್ಲಿ ಗಮನಿಸಿದ್ದೇನೆ. ಇವರು ಬೀಸುವಾಗ, ಕುಟ್ಟುವಾಗ, ರಾಶಿ ಮಾಡುವಾಗ, ಕಣ ಮಾಡುವಾಗ ಹೀಗೆ ದೈನಂದಿನ ಜೀವನದಲ್ಲಿ ತಮ್ಮ ಆಯಾಸ ಬೇಸರಗಳನ್ನು ಹಾಡಿನ ಮೂಲಕ ದೂರ ಮಾಡಿಕೊಳ್ಳುತ್ತಿದ್ದರು. ಹಾಡುಗಳು ಅವರ ಜೀವನಶೈಲಿಯಲ್ಲಿ ಜೀವನವ ಪದ್ಧತಿಯಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿವೆ. ಮಾನಸಿಕವಾಗಿ ದೈಹಿಕವಾಗಿ ಸದೃಢತೆಯನ್ನು ಕಾಪಾಡಿಕೊಳ್ಳಲು ಅವು ಅತ್ಯವಶ್ಯಕವಾಗಿದ್ದವು. ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳು ನಸುಕಿನಲ್ಲಿ ಕೋಳಿ ಕೂಗುವ ಮೊದಲೇ ಎದ್ದು ಸೂರ್ಯ ಉದಯವಾಗುವವರಿಗೂ ಬೀಸುತ್ತಿದ್ದರು. ಅವುಗಳನ್ನು ಬೀಸುವ ಹಾಡುಗಳೆಂದು ಕರೆಯಲಾಗಿದೆ. ಇಲ್ಲಿ ಪಾಂಚಾಳ ಹೆಣ್ಣುಮಕ್ಕಳ ಅನನ್ಯತೆಯನ್ನು ಮಾತ್ರ ಚರ್ಚಿಸಿದ್ದೇನೆ.

'ರಾಗಿ ಕಲ್ಲಿಗೆ ರನ್ನದ ಕೈಗೂಟ
ರಾಯ ತಮ್ಮಯ್ನ ಕೊಡಗಿಯ ಕಲ್ಲಿನ ಮೇಲೆ
ರಾಮಚಂದ್ರನ ಬರೆದಾರೆ'
'ಅಕ್ಕಿ ಬೀಸೂ ಕಲ್ಲೆ ನುಚ್ಚು ಬೀಸೊಕಲ್ಲೆ
ಶೆಟ್ಟರ ಮನೆ ಶೆಟ್‌ಗಲ್ಲಿನ ಮೇಲೆ
ಸೂರ್ಯ ಚಂದ್ರ ಬರೆದಾರೆ'
'ಅಕ್ಕಮ್ಮ ತಾಯಿ ಮುಕ್ಕಮ್ಮರಾಗಿಯ
ಚಕ್ಕ-ಚಕ್ಕನೆ ಉದುರಮ್ಮ ನಮ್ಮನೆಯ॥ ಅಕ್ಕಿ ಆರುತಿಯ ಬೆಳಗೇವು'

ಈ ಬೀಸುವ ಹಾಡಿನಲ್ಲಿ ಕಲ್ಲು ಜೀವನಾಧಾರ ವಸ್ತು ಆಗಿದೆ. ರಾಗಿ ಬೀಸುವ ಕಲ್ಲಿಗೆ ತಳಗೂಟ ಮತ್ತು ಕೈಗೂಟಗಳಿರುತ್ತವೆ. ಅದನ್ನು ಹಾಡಿನಲ್ಲಿ ರನ್ನದ ಕೈಗೂಟ ಈ ಕೈಗೂಟ ಎಂದು ಹಾಡುತ್ತಾರೆ. ಈ ಗೂಟಗಳನ್ನು ಪಾಂಚಾಳದವರಾದ ಬಡಗಿ ಮತ್ತು ಕಂಬಾರರು ತಯಾರಿಸುತ್ತಾರೆ. ಬೀಸುವ ಕಲ್ಲು ಮೂರು ಸಮುದಾಯವನ್ನು ಒಳಗೊಂಡ ತಯಾರಾದ ಕಲ್ಲಾಗಿದೆ. ವಡ್ಡರ, ಬಡಗಿ, ಕಮ್ಮಾರ ಈ ಮೂವರ ಪರಿಶ್ರಮದಿಂದಲೇ ಈ ಬೀಸುವ ಕಲ್ಲು ಒಂದು ಉಪಯುಕ್ತ ವಸ್ತುವಾಗಿ ರೂಪುಗೊಂಡಿದೆ. ಕಲ್ಲು ಸೂಕ್ಷ್ಮವಾಗಿ ತಿರುಗಬೇಕಾದರೆ ತಳಗೂಟ(ಕಬ್ಬಿಣದ್ದು) ಮತ್ತು ಕೈಗೂಟ(ಕಲ್ಲು ತಿರುವಲು ಬಳಸುವ ಕಟಿಗೆಗೂಟ) ಬೇಕೇ ಬೇಕು. ತಳಗೂಟವನ್ನು ಕಮ್ಮಾರ ಹಾಕಿದರೆ ಕೈಗೂಟವನ್ನು ಬಡಗಿ ಮಾಡುತ್ತಾನೆ. ಹೀಗಾಗಿ ಬೀಸುವ ಹಾಡುಗಳಲ್ಲಿ ಈ ಗೂಟಗಳನ್ನು ಮಾಡಿದ ಬಡಗಿ, ಕಮ್ಮಾರರನ್ನು ಸ್ಮರಿಸಿ ಹಾಡುವ ಹಾಡುಗಳು ಬೀಸುವ ಹಾಡುಗಳಲ್ಲಿ ಯಥೇಚ್ಛವಾಗಿ ಸಿಗುತ್ತವೆ. ರನ್ನದ ಗೂಟ, ಚಿನ್ನದ ಗೂಟ, ಬಡಗಿ ಆಡಿದ ಗೂಟ ಎಂದು ಸ್ಮರಿಸುತ್ತಾರೆ.

ಅಂದುಳ್ಳ ಅಡಿಗಲ್ಲು ಚೆಂದುಳ್ಳ ಮೇಲುಗಲ್ಲು
ಚಂದ್ರಮತಿಯಯೆಂಬ ಹಿಡಿಗೂಡ ಹಿಡಿಕೊಂಡ
ತಂದೆ-ತಾಯಿಗಳ ನೆನೆದೇನ
ಬೀಸಾಕ ಕುಂತರ ಬ್ಯಾಸರಕಿ ನಮಗಿಲ್ಲ
ಸೊಸಿಹರಿದಾವ ನಮ್ಮ ಪದ/ಆ
ಕೂಸಿಗೆ ಬಂತ ಸವಿನಿದ್ದಿ[೨]

ನಮ್ಮ ಮಹಿಳೆಯರು ಕುಟ್ಟುವ ಬೀಸುವ ಸಂದರ್ಭದಲ್ಲಿ ತಮ್ಮ ಕೈಯಲ್ಲಿ ಹಿಡಿದುಕೊಳ್ಳುವಂತಹ ಹಿಡಿಗೂಟ ಹಿಡಿದುಕೊಂಡು ತಮ್ಮ ತಂದೆ-ತಾಯಿಯನ್ನು ನೆನೆದುಕೊಂಡು ಹಾಡುವರು. ಅವರು ಬೀಸಾಕ ಕುಂತರ ಅವರ ದಣಿವು, ಬೇಸರಿಕೆಯನ್ನು ಈ ಹಾಡಿನ ಮೂಲಕ ಕಳೆದುಕೊಳ್ಳುವರು. ಇವರು ಬೀಸುವ ಹಾಡು ಕೇಳುತ್ತಾ ಕೇಳುತ್ತಾ ಅವರ ಮಗುವಿಗೆ ಸವಿನಿದ್ದೆ ಬಂದಿದರ ಬಗ್ಗೆ ಹಾಡಿನಲ್ಲೆ ವ್ಯಕ್ತಪಡಿಸಿದ್ದಾರೆ. ಅಷ್ಟು ಹಾಡುಗಳು ಕೇಳುವುದಕ್ಕೆ ಆನಂದಮಯವಾಗಿರುತ್ತಿದ್ದವು ಎಂದು ಈ ಹಾಡಿನಲ್ಲಿ ತಿಳಿದುಕೊಳ್ಳಬಹುದು. ಅದೇ ರೀತಿ ಇನ್ನೊಂದು ಹಾಡು,

ಬಿದಿರನೆ ಜರಸಿಗೆ ಚದುರಂಗದ ಕಲ್ಲು ಹೂಡಿ
ಮೊದಲಿಗೆ ಸರಸ್ವತಿಯ ನೆನೆವೇನು
ತಂಗಿ ಜೋಳ ಬೀಸೋಣು ಬಾರೆ
ಸರಸ್ವತಿ ಎಂಬವಳು ಸಾವಿರಗೆ ದೊಡ್ಡವಳು
ಎಲ್ಲಿ ಹೋದಮ್ಮ ಏ ಗಿರಿಜಾತೆ
ತಂಗಿ ಜೋಳ ಬೀಸೋನು ಬಾರೆ
ಕಲ್ಲ ಹೊಡಿದೆರೆ ಮನಿಗೆ ಎಲ್ಲ ಭಾಗ್ಯವು ಬರಲಿ
ಪಲ್ಲಕಿ ಮೇಲೆ ಏ ಮಗ ಬರಲಿ
ತಂಗಿ ಜೋಳ ಬೀಸೋನು ಬಾರೆ[೩]

ಬೀಸುವ ಕಲ್ಲು ಜನಪದರಿಗೆ ಜೀವನಾಧಾರ ವಸ್ತು. ಕಲ್ಲಮ್ಮ ತಾಯಿಯ ಕರುಣೆಯಿಂದಲೇ ಕಲ್ಲು ಹಿಡಿದಾತೆಗೆ ಮಗ ಬರುತ್ತಾನೆ. ಸುಖ, ಸಂತೋಷ, ಬದುಕು ಹಸನಾಗುವುದು ಬೆಳಗುವುದು ಅದಕ್ಕಾಗಿಯೇ ಮೊದಲು ಸರಸ್ವತಿಯನ್ನು ನೆನೆವೇನು ಎಂದು ತಂಗಿಗೆ ಹೇಳುವಂತದ್ದು. ಈ ಹಾಡಿನಲ್ಲಿ ದೇವತೆ ಮತ್ತು ತಂಗಿ ಬಾಂಧವ್ಯವನ್ನು ಚಿತ್ರಿಸುತ್ತದೆ.

ಪಾಂಚಾಳ ಸಮುದಾಯದ ಇಂದಿನ ಮದುವೆ ದಿನಗಳಲ್ಲಿ ಮದುಮಗಳಿಗೆ ಬೀಸುವ, ಕುಟ್ಟುವಶಾಸ್ತ್ರ ಮಾಡಿಸುತ್ತಾರೆ ಅದರ ಜೊತೆಗೆ ಈ ಕಾಯಕಗಳ ಬಗೆಗೆ ಹಿಂದಿನವರೆಗೆ ಎಂಥ ಹೆಗ್ಗಳಿಕೆ ಮತ್ತು ಪವಿತ್ರ ಭಾವನೆ ಇದ್ದವೆಂದು ತಿಳಿದುಬರುತ್ತದೆ. ಇಂದು ಅಕ್ಕಿ ಮಾಡುವ ಮತ್ತು ಹಿಟ್ಟು ಮಾಡುವ ಯಂತ್ರಗಳು ಹಳ್ಳಿಗಳನ್ನು ಪ್ರವೇಶಿಸಿರುವುದರಿಂದ ಈ ಕುಟ್ಟುವ ಮತ್ತು ಬೀಸುವ ಕೆಲಸಗಳು ಮಾಯಗುತ್ತಿವೆ. ಅವುಗಳೊಂದಿಗೆ

ಹಾಡುಗಳು ಕಣ್ಮರೆಯಾಗುತ್ತಿವೆ. ಆಧುನಿಕತೆಯ ಕಾಲಘಟ್ಟದಲ್ಲಿ ಹಿಟ್ಟು ಬೀಸುವ ಗಿರಣಿಗಳು ಹೆಚ್ಚು ಚಾಲನೆ ಪಡೆದವು. ಆದರೆ ಅದಕ್ಕೂ ಮುಂಚೆ ಬೀಸುವ ಕಲ್ಲು ಜನಜೀವನದಲ್ಲಿ ಮಹತ್ವದ ಸ್ಥಾನ ಪಡೆದಿತ್ತು. ಕೋಳಿ ಕೂಗುವ ಮುನ್ನ ಎದ್ದು ಬೀಸಬೇಕಿತ್ತು. ಆ ಬೀಸುವ ಪದಾರ್ಥಗಳು ಆ ಸಂದರ್ಭದ ಕೃಷಿಯನ್ನು ಆಧರಿಸಿರುತ್ತಿತ್ತು. ಈ ಬೀಸುವ ಪದಗಳಲ್ಲಿ ಪರಸ್ಪರ ಹೊಂದಾಣಿಕೆ ಸ್ವಭಾವ ಪ್ರೀತಿ ವಾತ್ಸಲ್ಯ ಕರುಣೆ, ಕೃತಜ್ಞತೆ ಎಲ್ಲವುಗಳನ್ನು ಹಾಡುಗಳಲ್ಲಿ ಕಾಣಬಹುದಿತ್ತು. ಈ ಹಾಡುಗಳು ಬಹುಮುಖ್ಯವಾಗಿ ಮಹಿಳೆ ತನ್ನ ಪದವನ್ನು ತಾನೇ ಕಲಿತುಕೊಳ್ಳುವ ಸೃಜನಶೀಲ ಸ್ವಾತಂತ್ರ್ಯವನ್ನು ಎತ್ತಿ ತೋರಿಸುತ್ತವೆ.

**ಕುಟ್ಟುವ ಪದಗಳು**

ಬೀಸುವ ಪದಗಳಷ್ಟೇ ಪ್ರಸಿದ್ಧವಾದ ಮತ್ತೊಂದು ಮಹಿಳೆಯರ ಪದ ಕುಟ್ಟುವ ಪದಗಳು. ಗೋಧಿ, ಅಕ್ಕಿ, ಭತ್ತ, ಮೆಣಸಿನಕಾರ ಮುಂತಾದವುಗಳನ್ನು ಒರಳಿನಲ್ಲಿ ಹಾಕಿ ಕುಟ್ಟುವ ಸಂದರ್ಭದಲ್ಲಿ ಕುಟ್ಟುವ ಪದಗಳನ್ನು ಹಾಡುತ್ತಿದ್ದರು. ಸಾಮಾನ್ಯವಾಗಿ ಇಬ್ಬರು ಸ್ತ್ರೀಯರು ಕುಟ್ಟುವ ಕಾರ್ಯದಲ್ಲಿ ತೊಡಗಿರುತ್ತಾರೆ. ಒಬ್ಬಳು ಕೆಳಗೆ ಕುಳಿತುಕೊಂಡು ಕಾಳುಗಳನ್ನು ಸರಿಪಡಿಸುವ ಕೆಲಸವನ್ನು ಮಾಡುತ್ತಾಳೆ. ಇನ್ನೊಬ್ಬಳು ನಿಂತುಕೊಂಡು ಒನಕೆಯನ್ನು ಹಿಡಿದುಕೊಂಡು ಕೆಳಗಿನವರೆಗೆ ಸಾತ್ ನೀಡುತ್ತಾಳೆ.

ಕುಟ್ಟುವ ಕಾರ್ಯ ನಡೆದಾಗ ಮೊದಲೊಬ್ಬಳು ಹಾಡಿದ ನಂತರ ಹಿಮ್ಮೇಳವಾಗಿ ಇನ್ನೊಬ್ಬಳು ಹಾಡುತ್ತಾಳೆ. ಆಗ ಕ್ರಿಯೆ ಮತ್ತು ಹಾಡುಗಳ ನಡುವೆ ಒಂದು ಸಾವಯವ ಸೂತ್ರ ತಂತಾನೇ ರೂಪುಗೊಳ್ಳುತ್ತದೆ. ಯಾವುದೇ ದವಸ ಧಾನ್ಯವನ್ನು ವಿಶೇಷ ಸಿಪ್ಪೆಯಿರುವ ಧಾನ್ಯ, ಭತ್ತ, ಕಂಕಿ ಅಥವಾ ಸೆರಗು ಉಳಿದಿರಬಹುದಾದ ಜೋಳ ಒರಳಿಗೆ ಹಾಕಿ ಒನಕೆಯಿಂದ ಕುಟ್ಟಿ ಕಾಳನ್ನು ಬೇರ್ಪಡಿಸುವುದು, ಸ್ವಚ್ಛಗೊಳಿಸುವುದು, ಈ ಕುಟ್ಟುವ ಕ್ರಿಯೆಯ ಉದ್ದೇಶ. ಅದರಲ್ಲೂ ಬೇಳೆ ಕಾಳುಗಳನ್ನು ಒರಳಿಗೆ ಹಾಕಿ ಕುಟ್ಟುವುದುಂಟು. ಆಗ ಅದಕೆ 'ಥಳಿಸುವುದು' ಎನ್ನುತ್ತಾರೆ. ಈ ಥಳಿಸುವಿಕೆಗೆ ಮುಖ್ಯವಾಗಿ ಬೇಕಾದ ಸಾಧನವೆಂದರೆ ಒನಕೆ. ಈ ಒನಕೆಯನ್ನು ಬಡಿಗೇರನನ್ನು ತಯಾರಿಸುತ್ತಾನೆ. ಪಾಂಚಾಳ ಮಹಿಳೆಯರು ತಮಗೆ ಯಾವ ಅಳತೆ ತೂಕ ಇರಬೇಕು ಎನ್ನುವುದು ತಮ್ಮ ಯಜಮಾನರಿಗೆ ಹೇಳಿ ಕೆತ್ತಿಸುತ್ತಾರೆ. ಅದು ಒಂದು ಕಡೆ ದುಂಡಾಗಿ ಇನ್ನೊಂದು ಕಡೆ ಸಪಟಾಗಿ ಮುಂದೆ/ತುದಿಗೆ ಅಣಸು ಹಾಕಿರುತ್ತಾರೆ. ಆ ಅಣಸನ್ನು ಕಂಬಾರನು ಮಾಡುತ್ತಾನೆ. ಬೀಸುಕಲ್ಲಿನಂತೆ ಒನಕೆ ಮತ್ತು ಒಳ್ಳು ಬಡಗಿ, ಕಂಬಾರ ಹಾಗೂ ವಡ್ಡರ ಆವಿಷ್ಕಾರವಾಗಿದೆ.

ಈ ಕುಟ್ಟುವ ಪದಗಳಲ್ಲಿ ತಾಯಿ–ತಂದೆಯರ ಮಮತೆ, ಅಕ್ಕ–ತಂಗಿ ಅಣ್ಣ–ತಮ್ಮಂದಿರ ಮೇಲಿನ ವಿಶ್ವಾಸ, ಗಂಡ–ಹೆಂಡಿರ ಒಲವು, ಮಕ್ಕಳ ಮೇಲಿನ ವಾತ್ಸಲ್ಯ ಕಂಡುಬರುತ್ತದೆ. ಒನಕೆ ಮಾಡಿದ ಬಡಗಿ ಕಂಬಾರರ ಸ್ಮರಣೆ ಹೆಣ್ಣಿನ ಬದುಕಿಗೆ ಸಂಬಂಧಿಸಿದ ಸಮಸ್ತ ವಿಷಯಗಳು ಮಹಿಳೆಯರ ಈ ಹಾಡುಗಳಲ್ಲಿ ವರ್ಣಿತವಾಗಿವೆ. ಕುಟ್ಟುವ, ಬೀಸುವ ಪದಗಳು ಶ್ರಮಸಂಸ್ಕೃತಿಯ ಪ್ರತೀಕಗಳಾಗಿವೆ.

ಕುಟ್ಟುವ ಬೀಸುವ ಹಾಡು ಯಾವಾಕೆ ಕಲಿಸ್ಯಾಳ।
ಬಡಗಿ ಬಸಣ್ಣ ತಂಗಿ ಸುಭದ್ರಿ ಕಲಿಸ್ಯಾಳ
ಬಿಡಿ ಮುತ್ತಿನಂಥ ಪದಗೋಳ[೪]

ಎಲ್ಲೆಲ್ಲಿ ನೋಡಿದರ ತೆಳ್ಳಾನ ಕಲ್ಲಿಲ್ಲ।
ಜಳ್ಳಾನೆ ಹರಿವ ಜಲವಿಲ್ಲ। ಮೌನಯ್ಯನ
ವಸ್ತ್ರ ನಾನೆಲ್ಲಿ ಒಗೆಯಲಿ[೫]

ಎಂಬ ತ್ರಿಪದಿಯಲ್ಲಿ ಕೆಲಸ ಮಾಡುವುದು ಶ್ರದ್ಧೆಯ ಪ್ರತೀಕವಾಗಿ ಬರುತ್ತದೆ. ಹೇಗೋ ಒಗೆದು ಹೇಗೋ ಹೋಗುವುದು ಗ್ರಾಮೀಣ ಗರತಿಯ ಜಾಯಮಾನವಲ್ಲ. ತಿಳಿ ನೀರಲ್ಲಿ ತೆಳ್ಳನೆಯ ಕಲ್ಲಿನಲ್ಲಿ ಮೌನಯ್ಯನ ವಸ್ತ್ರ ಒಗೆಯುವ ಕಾಯಕನಿಷ್ಠೆ ಅವಳದ್ದಾಗಿದೆ. ಶ್ರಮ, ಸಂಸ್ಕೃತಿಯ ಭಾಗವಾಗಿ ಅವರು ಮಾಡುವ ಪ್ರತಿ ಕಾಯಕದಲ್ಲೂ ಅವರು ದೇವರನ್ನು ಕಾಣುತ್ತಾರೆ. 'ನೀರು, ನೆಲ, ಮಳೆ-ಗಾಳಿಗಳ ಜೊತೆಗೆ ದನ, ಕರು, ಮರ, ಬೀಸುವ ಕಲ್ಲು, ಒಳ್ಳು, ಒನಕೆ, ಕಸಬರಿಗೆ ಸಹಿತ 'ದೇವರಾಗಿಯೇ ಕಾಣಿಸಿಕೊಳ್ಳುತ್ತವೆ. ಹೀಗಾಗಿ ಹರಿವ ಜಲದಲ್ಲಿ ಒಗೆಯುವ ಸಾಮಾನ್ಯ ವಸ್ತ್ರವೂ ಅವಳಿಗೆ ಮೌನಯ್ಯನ ವಸ್ತ್ರವಾಗಿ ಕಾಣಿಸಿಕೊಂಡಿದೆ.

ಪದ ಬಂದರ್ಹೇಳು ಬಾರದಿದ್ದರೆ ಶರಣಾಗು
ಪದವುಂಟು ನನ್ನ ಎದೆಯಲ್ಲಿ ತಾಮ್ರದ
ತಾಯ್ತುಂಬು ನನ್ನ ತೋಳಲ್ಲಿ[೬]

ಎಂದು ಅವರು ಹಾಡು ಬರದಿದ್ದವರಿಗೆ ಸವಾಲನ್ನು ಕೂಡ ಹಾಕಬಲ್ಲವರಾಗಿದ್ದಾರೆ. ಇದರಿಂದ ಸ್ಪರ್ಧೆ ತಾನೇ ತಾನಾಗಿ ಕಾಣಿಸಿಕೊಳ್ಳುತ್ತದೆ. ಕಲ್ಪನೆಗಿಂತ ಕಂಡುಂಡ ಬದುಕಿನ ನೈಜಾನುಭವಗಳಿಗೆ ತಾನೇ ತಾನಾಗಿ ಮೂರ್ತರೂಪ ಬರುತ್ತದೆ. ಪದವುಂಟು ನನ್ನ ಎದೆಯಲ್ಲಿ ಎನ್ನುವುದು ಅಭಿಮಾನದ ಮಾತಾದರೆ, ತಾಮ್ರದ ತಾಯ್ತುಂಟು ನನ್ನ ತೋಳಲ್ಲಿ ಎನ್ನುವುದು ದೈವಿಶಕ್ತಿಯ ಸಂಕೇತವಾಗಿದೆ. ಈ ರೀತಿ ಅಪಾರ ಅನುಭವ ಹಾಗೂ ದೈವಿಶ್ರದ್ಧೆಯ ಫಲಸ್ವರೂಪವಾಗಿ ಜನಪದರು ಪದ ಕಟ್ಟಿ, ಹಾಡುತ್ತಾರೆ.

**ಸೋಬಾನ ಪದಗಳು**

ಮದುವೆಗೆ ಸಂಬಂಧಿಸಿದಂತೆ ಎಲ್ಲ ಕಾರ್ಯಕ್ರಮಗಳಲ್ಲಿ ಗುಂಪು ಗುಂಪಾಗಿ ಸೇರಿದ ಮಹಿಳೆಯರು ಸೋಬಾನ ಪದ ಹೇಳುತ್ತಾರೆ. ಗಂಡಿನ ಕಡೆಯವರು ಮದುವೆ ಸಂದರ್ಭದಲ್ಲಿ ಶಾಸ್ತ್ರದ ನೀರು ತರುವಾಗ, ಗಂಗೆಯ ಪೂಜೆ ಶಾಸ್ತ್ರದ ಭತ್ತ ಕುಟ್ಟುವುದು, ವೀಳ್ಯಶಾಸ್ತ್ರ ಮಾಡುವಾಗ ಹೀಗೆ ಈ ಎಲ್ಲ ಸಂದರ್ಭದಲ್ಲಿ ಸೋಬಾನ ಪದಗಳನ್ನು ಸರಳವಾಗಿ ಹಾಡುತ್ತಾರೆ. ಈ ಸೋಬಾನ ಹಾಡುಗಳು ತುಂಬಾ ವೈವಿಧ್ಯಮಯವಾಗಿರುತ್ತವೆ. ಮದುವೆಯ ಇತರ ಯಾವುದೇ ಹಾಡುಗಳಿಗಿಂತ ಸೋಬಾನ ಹಾಡುಗಳನ್ನು ಹಾಡುವ ರೀತಿ ಧಾಟಿಗಳಲ್ಲಿ ವೈವಿಧ್ಯತೆ ಇದೆ. ಈ ಹಾಡುಗಳಲ್ಲಿ ಕಥನ, ಕವನ, ನೀತಿ ಪದಗಳು ಹಾಸ್ಯದ ಹಾಡುಗಳು ಇರುತ್ತವೆ.

ತಾಯಿ ಮಕ್ಕಳ ನಾವು ಜೊತೇಲಿ ಬರುವಾಗ
ಬಾಳೆಹಣ್ಣು ಉಡುಲಾಗ ಸೋಬಾನವ
ಬಾಳೆಹಣ್ಣು ಉಡುಲಾಗ ಗವಿಸಿದ್ದನ ತೇರಿನ

ಮ್ಯಾಲೆ ಒಗೆದೇವ ಸೋಬಾನವ
ಅಪ್ಪ ಗವಿಸಿದ್ದನ ನಿನ್ನ ತೇರ್ಯಾರ ಕಟ್ಟಾರ
ಇಲ್ಲಕಲ್ಲ ಬಡಗಿ ಲಕ್ಷ್ಮಣ್ಣ ಸೋಬಾನವ
ಇಲ್ಲಕಲ್ಲ ಬಡಗಿ ಲಕ್ಷ್ಮಣ್ಣ ಕಟ್ಟಿದ ತೇರ
ಬೇಗಿನ ವೆಳ್ಯಾಕೆ ಎಳೆದಾವ ಸೋಬಾನ[೭]

ತಾಯಿ ಮಕ್ಕಳು ಗವಿಸಿದ್ಧನ ಮಠಕ್ಕೆ ಹಾವಿನಸರ, ಊದುಬತ್ತಿ, ಬಾಳೆಹಣ್ಣು ಇತ್ಯಾದಿ ಪೂಜಾ ಸಾಮಗ್ರಿ ಒಯ್ದು ಪೂಜೆಯ ವೇಳೆಗೆ ಮಠಕ್ಕೆ ಹೋಗುತ್ತಿದ್ದುದನ್ನು ಗಮನಿಸಿದಾಗ ಅಲ್ಲಿ ತ್ರಿಕಾಲ ಪೂಜೆ ನಡೆಯುತ್ತಿತ್ತು ಎನ್ನುವುದು ನಮಗೆ ತಿಳಿದುಬರುತ್ತದೆ. ಒಂದು ತೇರು ಹಾಗೂ ಇನ್ನೊಂದು ಉತ್ಸವ ಮೂರ್ತಿ ಎರಡಕ್ಕೂ ಹಣ್ಣು-ಉತ್ತತ್ತಿ ಒಗೆಯುವುದು ನಿತ್ಯದ ರೂಢಿಯಾಗಿತ್ತು. ಗವಿಮಠದ ತೇರನ್ನು ಪ್ರಥಮವಾಗಿ ಇಲಕಲ್ಲಿನ ಬಡಿಗೇರ ಲಕ್ಷ್ಮಣ ಎನ್ನುವವರು ತಯಾರಿಸಿದುದು ಇಲ್ಲಿನ ಮುಖ್ಯಸಂಗತಿ. ಹಾಡು ಸೋಬಾನವಾದರೂ ಅರ್ಥ ಗವಿಸಿದ್ಧೇಶ್ವರ ಜಾತ್ರೆ ಮತ್ತು ಬಡಗಿ ಲಕ್ಷ್ಮಣನ ಉಲ್ಲೇಖವಿರುವುದು ಬಹುಮುಖ್ಯ ಸಂಗತಿ.

ಇಂದೇನ ಇವರ ಮನಿಯಾಗ ತಂಗೆವ್ವ
ರೆಂಬಿ ಮೈನೆರದ ಸಡಗರ ಸೋಬಾನ
ರೆಂಬಿ ಮೈನೆರದ ಸಡಗರ ಸೋಬಾನ
ಮಾವನ ಮಗಳು ಅತಿ ರೆಂಬಿ ಕಾಳಣ್ಣ
ಮಾವರ ಬಂಗಾರ ಉಂಗುರ ಗೆದಿಯ ಬಂದೆ ಸೋಬಾನ
ಮಾವರ ಬಂಗಾರ ಉಂಗುರ ಗೆದಿಯ ಬಂದೆ ಸೋಬಾನ
ಹತ್ತು ಕಂಬದ ನಡುವೆ ಕೆತ್ತಿ ಮಂಚವ ಹಾಕಿ
ರಾಯರ ಮಗನ ಮಲಗ್ಯಾನ ಸೋಬಾನ
ರಾಯರ ಮಗ ಮಲಗಿದ ಮಂಚವ್ವ
ಯಾವೂರ ಬಡಿಗ್ಯಾ ಕೆತ್ಯಾನ ಸೋಬಾನ[೮]

ಈ ಹಾಡಿನಲ್ಲಿ ಮಗಳ ಮೈನೆರದ ಸಡಗರ ಸಂಭ್ರಮದ ಬಗ್ಗೆ ತಿಳಿದುಬರುತ್ತದೆ. ತಾಯಿಗೆ ಮಗಳ ಮೈನೆರದ ಸಂಭ್ರಮ ಸುದ್ದಿ ಕೇಳಿ ಸಂತೋಷದಿಂದ ಅಳಿಯ ಬರುವ ಸೂಚನೆ ಮತ್ತು ಅಳಿಯನಿಗೆ ಬಂಗಾರ ಹಾಕುವುದು, ಕುಸುರಿ ಮಂಚದಲ್ಲಿ ಮಲಗಿಸುವ ಚಿತ್ರವಿದೆ. ಉಂಗುರ ಮತ್ತು ಮಂಚ ಪತ್ತಾರ ಮತ್ತು ಬಡಗಿಯಿಂದ ತಯಾರಾಗುವಂಥದ್ದು ಇದು ಬಾಲ್ಯವಿವಾಹ ಪದ್ಧತಿಯ ಸೂಚನೆ ನೀಡುತ್ತಿದ್ದರೂ ಅದಕ್ಕಿಂತ ಸಂಭ್ರಮಕ್ಕೆ ಕಾರಣವಾಗುವ ಆಭರಣ ಹಾಗೂ ಮಂಚ ಮಾಡಿಕೊಟ್ಟ ಅವರ ಸಂಸಾರದ ವಿಕಸನಕ್ಕೆ ಕಾರಣವಾಗುವ ಪತ್ತಾರ ಮತ್ತು ಬಡಗಿಯ ಸ್ಮರಣೆ ಬಹು ಮುಖ್ಯವಾದದ್ದು.

ಬಾಲಿ ತಾ ಮೈನೆರೆದು ಬಾಗಿಲದಾಗ ನಿಂತಾಳ
ಬಾಳೇಲಿ ಹಂಗ ಮಕ ಬಾಡೇ ಸೋ
ಬಾಳೇಲಿ ಹಂಗ ಮಕ ಬಾಡಿ ಅವರವ್ವ
ಬಾ ಬಾಲಿನಂದ ಕರದಾಳ ಸೋ

ಬಡಗ್ಯಾರ ಕರಸ್ಯಾರ ಹಿಡಿಹೊನ್ನು ಕುಡಸ್ಯಾರ
ಚಂದನದ ಗೊಂಬಿ ಕೆತಸ್ಯಾರ ಸೋ
ವಡ್ಡರನ ಕರಸ್ಯಾರ ಹಿಡಿ ಹೊನ್ನ ಕೂಡಸ್ಯಾರ
ಅಂಗಳದಾಗ ಬಾವಿ ತೋಡಿಸ್ಯಾರ ಸೋ'

ಈ ಹಾಡಿನಲ್ಲಿ ಮಗಳ ಮೈನೆರದು ಸುದ್ದಿ ಕೇಳಿ ತಾಯಿ ಮತ್ತು ಆ ಮನೆಯ ಹಿರಿಯರು ಮಗಳಿಗೆ ಬೇಕಾದ ಗೊಂಬೆ ಮತ್ತು ಸ್ನಾನಕ್ಕೆ ಬಾವಿ ತೋಡಲು ಎರಡು ವೃತ್ತಿಗಳಾದ ಬಡಗಿ ಮತ್ತು ವಡ್ಡರನ್ನು ಕರೆಯಿಸಿ ಕೆಲಸ ಮುಂದುವರಿಸುವಂಥದ್ದು. ಈ ಸೋಬಾನ ಪದದಲ್ಲಿ ಬಡಗಿ ಮತ್ತು ವಡ್ಡರು ಇಬ್ಬರು ಉಲ್ಲೇಖವಾಗಿದ್ದಾರೆ.

**ಜೋಗುಳ ಹಾಡುಗಳು**

ಜೋಗುಳ ಹಾಡುಗಳನ್ನು ಎಲ್ಲ ಸಮುದಾಯಗಳಲ್ಲೂ ಕೂಸುಗಳನ್ನು ರಮಿಸಿ ಮಲಗಿಸುವ ಸಲುವಾಗಿ ತಾಯಿಂದಿರಾಗಲಿ, ಕೂಸಿಗೆ ಸಂಬಂಧಿಸಿದ ಇತರ ಹೆಣ್ಣುಮಕ್ಕಳಾಗಲಿ, ಮಕ್ಕಳನ್ನು ತೊಟ್ಟಿಲಲ್ಲಾಗಲಿ ತೊಡೆಯ ಮೇಲಾಗಲಿ ಎದೆಗವಚಿಕೊಂಡಾಗಲಿ, ಆಡಿಸುತ್ತ ಹಾಡುವ ಹಾಡುಗಳಿಗೆ 'ಜೋಗುಳ ಹಾಡು' 'ಲಾಲಿಹಾಡು', 'ತೊಟ್ಟಿಲಹಾಡು' ಎಂದು ಕರೆಯುತ್ತಾರೆ. ಈ ಜೋಗುಳ ಹಾಡುಗಳಲ್ಲಿ ಎರಡು ಪ್ರಕಾರಗಳಿವೆ. ಒಂದು ನಾಮಕರಣ ಸಂದರ್ಭದಲ್ಲಿ ಹಿಮ್ಮೇಳ ಮುಮ್ಮೇಳ ಸಹಿತವಾದ ಹಾಡುಗಳು. ಇವುಗಳನ್ನು 'ಲೋಕಾಂತ ಜೋಗುಳ' ಕಳೆಂದು ಕರೆಯುತ್ತಾರೆ. ಇನ್ನುಳಿದ ಪ್ರಸಂಗಗಳಲ್ಲಿ ಕೂಸಿನೊಂದಿಗೆ ತಾಯಿ ಒಬ್ಬಂಟಿಗಳಾಗಿ ಹಾಡುವುದು 'ಏಕಾಂತ ಜೋಗುಳ'ವೆಂದು ಕರೆಯಬಹುದು.

ತೊಟ್ಟಿಲಲ್ಲಿರುವ ಕೂಸು ಅತ್ತರೆ ಅಡುಗೆ ಮನೆಯಲ್ಲೋ ಪಡಸಾಲೆಯಲ್ಲೋ ಅಂಗಳದಲ್ಲಿಯೋ ಇದ್ದ ತಾಯಿ ಮಗು ಅಳುವುದನ್ನು ಕೇಳಿ ಓಡೋಡಿ ಬರುತ್ತಾಳೆ. ತೊಟ್ಟಿಲ ತೂಗುತ್ತಾಳೆ. ಅದರ ಜೀಕಿನ ಶಬ್ದ ಅವಳ ಹಾಡುವ ಜೋಗುಳ ಪದದ ನಾದದಿಂದಾಗಿ ಲಯ ಪ್ರಾಪ್ತವಾಗುವುದು. ಇಡೀ ವಾತಾವರಣ ಅದೇ ನಾದಮಯ ಗುಂಗಿನಲ್ಲಿರುವಾಗಲೇ ಕೂಸು ಅಳುವುದನ್ನು ನಿಲ್ಲಿಸಿ ನಗುತ್ತ ನಗುತ್ತ ನಿದ್ರಾವಶವಾಗುವುದು. ಜೋಗುಳ ಪದವು ಕೂಸಿನ ನಿದ್ರೆಯೊಂದಿಗೆ ಕರಗಿಹೋಗುವುದು.

ಏನೆಂದು ಹೆಸರು ಇಡಬೇಕ ನೀ ಬಾಲಿ
ಶಿರಸಂಗಿ ಕಾಳಮ್ಮ ಅಂತ ಕರಿಯಲಿ ಜೋ ಜೋ
ಶಿರಸಂಗಿ ಕಾಳಮ್ಮ ಅಂದು ತೂಗಿರಿಯ ಜೋ ಜೋ

ಅವರ ಅತ್ತಿ ತಂದಾಳ ಮುತ್ತಿನ ಟಪ್ಪಗಿ

ಅವರ ಮಾವ ತಂದಾನ ಬೆಳ್ಳಿಯ ತೊಟ್ಟಿಲ ಜೋ ಜೋ

ಅದರಾಗ ಕಂದಾನಾಕಿ ಜೋ ಜೋ ಅನ್ನಿರೆ ಜೋ ಜೋ[೧೦]

ಈ ತೊಟ್ಟಿಲ ಹಾಡಿನಲ್ಲಿ ಸಾಮಾನ್ಯವಾಗಿ ಎಲ್ಲ ಸಮುದಾಯದವರು ಮಗುವಿಗೆ ನಾಮಕರಣ ಮಾಡುವ ಸಂದರ್ಭದಲ್ಲಿ ಮೊದಲು ತಮ್ಮ ಕುಲದೇವರ ಹೆಸರು ಕರೆಯುವುದು ಸಂಪ್ರದಾಯವಾಗಿದೆ. ಅದೇ ರೀತಿ ಪಾಂಚಾಳರು ತಮ್ಮ ಕುಲದೇವತೆಯಾದ ಕಾಳಮ್ಮನ ಹೆಸರು ಕರೆದು, ಅಷ್ಟೇ ಅಲ್ಲದೆ, ತೊಟ್ಟಿಲ ಹಾಡಿನ ಮೂಲಕ ಹಾಡಿದ್ದು ಕಾಣುತ್ತೇವೆ. ತಮ್ಮ ದೇವರ ಹೆಸರು ಹೇಳುವುದರ ಜೊತೆಗೆ ಮಗುವಿಗೆ ಅತ್ತೆ-ಮಾವ ಉಡುಗೊರೆ ತಂದಿರುವ ಬಗ್ಗೆ ವಿವರವಾಗಿ ಹಾಡಿದ್ದುಂಟು. ಇಲ್ಲಿ ಬೆಳ್ಳಿಯ ತೊಟ್ಟಿಲು ಎಂದು ಉಲ್ಲೇಖವಿದೆ. ಈ ಬೆಳ್ಳಿಯ ತೊಟ್ಟಿಲನ್ನು ಪಾಂಚಾಳರು ತಯಾರಿಸುತ್ತಾರೆ. ಈ ಹಾಡಿನಲ್ಲಿ ಪಾಂಚಾಳರ ವೃತ್ತಿ ಮತ್ತು ಅವರ ಶ್ರಮದ ಬಗ್ಗೆ ಉಲ್ಲೇಖ ಇರುವುದು.

'ಕಬ್ಬಿಣದ ತೊಟ್ಟಿಲಕ ಜಗಮಿಣಿಗಳಾರೆ

ಇಬ್ಬರು ತೂಗಿದರೆ ಮಲಗುವನು

ಇಬ್ಬರು ತೂಗಿದರೆ ಮಲಗುವನೆ

ಲಿಂಗನಬಂಡಿ ಮೌನಯ್ಯನೆಂದು ತೂಗಿರೆ[೧೧]

ಈ ಹಾಡಿನಲ್ಲಿ ಕಬ್ಬಿಣದ ತೊಟ್ಟಿಲು ಎಂಬ ಪದವಿದೆ. ಇದನ್ನು ಕಂಬಾರರು ತಯಾರಿಸುತ್ತಿದ್ದರು. ಈ ಹಾಡಿನಲ್ಲಿ ಕಂಬಾರರ ಶ್ರಮದ ಬಗ್ಗೆ ಉಲ್ಲೇಖವಿದೆ. ಪಾಂಚಾಳರ ಆರಾಧ್ಯ ದೇವರಾದ ಮೌನೇಶ್ವರ ಅಂದ ತಕ್ಷಣ ಈಗಿನ ಕಾಲದಲ್ಲಿ ನೆನಪು ಆಗುವುದೇ ತಿಂಥಿಣಿ. ಆದರೆ ಈ ಹಾಡಿನಲ್ಲಿ ಲಿಂಗನಬಂಡಿ ಎಂಬ ಉಲ್ಲೇಖವಿದೆ. ಮೌನೇಶ್ವರರ ತಂದೆ-ತಾಯಿ ಮೂಲತಃ ಕಂಬಾರ ವೃತ್ತಿಯಾಗಿದ್ದರಿಂದ ಮೌನೇಶನಿಗೆ ಕಬ್ಬಿಣದ ತೊಟ್ಟಿಲ ಮಾಡಿರಬೇಕು. ಈ ತೊಟ್ಟಿಲದಲ್ಲೇ ಮೌನೇಶ್ವರ ನಾಮಕರಣ ಮಾಡಿರಬಹುದು. ಆದಕಾರಣ ಆ ಲಿಂಗನಬಂಡಿಯಲ್ಲಿ ಪಾಂಚಾಳರ ಮಹಿಳೆಯರು ಇವತ್ತಿಗೂ ಇಂತಹ ತೊಟ್ಟಿಲ ಹಾಡುಗಳನ್ನು ಹಾಡುತ್ತಾರೆ.

ಬಂಗಾರದ ಸುತ್ತಾರಗ ಸಿಂಗಾರದ ಕಾಡಿಗಿ

ತೀಡಿ ತೀಡಿ ಹಚ್ಚಿದರೆ ಕಾಡಿ ಕಾಡಿ ಅಳುತಾನ ಜೋ ಜೋ

ಬೆಳ್ಳಿಯ ಬಟ್ಟಲದಾಗ ಪರಡಿ ಪಾಯಸ ಮಾಡಿ

ತುತ್ತು ಮಾಡಿ ಉಣಸಿದರ ಹಟ ಮಾಡಿ ಅಳುತಾನೆ ಜೋ ಜೋ[೧೨]

ಬಂಗಾರದಂತಹ ಮಗುವಿಗೆ ಸಿಂಗಾರ ಅಂದ ಚಂದವಾಗಿ ತಾಯಿ ತನ್ನ ಮಗುವಿಗೆ ಸಿಂಗಾರ ಮಾಡಿದರೆ ತನ್ನ ಮಗುವಿನ ಬದಲಾವಣೆ ಹೇಗೆ ಇರುತ್ತದೆ ಎಂಬುದು ತಾಯಿಯ ವರ್ಣನೆಯಾಗಿದೆ. ಬೆಳ್ಳಿಯ ಬಟ್ಟಲದಲ್ಲಿ ತನ್ನ ಮಗುವಿಗೆ ಊಟ ಮಾಡಿಸುವಂತದ್ದು. ಹಾಡಿನಲ್ಲಿ ಬಂಗಾರ, ಬೆಳ್ಳಿ, ಎರಡು ಪದಗಳಿವೆ. ಇವುಗಳನ್ನು ಪಾಂಚಾಳರಲ್ಲಿ ಒಬ್ಬರಾದ ಪತ್ತಾರರು ತಮ್ಮ ವೃತ್ತಿಯಲ್ಲಿ ತಯಾರಿಸುವಂತಹ

ವಸ್ತುಗಳು. ಇಲ್ಲಿ ಪತ್ತಾರರು ತಮ್ಮ ಮಗುವಿಗೆ ಬೆಳ್ಳಿಯ ಬಟ್ಟಲು ಮಾಡಿ ಕೊಟ್ಟಿರುವ ಬಗ್ಗೆ ಉಲ್ಲೇಖವಿದೆ.

**ಸೀಗವ್ವನ ಹಾಡುಗಳು**

ಆಶ್ವಯು ಮಾಸದಲ್ಲಿ ಹೊಲಗದ್ದೆಗಳ ಕೆಲಸಗಳಿಗೆ ಸ್ವಲ್ಪ ಬಿಡುವು ಇರುವ ಕಾರಣ ಹೆಣ್ಣುಮಕ್ಕಳು ಬಿಡುವಾಗಿರುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಪಾಂಚಾಳರ ಮನೆಯಲ್ಲಿ ಸೀಗವ್ವನನ್ನು ಕೂಡಿಸುವ ಸಂಪ್ರದಾಯವಿದೆ. ಊರ ಬಡಿಗೇರ ಕಡೆಯಿಂದ ಕಟ್ಟಿಗೆಯ ಮೂರ್ತಿ ಇಲ್ಲವೇ ಕುಂಬಾರನ ಮನೆಯಿಂದ ಮಣ್ಣಿನ ಸೀಗವ ಮತ್ತು ಮಕ್ಕಳನ್ನು ಮಾಡಿಸಿಕೊಂಡು ಬರುತ್ತಾರೆ. ಸೀಗುವ ಮತ್ತು ಅಕಿನ ಮಕ್ಕಳನ್ನು ಪಾಂಚಾಳರ ನಡುಮನೆಯ ಮಾಡದಲ್ಲಿ ಸೀಗವನನ್ನು ಕೂಡಿಸುತ್ತಾರೆ.

ನಮ್ಮ ಗ್ರಾಮೀಣ ಹೆಣ್ಣುಮಕ್ಕಳ ಅಭಿಪ್ರಾಯದಂತೆ ಸೀಗವ ಬಡವರ ಮಗಳು ಎಂದು ಕಾಡಿನಲ್ಲಿ ಬೆಳೆದ ಆವರೆ ಹೂ ಮತ್ತು ಹೊಲದಲ್ಲಿ ಬೆಳೆದ ಕಾರೆಳ್ಳು ಗುರೆಳ್ಳು ಹೂವಿನಿಂದ ಸೀಗವನನ್ನು ಅಲಂಕರಿಸುತ್ತಾರೆ. ಸಕಲ ಜೀವಗಳ ಸೃಷ್ಟಿಗೆ ಕಾರಣಕರ್ತನಾದ ಶಿವನ ಅರ್ಧಾಂಗಿಯಾದ ಸೀಗವನಿಗೆ ಗ್ರಾಮೀಣ ಮಹಿಳೆಯರು ನಮನಗಳನ್ನು ಸಲ್ಲಿಸುತ್ತಾರೆ. ಸೀಗವನಿಗೆ ಆರತಿ ಮಾಡಿ ಬಡಿಗೇರ ಕಟ್ಟಿಗೆ ಕುಳಿತು ಸೀಗವನ ಪದಗಳನ್ನು ಹಾಡುತ್ತಾರೆ.

ಕೆತ್ತಿದ ಪಿಲ್ಲೆ ಕಾಲಲಿಟ್ಟು
ನಾಕಡಾಬು ನಡವಿಗಿಟ್ಟೆ
ಹಲಗಿ ಸಿಂಗಿತಕೊಂಡು
ಹರುಷದಿಂದ ಕರಿಯಬಂದೆ
ಮನಿಗೆ ನಡಿಯಮ್ಮ
ಸೀಗಿ ಮನಿಗೆ ನಡೆಯಮ್ಮ
ಕಂಚಿನ ಕಳಸ ಥುಂಬಿನಿಟ್ಟು
ಕೆಂಚನಾಂಮ ದೈವರು
ಸತಿಪತಿ ಹರುಷಲಿಂದೆ ಕರಿಯಬಂದೆ.
ಪೀತಾಂಬರ ಸೀರೆನುಟ್ಟು
ಜರತಾರಿ ಕುಬ್ಬಸ ತೊಟ್ಟು
ಬಂಗಾರ ಡಾಬು ನಡುವಿಗಿಟ್ಟು
ಹರುಷದಿಂದ ಕರಿಯಬಂದೆ
ಮನಿಗೆ ನಡಿಯಮ್ಮ ಸಿಗಿ ಮನಿಗೆ ನಡೆಯಮ್ಮ[೧]

ಓಣಿಯ ಗೆಳತಿಯರೆಲ್ಲರು ಸೀಗವನಿಗೆ ಹೊಸ ಸೀರೆಯುಟ್ಟು ಒಡವೆ ಆಭರಣಗಳನ್ನು ಧರಿಸಿಕೊಂಡು ಸೀಗವನ ಕೂಡಿಸಿದ ಮನೆಗೆ ಸೀಗವನ ಕರೆಯಲು ಹೋಗುತ್ತಾರೆ.

ದೀಪದಾರುತಿ ಬೆಳಗುತ್ತ ಹಾಡುತ್ತ, ಬಡಗಿ, ಅಕ್ಕಸಾಲಿಗ ಹಾಗೂ ಕಂಚುಗಾರರ ಉಲ್ಲೇಖಗಳು ಈ ಹಾಡುಗಳಲ್ಲಿರುವುದು ಗಮನಾರ್ಹ.

**ಗೌರವ್ವನ ಪದಗಳು**

ಶಿವನ ಮಡದಿ ಪಾರ್ವತಿ ಎಂದೇ ಗೌರಿಯನ್ನು ಕರೆಯುತ್ತಾರೆ ಗೌರವನನ್ನು ಉತ್ತರ ಕರ್ನಾಟಕದಲ್ಲಿ ಪಾಂಚಾಳರ ಮನೆಯಲ್ಲಿ ಗೌರಿಯನ್ನು ಕೂಡಿಸಿ ಪೂಜಿಸಿದ್ದು ನನ್ನ ಕ್ಷೇತ್ರಕಾರ್ಯದಲ್ಲಿ ಮತ್ತು ನಮ್ಮ ಊರ ಸುತ್ತ ಮುತ್ತಲಿನ ಊರಿನಲ್ಲಿ ಇಟ್ಟಿರುವುದನ್ನು ಚಿಕ್ಕಂದಿನಿಂದಲೇ ಗಮನಿಸುತ್ತಾ ಬಂದಿದ್ದೇನೆ. ಕಮತಗಿ, ಬಾದಾಮಿ, ತೊಗುನಸಿ, ಶಿವನಗುತ್ತಿ, ಹುನಗುಂದ, ಕ್ಯಾದಿಗುಂಪ, ಬೂದಿಹಾಳ ಮುಂತಾದವು ಗೌರವನ ಒಂಬತ್ತು ದಿನಗಳವರೆಗೆ ಕೂಡಿಸಿದರೂ ಹಾಡುವುದು ಐದುದಿನಗಳು ಮಾತ್ರ, ಪಾಂಚಾಳರ ಮನೆಯ ಪಡಸಾಲೆಯ ಒಂದು ಮಾಡದಲ್ಲಿ ಕೂಡಿಸುತ್ತಾರೆ. ಅದಕ್ಕೆ ಗೌರಿ ಮಾಡವೆಂದೇ ಕರೆಯಲಾಗುತ್ತದೆ. ಈ ಗೌರವನನ್ನು ಬಡಿಗೇರ ತಯಾರಿಸುತ್ತಾರೆ. ಗೌರವನ ಕಟ್ಟಿಗೆಯಿಂದ ತಯಾರಿಸಿ ಮಕ್ಕಳನ್ನು ಮಾತ್ರ ಮಣ್ಣಿನಿಂದ ಮಾಡಿರುತ್ತಾರೆ. ಗೌರವ ಪಾಂಚಾಳರ ಮನೆಯಲ್ಲಿ ಹುಟ್ಟಿ ಅಲ್ಲೆ ಪೂಜೆಗೊಳ್ಳುದು ಹಲವಾರು ಹಳ್ಳಿಗಳಲ್ಲಿ ಕಂಡುಬರುತ್ತದೆ.

ಕೆಲವೊಂದು ಗ್ರಾಮಗಳಲ್ಲಿ ಶಿವ, ಗೌರಿ, ಗಣಪತಿ ಒಂದೇ ಪೀಠದಲ್ಲಿ ಕುಳಿತಿರುವಂತೆ ಬಡಿಗೇರ ಮನೆಯಿಂದ ಮಾಡಿಸಿದ ಕಟ್ಟಿಗೆ ಮೂರ್ತಿ ತಂದು ಇಟ್ಟು ಹೂ, ಅರಿಶಿನ, ಕುಂಕುಮದಿಂದ ಪೂಜಿಸಿ ನಂತರ ರಾತ್ರಿ ಓಣಿಯ ಎಲ್ಲ ಸಮುದಾಯದ ಮಹಿಳೆಯರು ಮಕ್ಕಳು ಸಕ್ಕರೆ ಆರತಿ, ಅವರೆ ಹೂ, ಚೆಂಡುಹೂ, ಆನ್ನಿ ಹೂ ತಂದು ಬಡಿಗೇರ ಮನೆಯಲ್ಲಿ ಇರುವ ಗೌರವನಿಗೆ ಮತ್ತು ಬೀಸುವಕಲ್ಲು ಒರಳಿಗೆ ಆರತಿ ಮಾಡಿ ಹೂ ಏರಿಸಿ ಗೌರವನ ಮೇಲೆ ಪದಗಳನ್ನು ಹಾಡುವುದನ್ನು ಗಮನಿಸಿದ್ದೇನೆ.

ಹುತ್ತದ ಮಣ್ಣು ತಂದು
ತೀಡಿ ಬಸವಣ್ಣನ ಮಾಡಿ
ಹೋರಿ ಎಂಬುದೇನ ಬಸವಯ್ಯಕೋಲ
ಕುದರಿ ಕುದರಿ ಮುಂದ
ಕುದರಿ ಮ್ಮಗ ಮುಂದ
ಊರ ಬಡಿಗೇರ ಮಗ ಮುಂದ ಕೋಲ
ಊರ ಬಡಿಗೇರ ಮಗ ಮುಂದ ವೀರೇಶ
ಕುದರಿ ಮ್ಯಾಲೆ ಗೌರಿ
ಕಳಿವ್ಯಾನ ಕೋಲ
ಕಟ್ಟಿ ಕಟ್ಟಿಯ ಚೆಂದ
ಕಟ್ಟಿಯ ಕಲ್ಲವು ಚಂದ
ಕಟ್ಟಿ ಮ್ಯಾಗ ಇರು ಪತ್ತಾರ ಚಂದ
ಕಟ್ಟಿ ಕಟ್ಟಿಯ ಮ್ಯಾಗಿರು ಪತ್ತಾರ
ಬಲುಚಂದ ವೀರಭದ್ರ
ಹೊಟ್ಟಿಲ ಮ್ಯಾಗ ಆಡೂ ಮಗ ಚಲುವ ಕೋಲ[೨೪]

ಗೌರಿಯ ಹುಣ್ಣಿಮೆಯ ಮುಂಚಿತವಾಗಿ ಹುತ್ತದ ಮಣ್ಣು ತಂದು ಬಸವಣ್ಣ ಮತ್ತು ಗೌರಿ ಹಾಗೂ ಗೌರಿ ಮಕ್ಕಳನ ತಯಾರಿಸಿ ಪಾಂಚಾಳರ ಮನೆಯಲ್ಲಿ ಕೂರಿಸಿ ಆರತಿ ಮಾಡುತ್ತಾರೆ. ಗೌರಿ ಹುಣ್ಣಿಮೆ ಮುಗಿದ ಮರುದಿನ ಗೌರಿಯನ್ನು ಹೊಳೆಗೆ ಕಳಿಸುತ್ತಾರೆ. ಆ ಸಂದರ್ಭದಲ್ಲಿ ಎಲ್ಲ ಸಮುದಾಯದ ಮಹಿಳೆಯರು ಪುರುಷರು ಪಾಲುಗೊಳ್ಳುವಂತದ್ದು, ಗೌರಿಯನ್ನು ಕಳಸಾಕ ಆ ಊರಿನ ಬಡಿಗೇರ ಮಗ ಮುಂದೆ ಇರುವಂತೆ ಈ ಹಾಡಿನಲ್ಲಿ ತಿಳಿಯುತ್ತದೆ. ಕಾರಣ ಗೌರವ ಬಡಿಗೇರ ಮನೆಯಲ್ಲಿಯೇ ಹುಟ್ಟಿ ಅವರ ಮನೆಯಲ್ಲೇ ಪೂಜೆಗೊಳ್ಳುತ್ತಾಳೆ. ಅದೇ ಕಾರಣಕ್ಕೆ ಆ ಊರ ಬಡಿಗೇರ ಮಗ ಮುಂದೆ ಇರುವಂತದ್ದು.

ಈ ಹಾಡಿನಲ್ಲಿ ಪತ್ತಾರರ ಬಗ್ಗೆ ವರ್ಣನೆ ಇದೆ. ಪತ್ತಾರ ತನ್ನ ಬಂಗಾರದ ಅಂಗಡಿಯಲ್ಲಿ ಕುಳಿತು ಬಂಗಾರ ಕೈಯಲ್ಲಿ ಹಿಡಿದು ಅವರ ಅಗ್ಗಿಷ್ಟಿಕೆ ಬೆಂಕಿಯ ಮುಂದೆ ಕುಳಿತು ಅಥವಾ ಚಿಕ್ಕದಾದ ಚಿಮಣಿಯ ಸಣ್ಣ ದೀಪದ ಮುಂದೆ ಕುಳಿತು ಬಂಗಾರ ಕಾಯಿಸುತ್ತಿರುತ್ತಾನೆ. ಆ ಬಂಗಾರದ ಒಳಪು ಪತ್ತಾರನ ಮುಖಕ್ಕೆ ಬೀಳುತ್ತದೆ. ಆಗ ಅವನು ಬಲುಚಂದವಾಗಿ ಕಾಣುತ್ತಾನೆ. ನೋಡುವುದಕ್ಕೆ ಎನ್ನುವುದು ನಮ್ಮ ಜನಪದ ಮಹಿಳೆಯರು ಪತ್ತಾರನ ಬಗ್ಗೆ ಹಾಡಿನಲ್ಲಿ ವರ್ಣಿಸಿದ್ದಾರೆ. ತಾಯಿ ತನ್ನ ಮಗು ತನ್ನ ಹೊಟ್ಟೆಯ ಮೇಲೆ ಆಡುವಂತಹ ಮಗು ಬಲು ಚಂದ ಎಂದು ಮಗುವಿನ ಪ್ರೀತಿ ವಾತ್ಸಲ್ಯ ನಮ್ಮ ಮಹಿಳೆಯರ ಹಾಡಿನ ಮೂಲಕ ವ್ಯಕ್ತಪಡಿಸಿದ್ದು ಇಲ್ಲಿ ಗಮನಾರ್ಹವಾಗಿದೆ.

ಗೌರವನನ್ನು ಬಡಿಗೇರ ಅಥವಾ ಪತ್ತಾರರು ಮಣ್ಣು ಇಲ್ಲವೆ ಕಟ್ಟಿಗೆಯಲ್ಲಿ ಮಾಡಿಕೊಡುತ್ತಾರೆ. ಅದಕ್ಕಾಗಿ ಅವರಿಗೆ ಖುಸಿ(ಧಾನ್ಯರೂಪದಲ್ಲಿ) ಕೊಡಲಾಗುತ್ತದೆ. ಗಣಪತಿ ಕಾಮವನ್ನು ಇವತ್ತಿಗೂ ಪಾಂಚಾಳರೇ ರಚಿಸಿಕೊಡುವ ವಾಡಿಕೆ ಗ್ರಾಮಾಂತರ ಪ್ರದೇಶದಲ್ಲಿದೆ. ಸೀಗಿ, ಗೌರಿ ಹಬ್ಬಗಳು ಸ್ತ್ರೀ ಪ್ರಧಾನ ಹಬ್ಬಗಳಾಗಿದ್ದರೂ ಸೀಗಿ ಗೌರಿ ರಚನೆಯಲ್ಲಿ ಪಾಂಚಾಳರು ಪ್ರಧಾನ ಪಾತ್ರ ವಹಿಸುವುದು ಇಲ್ಲಿನ ವಿಶೇಷತೆಯಾಗಿದೆ.

**ಕೋಲಾಟದ ಹಾಡುಗಳು**

ಕೋಲಾಟ ಒಂದು ಮುಖ್ಯ ಜನಪದ ಕಲೆ. ಸಾಹಿತ್ಯ, ಸಂಗೀತಗಳನ್ನೊಳಗೊಂಡ ಇದು ಆಕರ್ಷಕ ನೃತ್ಯ ಕೂಡ. ಇದು ಹಳ್ಳಿಗರಿಗೆ ಸುಲಭ ಸಾಧ್ಯವೂ ವೈವಿಧ್ಯಮಯವೂ ಆದ ಒಂದು ಪ್ರಮುಖ ಮನೋರಂಜನಾ ಕ್ರಿಯೆ. ಸಾಮಾನ್ಯವಾಗಿ ಪ್ರತಿ ಹಳ್ಳಿಗಳಲ್ಲೂ ಈ ಕೋಲಾಟ ಇದ್ದೇ ಇರುತ್ತದೆ. ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಬೆಳ್ಳುಹುಬ್ಬಿ ಗ್ರಾಮದಲ್ಲಿ ಈ ಕಲೆ ಈಗಲೂ ಮುಂದುವರಿದಿದೆ. ಮಾನಪ್ಪ ಬಡಿಗೇರ ಇವರು ಆ ಊರಿನ ಕೋಲಾಟ ಕಲಿಸುವ ನಾಯಕನಾಗಿದ್ದಾರೆ. ಅಷ್ಟೆ ಅಲ್ಲದೆ, ಆ ಮೇಳದಲ್ಲಿ ತಾನು ಕುಣಿಯುತ್ತಾನೆ. ಇವರು ಕೋಲಾಟದಲ್ಲಿಯೇ ಹೆಸರು ಮಾಡಿದ್ದಾರೆ. ಹಬ್ಬ-ಹರಿದಿನಗಳಲ್ಲಿ ಮದುವೆ ಉತ್ಸವಗಳಲ್ಲಿ ವಿಶೇಷವಾಗಿ ಶಿವರಾತ್ರಿಯ ದಿನ ಬಿಜಾಪುರದ ಶಿವಗಿರಿಯ ಶಿವನ ಮೆರವಣಿಗೆಯಲ್ಲಿ ಈ ಕೋಲಾಟ ಪ್ರದಸರ್ಶಿಸುತ್ತಾರೆ.

ಮಾನಪ್ಪ ಬಡಿಗೇರ ಅವರು ತಮ್ಮ ಊರಿನಲ್ಲಿ ನಡೆಯುವಂತಹ ಗಣೇಶ ಚತುರ್ಥಿ, ಶ್ರಾವಣ, ಹೋಳಿ ಹಬ್ಬಗಳಲ್ಲಿ ಕೋಲಾಟ ಆಡುತ್ತಾರೆ. ಇವರು ತಮಗೆ ಬೇಕಾದ ಕೋಲುಗಳನ್ನು ತಾವೇ

ತಯಾರಿಸಿಕೊಳ್ಳುತ್ತಾರೆ. ಇವರ ವೇಷಭೂಷಣಗಳು ಬಿಳಿದೋತರ, ಬಿಳಿ ಅಂಗಿ ತಲಗೆ ಬಣ್ಣದ ವಸ್ತ್ರ ನಡುವಿಗೆ ವಸ್ತ್ರ, ಕಾಲಿಗೆ ಗೆಜ್ಜೆ ಕಟ್ಟಿ ಹೆಜ್ಜೆಗೆ ತಕ್ಕಂತೆ ಕೋಲು ಒಬ್ಬರಿಗೊಬ್ಬರು ಬಡಿಯುತ ಕುಣಿಯುತ್ತಾರೆ. ಈ ಮೇಳದಲ್ಲಿ ಒಟ್ಟು ಹತ್ತು ಜನ ಇರುತ್ತಾರೆ. ಮಾನಪ್ಪ ಬಡಿಗೇರ ಇವರು ತಾಳ ಹಾಕುತ್ತಾ ಕೋಲಾಟ ಕಲಿಸುತ್ತಾರೆ. ಸಂಗಮೇಶ ಬಡಿಗೇರ ಇವರು ಈ ಮೇಳದಲ್ಲಿ ತಬಲ ಬಾರಿಸುತ್ತಾರೆ. ಇನ್ನು ಎಂಟು ಜನ ಕೋಲಾಟವಾಡುತ್ತಾರೆ. ಜನಪದ ಗೀತೆಗಳು ಹಿಗ್ಗು ಕುಗ್ಗುಗಳನ್ನು ಕೋಲಾಟ ಹಾಡುಗಳಲ್ಲಿ ಕಾಣಬಹುದು. ಮೊದಲು ಕೋಲಾಟ ಹಾಡುಗಳನ್ನು ಪ್ರಾರ್ಥನೆಯೊಂದಿಗೆ ಪ್ರಾರಂಭಿಸುವರು.

"ಶರಣೆನ್ನಿರಣ್ಣಯ್ಯ ಶರಣೆನ್ನಿರೋ
ಹುಟ್ಟಿ ಬರುವ ಚಂದ್ರಾಗೆ ಶರಣೆನ್ನಿರೊ ಶರಣೆನ್ನಿರೊ
ಶಿವಗಿರಿ ಶಿವನಿಗೆ ಶರಣೆನ್ನಿರೋ
ತಾಯಿ ದಾನಮ್ಮನಿಗೆ ಶರಣೆನ್ನಿರೋ
ತಾಯಿ ದ್ಯಾಮಮ್ಮಗ ಶರಣೆನ್ನಿರೋ
ತಾಯಿ ಕಾಳಮ್ಮಗ ಶರಣೆನ್ನಿರೋ
ಕಲಿಸಿದ ಗುರುವಿಗೆ ಶರಣೆನ್ನಿರೋ
ಕೈಯೊಳಗಲ ಕಡ್ಡಿಗೆ ಶರಣೆನ್ನಿರೋ
ಕಾಲುಗಳ ಗೆಜ್ಜೆಗೆ ಶರಣೆನ್ನಿರೋ
ತಂದೆ-ತಾಯಿಗಳಿಗೆ ಶರಣೆನ್ನಿರೋ
ಸೋಮಾರ ಸ್ವಾಮಿಗೆ ಶರಣೆನ್ನಿರೋ
ವಿದ್ಯೆ ಸರಸ್ವತಿಗೆ ಶರಣೆನ್ನಿರೋ"[೫]

ಹೀಗೆ ಮೊದಲು ಶಿವನಿಗೆ ಶರಣು ಹೇಳುವುದು ಮತ್ತು ಗ್ರಾಮ ದೇವತೆಗಳನ್ನು ಸ್ಮರಿಸಿಕೊಂಡು ಹಾಗೂ ತಂದೆ-ತಾಯಿಯನ್ನು ಸ್ಮರಿಸಿಕೊಂಡು ಈ ಹಾಡಿನ ಮೂಲಕ ತಿಳಿಸುತ್ತಾರೆ.

ಬನ್ನಿ ಹಬ್ಬದಲ್ಲಿ ಹಾಡುವಂತಹ ಹಾಡು :

ಬನ್ನಿ ಮುಡಿಯೋಣು ಬಾರ ಕೋಲು ಕೋಲ
ಚಿನ್ನ ತರುವೋಣು ಬಾರ ಕೋಲು ಕೋಲ
ಊರ ಆಗಸಿಯ ದಾಟಿ ಮಲ್ಲ ಗುಡಿಯನು ಸೇರಿ
ಶಿವಣಿಗೆ ಬನ್ನಿ ದಾನಮ್ಮ ಮಾತೆಗೆ ಬನ್ನಿ
ಚಿನ್ನದ ಕೈಕಡಗ ಚನ್ನೇರು ಇಟಗೊಂಡು
ಚಿನ್ನದಾಭರಣ ನಡಬಾಗಿ ಕೋಲು ಕೋಲು
ಗೆಲ್ಲೆ ಗೆಜ್ಜೆ ಹಾಕಿ ಗುಜ್ಜೇರು ನಾರೇರು ಕುಣಿದಾರ
ವಜ್ಜರ ವಡ್ಯಾಣ ಘಲ್-ಘಲ್ ಕೋಲು ಕೋಲ

ನಾವು ಕುಣಿಯೋಣ ಬನ್ನಿ ಹ್ಯಾಂವ ಮರಿಯೋಣ ಬನ್ನಿ

ಜೀವ ಒಂದಾಗಿ ಇರಬನ್ನಿ ಕೋಲು ಕೋಲ[೧೬]

ಊರ ಅಗಸಿ ದಾಟಿ ಮಲ್ಲದೇವರ ಗುಡಿಗೆ ಹೋಗಿ ಬನ್ನಿ ಮುಡಿಯುವ ಗ್ರಾಮದೈವ ಗಂಗಾದೇವಿ, ದಾನಮ್ಮ, ದ್ಯಾಮಮ್ಮ, ಕಾಳಮ್ಮ ಶಿವನಿಗೆ ಬನ್ನಿ ಕೊಟ್ಟು ಬನ್ನಿ ಹಬ್ಬದ ಸಂಭ್ರಮದಾಚರಣೆ ಮಾಡಿಕೊಳ್ಳುವ ಸಂದರ್ಭ ಈ ಹಾಡಿನ ಮೂಲಕ ಕಂಡು ಬರುತ್ತದೆ. ಪಾಂಚಾಳರು ಕೋಲಾಟದಲ್ಲಿ ಸ್ವತಃ ಕಲಾವಿದರಾಗಿ ಕೋಲುಗಳನ್ನು ತಯಾರಿಸಿ ಕೊಡುವವರಾಗಿ ಕೋಲಾಟದ ಕತೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ವಿಶಿಷ್ಟ ಸಂಗತಿಯಾಗಿದೆ.

**೪.೨. ಕಥನ ಪ್ರಧಾನ ಪ್ರಕಾರಗಳು**

ಪಾಂಚಾಳರಲ್ಲಿ ಕಾಣಸಿಗುವ ಕಥಾಸಾಹಿತ್ಯವು ಸಹ ಇವರ ಬದುಕಿನ ಪ್ರಧಾನ ಭಾಗವಾಗಿದೆ. ಜನಪದ ಕಥೆಗಳಲ್ಲಿ ವ್ಯಕ್ತಿಯ ಕಥೆಗಳು, ಪಾಂಚಾಳರ ವೃತ್ತಿಗೆ ಸಂಬಂದಪಟ್ಟ ಕಥೆಗಳನ್ನು ಚರ್ಚಿಸಲಾಗಿದೆ. ಬಿಡುವಿಲ್ಲದ ದುಡಿಮೆಯ ಜೊತೆ ಜೊತೆಗೆ ತಮ್ಮ ಶ್ರಮಿಕ ಬದುಕಿನ ಕಷ್ಟ ಸುಖಗಳನ್ನು ಅಲ್ಪವಾದರೂ ಹಗುರ ಮಾಡಿಕೊಳ್ಳುವ ಬಗೆಯನ್ನು ಇತರ ಸಮುದಾಯಗಳಂತೆ ಪಾಂಚಾಳರು ಕಂಡುಕೊಂಡಿದ್ದಾರೆ. ದೊರೆತ ಕಥೆಗಳನ್ನು ಕೆಳಗಿನಂತೆ ಚರ್ಚಿಸಲಾಗಿದೆ.

**೧. ವೃತ್ತಿಯ ಕಥೆಗಳು**

ಕಾಳಿಕಾದೇವಿ ಕಮ್ಮಾರರ ಕುಲದೇವತೆಯಾದ ಪ್ರಸಂಗವನ್ನು ಈ ಕಥೆ ಹೇಳುತ್ತದೆ.

ಬಹು ವರ್ಷಗಳ ಹಿಂದೆ ಕುಲುಮೆಯಲ್ಲಿ ಕಬ್ಬಿಣ ತಯಾರಿಸುತ್ತಿದ್ದರು. ಹೀಗೆ ಕಬ್ಬಿಣ ತಯಾರಿಸುವಾಗ ಒಂದು ದಿನ ಎಷ್ಟು ಪ್ರಯತ್ನಿಸಿದರೂ ತಿದಿಯನ್ನು ಒತ್ತಿದರೂ ಕಬ್ಬಿಣದ ಅಡುಗೆಯೇ ಇಳಿಯಲಿಲ್ಲ ಯಾಕೆ? ಅಡುಗೆ ಬರುತ್ತಿಲ್ಲವೆಂದು ಕುಲುಮೆಯಲ್ಲಿ ಕಮ್ಮಾರರು ಚಿಂತಾಕ್ರಾಂತವಾಗಿ ಕುಳಿತಿದ್ದಾಗ ಒಮ್ಮೆಂದೊಮ್ಮಗೆ ಕುಲುಮೆ ಸಿಡಿಯುವಂತೆ ಶಬ್ದ ಹೊರಟು ಧೂಮಿಗೂ ಆಕಾಶಕ್ಕೂ ಏಕವಾಗಿ ಕಪ್ಪನೆಯ ಕಾಳಿಯು ನಿಂತಳು. ಕಾಳಿಯ ಈ ಅವತಾರವನ್ನು ನೋಡಿದ ಕಮ್ಮಾರರೆಲ್ಲ ಹೆದರಿ ದೂರಕ್ಕೆ ಓಡಲು ಪ್ರಯತ್ನಿಸುತ್ತಾರೆ. ಆಗ ಕಾಳಿಯು ದೂರ ಓಡುವ ಅವಶ್ಯವಿಲ್ಲ. ಇದು ನನ್ನ ವಾಸಸ್ಥಾಬವೆಂದು ತಿಳಿಸಿ ಅಲ್ಲಿಯೇ ನೆಲೆ ನಿಲ್ಲುತ್ತಾಳೆ. ಅಂದಿನಿಂದ ಕಮ್ಮಾರರೆಲ್ಲ ಆಕೆಯ ನೆರಳಿನಲ್ಲಿಯೇ ಬದುಕುತ್ತಾರೆ. ಆಕೆಯ ಸುತ್ತ ಬದುಕುವ ಅವರು ಎದುರು ಭಾಗಕ್ಕೆ ಮಾತ್ರ ತಡೆಗೋಡೆಯನ್ನು ನಿರ್ಮಿಸಲಾರರು. ಯಾಕೆಂದರೆ ಆಕೆಯ ಕಣ್ಣಿನ ದೃಷ್ಟಿ ತುಂಬಾ ಭೀಕರವಾದುದು. ಒಮ್ಮೊಮ್ಮೆ ಆಕೆಯ ಕಣ್ಣಿನ ದೃಷ್ಟಿಗೆ ಬಿದ್ದ ಮನುಷ್ಯನೊಬ್ಬ ಕರಕಲಾಗುತ್ತಾನೆ.[೧೭] ಅದೇ ಕರಕಲ ಇದ್ದಿಲಾಗಿ ಇಂದು ಬಳಕೆಗೊಳ್ಳುತ್ತದೆ ಎನ್ನುವುದು ಐತಿಹ್ಯ.

**೨. ಬಂಗಾರದ ಮೇಕೆ**

ರಾಜಕುಮಾರಿಯ ಮದುವೆ ಪ್ರಸಂಗ ಹಾಗೂ ಅಕ್ಕಸಾಲಿಗನ ವೃತ್ತಿ ಮತ್ತು ಅವನ ಜಾಣತನದ ಬಗ್ಗೆ ಈ ಕಥೆ ಹೇಳುತ್ತದೆ.

ಒಂದಾನೊಂದು ಕಾಲದಲ್ಲಿ ಒಬ್ಬ ರಾಟಜನಿದ್ದನು. ಅವನಿಗೊಬ್ಬಳು ಚಿಕ್ಕ ಮಗಳಿದ್ದಳು. ಅವಳ ಸಂರಕ್ಷಣೆಗೆಂದು ಒಬ್ಬ ದಾದಿ ಇದ್ದಳು. ಒಂದು ದಿನ ದಾದಿ ರಾಜನ ಮಗಳ ಮದುವೆಯ ಪ್ರಸ್ತಾಪವನ್ನು

ರಾಜನ ಬಳಿ ಮಾಡುತ್ತಾಳೆ. ರಾಜನಿಗೆ ಈ ವಿಚಾರ ಹೊಳೆದಿರಲಿಲ್ಲ. ಆವಾಗ ಯಾರನ್ನು ಹುಡುಕುವುದು ಎಂದು ಒಂದು ಉಪಾಯ ಮಾಡಿದರು. ಪ್ರತ್ಯಕ್ಷವಾಗಿ ರಾಜಕುಮಾರಿಗೆ ನೆಲಮನೆ ಕಟ್ಟಿಸಿದರು. ಅದರಲ್ಲಿ ರಾಜಕುಮಾರಿಯನ್ನು ಇರಿಸಿದರು. ಯಾರು ಆ ಬಾಗಿಲನ್ನು ಪತ್ತೆ ಹಚ್ಚಿ ರಾಣಿಯನ್ನು ಕರೆದು ತರುವರೋ ಅವರಿಗೆ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳಲು ಅರ್ಹರು ಎಂದರು.

ಪ್ರತಿದಿವಸ ಬರುವ ಯುವಕರಿಗೆ ಮೂರು ದಿವಸಗಳ ಅವಧಿಯನ್ನು ಕೊಡಲಾಗುತ್ತಿತ್ತು. ಆ ಅವಧಿಯಲ್ಲಿ ಹುಡುಕಲು ಅಸಮರ್ಥರಾದರೆ ತಲೆ ಕಡಿಯಲಾಗುತ್ತಿತ್ತು. ಹೀಗೆ ಹಲವಾರು ಜನ ಪ್ರಯತ್ನ ಮಾಡಿದವರು ಅಸಮರ್ಥರಾದರು. ನೆರೆಯ ರಾಜ್ಯದ ರಾಜಕುಮಾರನು ಅದೇ ಸ್ಥಳ ವಿಚಾರಿಸಿ ದಾರಿಯಲ್ಲಿ ನಡೆಯುತ್ತ ಅವನೊಂದು ನಗರವನ್ನು ಹೊಕ್ಕನು. ಅಲ್ಲಿ ಒಬ್ಬ ಅಕ್ಕಸಾಲಿಗನನ್ನು ಕಂಡನು. ಚಿನ್ನದ ನಾಣ್ಯಗಳಿಂದ ತುಂಬಿದ ಎರಡು ಚೀಲಗಳನ್ನು ಕೊಟ್ಟು ಅಕ್ಕಸಾಲಿಗನಿಗೆ ಬೇಗನೆ ಇವುಗಳಿಗೊಂದು ಮೇಕೆಯನ್ನು ಮಾಡು ಅದರೊಳಗೆ ನಾನು ಅವಿತುಕೊಳ್ಳುವಷ್ಟು ಅದು ದೊಡ್ಡದಾಗಿರಬೇಕು. ಮಿಕ್ಕ ನಾಣ್ಯಗಳನ್ನು ನೀನಿಟ್ಟುಕೊಳ್ಳಬಹುದು, ಎಂದು ಗುಟ್ಟಾಗಿ ಹೇಳಿದನು. ಅಕ್ಕಸಾಲಿಗನು ಬಹು ಸಂತೋಷದಿಂದ ಕೂಡಲೇ ಕೆಲಸವನ್ನಾರಂಭಿಸಿದನು. ಮರುದಿನ ಸೂರ್ಯೋದಯ ಆಗುವುದರೊಳಗೆ ಅಕ್ಕಸಾಲಿಗ ಚಿನ್ನದ ಮೇಕೆಯನ್ನು ಸಿದ್ಧಮಾಡಿದ.

ಅಕ್ಕಸಾಲಿಗ ನೀನು ಇನ್ನೊಂದು ಕೆಲಸವನ್ನು ಮಾಡಬೇಕು. ಈ ಮೇಕೆಯನ್ನು ರಾಜಕುಮಾರಿಯ ತಂದೆಗೆ ಬಹುಮಾನವಾಗಿ ಕೊಡು ಎಂದು ಹೇಳಿ ತಾನು ಆ ಮೇಕೆಯ ಜಠರದಲ್ಲಿ ಅಡಗಿ ಕುಳಿತನು. ಅಕ್ಕಸಾಲಿಗನು ಕೆಲವು ಆಳುಗಳ ಕೈಯಲ್ಲಿ ಮೇಕೆಯನ್ನು ಹೊರಿಸಿಕೊಂಡು ರಾಜರ ಮಹಲಿಗೆ ನಡೆದನು. ರಾಜನು ಮಗಳ ಮನಸ್ಸನ್ನು ಸಂತೋಷಪಡಿಸಲೆಂದು ಚಿನ್ನದ ಮೇಕೆಯನ್ನು ಮಗಳಿದ್ದಲಿಗೆ ಕೊಂಡೊಯ್ಯಲು ಅಪ್ಪಣೆಯಿತ್ತನು. ರಾಜಕುಮಾರಿ ಇರುವ ಕೋಣೆಗೆ ಒಯ್ದು ಅದನ್ನೊಂದು ಮೂಲೆಯಲ್ಲಿ ಇಡುವಂತೆ ಹೇಳಿದರು. ರಾಜಕುಮಾರನು ಅವಳ ಸೌಂದರ್ಯವನ್ನು ಮೇಕೆಯ ಜಠರದಿಂದಲೇ ನೋಡಿ ಆಶ್ಚರ್ಯಚಕಿತನಾದನು. ಹೀಗೆ ಅವರಿಬ್ಬರು ಅನೇಕ ದಿವಸಗಳು ಕಳೆದರು. ನಾವು ಹೀಗೆ ಇರುವುದು ಅಸಾಧ್ಯ ಎಂದು ಒಂದು ಉಪಾಯ ಮಾಡಿದರು. ರಾಜಕುಮಾರಿ ಮೇಕೆಯ ಒಂದು ಕಾಲ ಮುರಿದಳು ಅವನ್ನು ಸರಿಪಡಿಸುವ ನೆಪದಲ್ಲಿ ರಾಜಕುಮಾರ ಹೊರಗಡೆ ಬರಲು ಸಾಧ್ಯವಾಯಿತು. ಆ ಚಿನ್ನದ ಮೇಕೆಯನ್ನು ಸರಿಪಡಿಸಲು ಅಕ್ಕಸಾಲಿಗನ ಮನೆಗೆ ಕಳುಹಿಸಿದರು. ನಂತರ ರಾಜ-ರಾಜಕುಮಾರ ಬಳಿ ಹೋಗಿ ನಾನು ತಮ್ಮ ಕನ್ಯೆಯನ್ನು ವಿವಾಹವಾಗಲು ಇಚ್ಚಿಸುವೆನು ಎಂದು ಹೇಳಿದನು. ಅವನಿಗೆ ಕಳ್ಳದ್ವಾರವು ಎಲ್ಲಿದೆಯೆಂದು ತಿಳಿದಿತ್ತು. ರಾಜನು ರಾಜಕುಮಾರಿ ಇದ್ದ ಅರಮನೆಯನ್ನು ಪ್ರವೇಶಿಸಿದನು. ಅಲ್ಲಿ ದಾದಿಯರು ರಾಜಕುಮಾರಿಯ ಉಡುಗೆ ಆಭರಣಗಳನ್ನು ಅಲಂಕರಿಸಿಕೊಂಡು ಬಂದರು. ಆವಾಗ ರಾಜನಿಗೆ ಕಂಡುಹಿಡಿಯಲು ತೊಂದರೆಯಾಗಿ ಒಂದು ಉಪಾಯ ಮಾಡಿದ. ತನ್ನಲ್ಲಿದ್ದ ಚಿನ್ನದ ನಾಣ್ಯಗಳನ್ನು ದಾದಿಯರ ಕಡೆ ಎಸೆದ. ನಾಣ್ಯಗಳನ್ನು ತೆಗೆದುಕೊಳ್ಳಲು ದಾದಿಯರು ಬೇಗನೆ ಬಗ್ಗಿದರು. ಆದರೆ ರಾಜಕುಮಾರಿಯು ಮಾತ್ರ ಕದಡಲಿಲ್ಲ. ಕೂಡಲೆ ಅವನು ರಾಜಕುಮಾರಿ ಕಡೆಗೆ ಧಾವಿಸಿದನು.

ಅವಳ ಕೈ ಹಿಡಿದು ರಾಜನ ಬಳಿಗೆ ಕರೆದೊಯ್ದನು. ರಾಜನು ಅವರಿಬ್ಬರನ್ನು ಕಂಡು ಆಶೀರ್ವದಿಸಿ ಅವರ ವಿವಾಹವನ್ನೇರ್ಪಡಿಸಿದನು. ಎರಡು ರಾಜ್ಯಗಳಲ್ಲೂ ಸಂತೋಷ ಸಮಾರಂಭಗಳು ನಡೆದವು. ರಾಜಕುಮಾರನೂ ರಾಜಕುಮಾರಿಯೂ ಸುಖದಿಂದಿರಲು ತೊಡಗಿದರು. ಇಲ್ಲಿ ರಾಜಕುಮಾರ ಮತ್ತು ರಾಜಕುಮಾರಿಯ ಮದುವೆಗೆ ಅಕ್ಕಸಾಲಿಗ ತನ್ನ ಕೌಶಲ್ಯದಿಂದ ಬೃಹತ್ ಜಿಂಕೆಯನ್ನು ಮಾಡಿ ಸಹಾಯ ಮಾಡಿದ ಪ್ರಸಂಗ ಬಹು ಮುಖ್ಯವಾದದ್ದು.[೧೪]

**೩. ಚೋಳರಾಜ ಮತ್ತು ಪಾಂಚಾಳರ ಕಥೆ :**

ಪರಿಮಳ ಚೋಳನೆಂಬ ರಾಜನ ಬಳಿಗೆ ಒಂದೊಮ್ಮೆ ವ್ಯಾಸನು ಬಂದು ನಮ್ಮ ವಂಶಸ್ಥರನ್ನು ರಾಜರ ಬಳಿಯಲ್ಲಿ ಆಚಾರ್ಯರನ್ನಾಗಿ ಮಾಡಿಕೊಂಡರೆ ಭೂತ, ಭವಿಷ್ಯತ್ ಮತ್ತು ವರ್ತಮಾನ ಈ ತ್ರಿಕಾಲಗಳನ್ನು ಹೇಳುವನೆಂದು ಹೇಳುತ್ತಾನೆ. ಆಗ ಆ ರಾಜನು ತ್ರಿಕಾಲಗಳನ್ನು ಪಂಚಕೃತ್ಯಗಳನ್ನು ತಿಳಿಸಿ ಹೇಳುವ ಮಹಾಜ್ಞಾನಿ ಪಾಂಚಾಳರು ನಮ್ಮಲ್ಲಿ ಆಚಾರ್ಯರಾಗಿರುವುದುಂಟು. ಅದಕ್ಕಾಗಿ ನಿಮ್ಮ ಅಗತ್ಯವಿಲವೆಂದು ಹೇಳಿ ಕಳುಹಿಸಿಬಿಟ್ಟ. ಆದಿಯಿಂದಲೂ ಪಾಂಚಾಳರೇ ಆಚಾರ್ಯರಾಗಿರುವುದರಿಂದ ತಮಗೆ ಇನ್ನೊಬ್ಬ ಆಚಾರ್ಯರ ಅವಶ್ಯಕತೆ ಇಲ್ಲವೆಂದು ರಾಜನು ತಿಳಿಸುತ್ತಾನೆ. ಇದರಿಂದ ಅವಮಾನಿತನಾದ ವ್ಯಾಸನು ಕುತಂತ್ರದಿಂದ ಚೋಳರಾಜನ ದೂರದ ಸಂಬಂಧಿಯೊಬ್ಬನನ್ನು ಹುಡುಕಿ ಪಟ್ಟ ಕಟ್ಟುವ ಅಪೇಕ್ಷೆಯನ್ನು ತೋಡಿಕೊಳ್ಳುತ್ತಾನೆ. ಹಾಗೆಯೇ ಅತಿಯಾಸೆಗೆ ಒಳಗಾದ ಈ ಸಂಬಂಧಿಯು ರಾಜ್ಯವನ್ನು ಗೆಲ್ಲುವ ಕುತಂತ್ರವನ್ನು ವ್ಯಾಸನೊಂದಿಗೆ ಸೇರಿ ಮಾಡುತ್ತಾನೆ. ಚೋಳರಾಜನ ರಾಜ್ಯಕ್ಕೆ ದಂಡೆತ್ತಿ ಹೋದಾಗ ಬೆಟ್ಟದೋಪಾದಿಯಲ್ಲಿ ಕಬ್ಬಿಣದ ಗುಂಡುಗಳು ತಮ್ಮ ಮೇಲೆ ಬಿಳುವುದನ್ನು ಕಂಡು ಸೋಜಿಗಪಡುತ್ತಾನೆ.

ಆದರೆ ಈ ಗುಂಡುಗಳ ಎಸೆದಾಟಕ್ಕೆ ಹೆದರಿದ ವ್ಯಾಸನು ಮತ್ತು ಆತನ ಪಡೆಯು ತಾವು ಸೋತಿದ್ದಾಗಿ ಸ್ವಯಂ ಘೋಷಿಸಿಕೊಳ್ಳುತ್ತಾರೆ. ಇವರ ಮಾತಿಗೆ ಮನ್ನಣೆ ಕೊಟ್ಟು ಗುಂಡಿನ ಎಸೆತವನ್ನು ಚೋಳ ರಾಜನು ನಿಲ್ಲಿಸುತ್ತಾನೆ. ತಾನು ಎಂದೂ ನೋಡದ ಈ ಕಬ್ಬಿಣದ ಗುಂಡುಗಳು ಹೇಗೆ ಉತ್ಪತ್ತಿಯಾದವು ಮತ್ತು ಹೇಗೆ ದೊರೆತವು ಎಂದು ಕೇಳಲಾಗಿ ತಮ್ಮಲ್ಲಿಯ ಆಚಾರ್ಯನಾದ ಕಮ್ಮಾರನೊಬ್ಬನನ್ನು ತೋರಿಸಿ ಈ ಆಚಾರ್ಯನೇ ಇವುಗಳ ಸೃಷ್ಟಿಕರ್ತನು ನಮ್ಮ ಆಪತ್ಬಾಂಧವನೆಂದು ರಾಜನು ತಿಳಿಸುತ್ತಾನೆ. ಕಮ್ಮಾರನನ್ನು ನೋಡಿ ಇವನನ್ನು ಹೇಗಾದರೂ ಹಿಡಿಸಿ ಕೊಂದರೆ ರಾಜ್ಯವು ತನ್ನ ಕೈವಶವಾಗುವುದೆಂದು ಭಾವಿಸಿದ ವ್ಯಾಸನು ಮೋಸದಿಂದ ಕಮ್ಮಾರನನ್ನು ಹಿಡಿಸಿ ಗಲ್ಲಿಗೇರಿಸುತ್ತಾನೆ. ಕಮ್ಮಾರನ ಸಹಾಯವಿಲ್ಲದೆ ಚೋಳರಾಜನು ಸೋಲನ್ನು ಒಪ್ಪುತ್ತಾನೆ.[೧೫]

ಈ ಕಥೆಯು ಕೂಡ ಕಂಬಾರರ ಕೌಶಲ್ಯವನ್ನು ಯುದ್ಧ ಕಾಲದಲ್ಲಿ ಮದ್ದುಗುಂಡು ಕತ್ತಿ, ಕಠಾರಿ ಮುಂತಾದ ಯುದ್ಧ ಸಲಕರಣಗಳನ್ನು ತಯಾರಿಸುತ್ತಿದ್ದ ಪ್ರಸಂಗವನ್ನು ಗ್ರಹಿಕೆಗೆ ತರುತ್ತದೆ.

**೪. ಧರ್ಮಪಾಲನ ಕಥೆ**

ತ್ವಷ್ಟ್ರಬ್ರಹ್ಮವಂಶಜನಾದ ಧರ್ಮಪಾಲನಿಗೆ ರುದ್ರಸೇನ, ಭದ್ರಸೇನ, ಇಂದ್ರಸೇನ ಮತ್ತು ಕಾಳಸೇನನೆಂದು ನಾಲ್ವರು ಮಕ್ಕಳು ಇವರು ಕಾಶ್ಮೀರ ಗುಜ್ಜರಾವಿ ದೇಶಗಳಲ್ಲಿ ವ್ಯಾಪಾರ ಮಾಡುತ್ತಾ ತಿರುಪತಿಗೆ ಬಂದು

ಬಂಡಿಯನ್ನಿಳುಹಿ ದೇವರಿಗೆ ವಂದಿಸಿ ದಕ್ಷಿಣದಿಂದ ಚೋಳರಾಜನ ದೇಶದ ಕಡೆ ಪ್ರಯಾಣ ಬೆಳೆಸಿದರು. ಯಾವ ದೇಶದಲ್ಲಿಯೂ ಇವರಿಗೆ ಸುಂಕದ ತಗಾದೆ ಇರುವುದಿಲ್ಲ. ಇವರು ಜನರಿಗೆ ತಾವು ಕಟಕದ ವಿಶ್ವಬ್ರಹ್ಮವಂಶಾನ್ವಯರು ಎಂದು ಹೇಳುತ್ತಿದ್ದರು.

ಕಂಚಿಯ ನಗರದ ನಡುವೆ ಬಂಡಿಯನ್ನು ಇಳುಹಿ ತಮ್ಮ ಹನುಮಧ್ವಜವನ್ನು ಏರಿಸಿದರು. ಅಲ್ಲಿಗೆ ಚೋಳರಾಜನ ರಾಜಕುಮಾರಿಯು ಒಂದು ವಿಭೂತಿಯನ್ನು ರುದ್ರಾಕ್ಷಿಯನ್ನು ಧರಿಸಿ ಸುಂದರವಾಗಿ ಕಾಣುತ್ತಿದ್ದ ಇಂದ್ರಸೇನ, ಭದ್ರಸೇನರ ಮೇಲೆ ಮೋಹಗೊಂಡಳು ಹಾಗೂ ಅವರು ಮಾರುತ್ತಿದ್ದ ಕನ್ನಡಿಯನ್ನು ತೆಗೆದುಕೊಂಡು ಹೋದಳು. ಎಷ್ಟು ದಿನಗಳಾದರೂ ಕನ್ನಡಿಯ ಬೆಲೆ ಕೊಡಲಿಲ್ಲ. ಚೋಳರಾಜನ ಕಡೆಯವರಿಗೂ ಇವರಿಗೂ ಯುದ್ಧ ನಡೆಯುತ್ತದೆ. ಆ ಯುದ್ಧದಲ್ಲಿ ರುದ್ರಸೇನಾದಿಗಳು ಜಯಶೀಲರಾಗುತ್ತಾರೆ. ಅನಂತರ ಅರಸನು ಉಪಾಯದಿಂದ ಅವರನ್ನು ಬಂಧಿಸಿ ಅವರ ತಲೆಗಳನ್ನು ಕತ್ತರಿಸುತ್ತಾನೆ. ಶಂಕರಾಚಾರ್ಯನು ಮಕ್ಕಳನ್ನು ಕಳೆದುಕೊಂಡ ಧರ್ಮಪಾಲನ ಮೇಲೆ ಕರುಣೆ ತೋರುತ್ತಾನೆ. ಧರ್ಮಪಾಲನು ಮನು, ಮಯ, ತ್ವಷ್ಟ, ಶಿಲ್ಪಿ ಮತ್ತು ವಿಶ್ವಜ್ಞರೆಂಬ ಪಂಚಬ್ರಾಹ್ಮಣರನ್ನು ಹಾಗೂ ಕಾಳಿಕಾದೇವಿಯನ್ನು ಸ್ತೋತ್ರ ಮಾಡುತ್ತಾನೆ. ಕಾಳಿಕಾದೇವಿಯು ಪ್ರಸನ್ನಳಾಗಿ ಮಕ್ಕಳನ್ನು ಬಂದಿಸುತ್ತಾಳೆ.

ಕಾಳಿಕಾದೇವಿಯು ಈ ಕೆಳಕಂಡಂತೆ ದೀರ್ಘವಾಗಿ ಈ ತ್ವಷ್ಟವಂಶೋದ್ಧಾರರ ಹಿರಿಮೆಯನ್ನು ಚೋಳರಾಜನಿಗೆ ವಿವರಿಸುತ್ತಾಳೆ. ಓಂಕಾರದಲ್ಲಿ ಜನಿಸಿ ಇವರು ಜನರೂಪವನ್ನು ಪಡೆದರು. "ಧರೆಯೊಳಗೆ ಪಂಚಾನನರೈವರಲ್ಲದೆ, ವಿರಚಿಸಿದವರುಂಟೇ ಭುವನಾದಿ ಭವನಗಳ" ಷಡ್ದರ್ಶನಕ್ಕೆ ಮುಖ್ಯರಾದ ದೈವಗಳನ್ನು ಕಡೆದರು. "ನಾಡೊಳು ಐವರು ಮುಟ್ಟಿದ ವಿದ್ಯವಿಲ್ಲ ನೀರೊಳಗೆ ಹಾದಿಯಂ ತೋರಿ ಹಡಗನ್ನು ನಡೆಸಿ ಆರೈದು ಸಕಲ ವ್ಯವಹಾರವೆಲ್ಲವ ತರಿಸಿ ದೋಣಿಯ ಮಾಡಿ ನಡೆಸಿ ವಾರಿಧಿಯೊಳಗೆ ಸಕಲ ದ್ವೀಪಾಂತರುವ" ಕಾಣಿಸಿರುತ್ತಾರೆ. ಇಂತಹ ಪಂಚಬ್ರಹ್ಮರ ಚೋದ್ಯವನರಿ, ಸೀಸಕ, ಕವಚ, ವಜ್ರಲಾಗಿಯನ್ನು ಮಾಡಿ ಕತ್ತಿ ಬಲ್ಲೆಯ ಈಟಿ, ನಾರಾಟೆ ಅಂಬುಗಳನ್ನು ಮಾಡುತ್ತಾರೆ. ಕಾಷ್ಠಾದಲ್ಲಿ ತೇರು ಬಂಡಿಗಳನ್ನು, ಶಿಲೆಯಲ್ಲಿ ಪ್ರತಿಮೆ ದೇವಾಲಯ, ಸುಕನಾಸಿ, ಗೋಪುರ, ರಂಗಮಂಟಪಗಳನ್ನು ಪಂಚಲೋಹದ ಪ್ರಭಾವಳಿಗಳನ್ನು ಮಾಡುತ್ತಾರೆ. ಇವರನ್ನು "ಅರಿಯದೆ ಜರಿಯುವವರನ್ನು ಮರೆಯುತ್ತಾರೆ ! ತೂಬು ಕಂಬಗಳನ್ನು ನಿಲ್ಲಿಸುತ್ತಾರೆ. ನಾಗಾಭರಣ, ಓಲೆಕೊಪ್ಪು ಮೊದಲಾದ ಆಭರಣಗಳನ್ನು ಮಾಡುವರು. "ಕ್ಷತ್ರಿಯನಿಗೆ ಖಡ್ಗ, ವೈಶ್ಯನಿಗೆ ತಕ್ಕಡಿ, ಶೂದ್ರನಿಗೆ ನೇಗಿಲು, ಚಿನಿವಾರನಿಗೆ ತ್ರಾಸು ಮೊದಲಾದ ಆಯಾ ಜಾತಿಯ ಆಯುಧೋಪಕರಣಗಳನ್ನು ಮಾಡುವವರು ಇವರು. "ಇಂತಿಯವರು ಜಗಕ ಗುರುವಾಗಿ ಸಂದರು."

ಎಲೇ ಚೋಳನೆ ಕೇಳು ಇವರು ನಾಣ್ಯವನ್ನು ಮಾಡುತ್ತಾರೆ, ಮಂತ್ರತಂತ್ರಗಳಲ್ಲಿ ಬಲ್ಲವರು ಜಲಸೂತ್ರ, ನೆಲಸೂತ್ರ, ಕಂಬಸೂತ್ರಗಳನ್ನು ತೋರುವರು. ಪ್ರತಿಮೆಗೆ ಜೀವಕಳೆಯನ್ನು ತುಂಬುವರು. ತಾನೇ ನಡೆದಾಡುವ ನೆಳಲಂಚೆ ಎಂಬ ಬೊಂಬೆಯನ್ನು ಮಾಡುವರು. ಓಂಕಾರದಲ್ಲಿ ಜನಿಸಿ ಓಜನಾಮವ ತಿಳಿದು ಲೋಕ ಸೂತ್ರಿಕ ವಿಶ್ವಬ್ರಹ್ಮನಾಮ ರೂಪದಲ್ಲಿ ಸುಳಿದಾಡಿದರು[೨೦] ಎನ್ನುವಲ್ಲಿ ವಿಶ್ವಕರ್ಮರ ಕಲಾಕೌಶಲ್ಯ ಮತ್ತು ಯುದ್ಧಾಸ್ತ್ರಗಳ ಪ್ರೀತಿ ಎದ್ದು ಕಾಣುತ್ತದೆ.

೨. ವ್ಯಕ್ತಿಯ ಕಥೆಗಳು

೧. ಶಿಲ್ಪಿಯ ಕಥೆ

ಒಂದಾನೊಂದು ಕಾಲದಲ್ಲಿ ಶಿಲ್ಪಿಯೊಬ್ಬ ಅದ್ಭುತವಾದ ಶಿಲ್ಪಗಳನ್ನು ಸೃಷ್ಟಿಸುತ್ತಿದ್ದ. ಶಿಲ್ಪಿಯನ್ನು ಪರೀಕ್ಷಿಸಬೇಕೆಂದು ಒಮ್ಮೆ ಶಿವನು ಮಾರುವೇಷದಲ್ಲಿ ಆ ಶಿಲ್ಪಿಯ ಬಳಿಗೆ ಹೋದ. ಅವನು ತಯಾರಿಸಿದ ಶಿಲ್ಪಗಳನ್ನು ನೋಡುತ್ತಾ ನನ್ನದೊಂದು ಪ್ರತಿಕೃತಿ ಶಿಲ್ಪವನ್ನು ತಯಾರಿಸಿ ಕೊಡುವೆಯಾ ಎಂದು ಶಿಲ್ಪಿಯನ್ನು ಕೇಳುತ್ತಾನೆ. ಆಗಲೆಂದು ಒಪ್ಪಿದ ಶಿಲ್ಪಿಯು ಶಿವನನ್ನು ರೂಪದರ್ಶಿಯಾಗಿ ಬಳಸಿಕೊಂಡು ಶಿವನ ಪ್ರತಿಕೃತಿಯನ್ನು ತಯಾರಿಸಿ ಇನ್ನು ಸಣ್ಣ ಪುಟ್ಟ ಕೆಲಸಗಳನ್ನು ಮಾಡಬೇಕಾಗಿದೆ. ತರುವಾಯ ಈ ಶಿಲ್ಪವನ್ನು ಕೊಂಡು ಹೋಗಬಹುದೆಂದು ಶಿವನಿಗೆ ತಿಳಿಸಿದನು.

ಮಾರನೆಯ ದಿನ ಶಿಲ್ಪಿಯ ಶಾಲೆಗೆ ಶಿವನು ಬಂದು ಬೇರೆಯ ರೂಪವನ್ನು ಧರಿಸುತ್ತಾನೆ. ನಿನ್ನೆ ತಯಾರಿಸಿದ ಶಿಲ್ಪ ತೋರಿಸು ಎಂದಾಗ ಶಿಲ್ಪಿಯು ಶಿಲ್ಪವನ್ನು ತೋರಿಸುತ್ತಾನೆ. ಶಿಲ್ಪಿಗೂ ತನ್ನ ರೂಪಕ್ಕೂ ಹೊಂದಾಣಿಕೆ ಇಲ್ಲವೆಂದು ಶಿವನು ತಂಟೆ ತೆಗೆಯುತ್ತಾನೆ. ಶಿಲ್ಪಿಯು ನಾಳೆ ಬನ್ನಿ, ಈ ಶಿಲ್ಪವನ್ನು ಸರಿಪಡಿಸುತ್ತೇನೆ ಎಂದು ತಿಳಿಸುತ್ತಾನೆ. ಮರಳಿ ಮಾರನೇ ದಿನಕ್ಕೆ ಬರುವ ಶಿವನು ಇನ್ನೊಂದು ರೂಪವನ್ನು ಧರಿಸುತ್ತಾನೆ. ಅಂದೂ ಸಹಾ ಶಿಲ್ಪಕ್ಕೂ, ಆಕಾರಕ್ಕೂ ಹೊಂದಾಣಿಕೆ ಆಗುವುದಿಲ್ಲ. ಹೀಗೆ ನಾಲ್ಕೈದು ದಿನಗಳು ನಡೆಯುತ್ತವೆ. ಕೊನೆಗೆ ರೋಸಿಹೋದ ಶಿಲ್ಪಿಯ ಹೆಂಡತಿಯು ಒಂದು ಉಪಾಯವನ್ನು ತಯಾರಿಸಿ ನಾಲ್ಕು ಮಗ್ಗುಲಿಗೂ ಕನ್ನಡಿ ಇಡುತ್ತಾಳೆ. ಶಿವನು ಮರಳಿ ಬಂದು ತನ್ನ ಶಿಲ್ಪವೇನೆಂದು ಪ್ರಶ್ನಿಸಿದಾಗ ಒಂದು ಕನ್ನಡಿಯ ಬಳಿಗೆ ಅವನನ್ನು ಕೊಂಡೊಯ್ಯುತ್ತಾನೆ. ಕನ್ನಡಿಯಲ್ಲಿ ತನ್ನ ಪ್ರತಿ ಬಿಂಬವನ್ನು ನೋಡಿದ ಶಿವನು ಈ ರೂಪ ತನ್ನದಲ್ಲವೆಂದು ತಕರಾರು ತೆಗೆಯುತ್ತಾನೆ. ರೂಪ ಬದಲಾಯಿಸಿಕೊಳ್ಳುತ್ತಾನೆ. ಆಗ ಇನ್ನೊಂದು ಕನ್ನಡಿಯ ಎದುರಿಗೆ ಅವನನ್ನು ಕರೆದುಕೊಂಡು ಹೋಗುತ್ತಾನೆ. ಅಲ್ಲಿಯೂ ತಕರಾರು ತೆಗೆಯುವ ಶಿವನು ಹೀಗೆಯೆ ನಿರಂತರವಾಗಿ ರೂಪವನ್ನು ಬದಲಾಯಿಸಿಕೊಳ್ಳುತ್ತ ಶಿಲ್ಪಿಯನ್ನು ಯಾಮಾರಿಸಲು ನೋಡುವ ಶಿವನಿಗೆ ಕನ್ನಡಿ ತೋರಿಸಿ ಬಾಯಿ ಮುಚ್ಚಿಸುತ್ತಾನೆ. ಶಿಲ್ಪಿಯ ಚಾಣಾಕ್ಷತೆಗೆ ಮೆಚ್ಚಿದ ಶಿವನು ಅವನ ವಿದ್ಯೆ ಅವನಲ್ಲಿಯೇ ಉಳಿಯಲೆಂದು ಆಶೀರ್ವದಿಸಿ ತನ್ನ ನಿಜ ಸ್ವರೂಪ ತೋರಿಸಿ ಮಾಯವಾಗುತ್ತಾನೆ.[೨೦] ಶಿವ ವಿವಿಧ ನೆಲೆಯಲ್ಲಿ ಶಿಲ್ಪಿಯ ಕೆಲಸದ ಶ್ರದ್ಧೆ ಹಾಗೂ ನಿಷ್ಠೆಯನ್ನು ಪರೀಕ್ಷಿಸುವ ಸಂಗತಿಯನ್ನಿಲ್ಲಿ ಕಾಣುತ್ತೇವೆ.

೩. ಡಕಣಾಚಾರಿಯ ಕಥೆ

ಜಕಣಾಚಾರ್ಯರ ಹೆಸರನ್ನರಿಯದವರು ಕನ್ನಡ ನಾಡಿನಲ್ಲಿ ಇಲ್ಲ. ಇವರು ಹೊಯ್ಸಳ ವೀರ ವಿಷ್ಣುವರ್ಧನನ ಆಳ್ವಿಕೆಯಲ್ಲಿದ್ದರೆಂದೂ ಬೇಲೂರಿನ ಚನ್ನಕೇಶವ ದೇವಾಲಯವನ್ನು ಅವರೇ ಕಟ್ಟಿದರೆಂದೂ ಹೇಳಿಕೆ. ಅವರ ಬಗ್ಗೆ ಈ ದಂತಕತೆಯನ್ನು ಮೈಸೂರಿನ ವಾಸ್ತುಶಿಲ್ಪ ಪುಸ್ತಕದಲ್ಲಿ ಕೊಡಲಾಗಿದೆ.

ಮೈಸೂರು ಸೀಮೆಗೆ ಸೇರಿದ ತುಮಕೂರು ಜಿಲ್ಲೆಯಲ್ಲಿ ಕೈದಾಳ ಎಂಬುದೊಂದು ಊರಿದೆ. ಅಲ್ಲಿ ಹಿಂದಕ್ಕೆ ಜಕಣಾಚಾರ್ಯ ಎಂಬ ಗೃಹಸ್ಥರಿದ್ದರು. ಅವರು ಜ್ಯೋತಿಷಶಾಸ್ತ್ರದಲ್ಲಿಯೂ, ಶಿಲ್ಪಶಾಸ್ತ್ರದಲ್ಲಿಯೂ

ಬಲು ಗಟ್ಟಿಗರು. ಅವರಿಗೆ ಅದೇ ತಾನೇ ಒಬ್ಬ ಮಗ ಹುಟ್ಟಿದ. ಒಂದು ದಿನ ಮಗನು ಹುಟ್ಟಿದ ನಕ್ಷತ್ರ ರಾಶಿಗಳನ್ನು ನೋಡಿ ಅವುಗಳನ್ನನುಸರಿಸಿ ಜನ್ಮಕುಂಡಲಿಯನ್ನು ಮಂಡಿಸಿ ಫಲದ ಲೆಕ್ಕ ಹಾಕುತ್ತ ಕುಳಿತಿದ್ದರು. ಅದೇಕೋ ಗ್ರಹಗಳ ಜೋಡಣೆಯು ಸರಿಯಾಗಿರುವಂತೆ ಕಾಣಲಿಲ್ಲ. ಸ್ವಲ್ಪ ಆಳವಾಗಿ ವಿಚಾರಿಸಿದರು. ವ್ಯಭಿಚಾರದಿಂದ ಮಗನು ಹುಟ್ಟಿರುವುದಾಗಿ ತಿಳಿಯಿತು. ಮನಸ್ಸಿಗೆ ಅಸಮಾಧಾನವಾಯಿತು. ಮನೆಯಲ್ಲಿದ್ದು ನೀರು ಕುಡಿಯಲಿಕ್ಕೂ ಮನಸ್ಸು ಒಲ್ಲದಾಯಿತು. ಮನೆಯನ್ನು ಬಿಟ್ಟು ಹೊರಟರು.

ಮನೆಯನ್ನು ಬಿಟ್ಟು ಹೊರಟರೆ, ಮುಂದೇನು ಮಾಡಬೇಕೆಂಬ ವಿಚಾರವು ಅವರಿಗಿರಲಿಲ್ಲ. ಯಾಕೆಂದರೆ ಅವರು ಎರಡು ವಿದ್ಯೆಗಳಲ್ಲಿ ಪ್ರವೀಣರಿದ್ದರು. ಆದುದರಿಂದ ಕರ್ನಾಟಕದಲ್ಲಿಯ ಊರೂರಿಗೆ ಒಂದೋ ಎರಡೋ ದೇವಾಲಯಗಳನ್ನು ಕಟ್ಟುತ್ತ ಹೊರಟರು. ಹೀಗೆ ಹೋಗುತ್ತಿರುವಾಗ, ದಾರಿಯಲ್ಲಿ ಬೇಲೂರಿಗೆ ಬಂದು ತಲುಪಿದರು. ಅಲ್ಲಿಂದ ಸಮೀಪದಲ್ಲಿಯೇ ದ್ವಾರಸಮುದ್ರದಲ್ಲಿ ಹೊಯ್ಸಳ ಯಾದವರ ವಿಷ್ಣುವರ್ಧನನು ಆಳುತ್ತಿದ್ದನು. ಅವನಿಗೆ ಗುಡಿ ಗೋಪುರಗಳನ್ನು ಕಟ್ಟಿಸುವುದರಲ್ಲಿ ಬಲು ಮೆಚ್ಚುಗೆ. ಆಚಾರ್ಯರ ಕೀರ್ತಿಯೂ ಅವನ ಕಿವಿಗೆ ಬಿದ್ದಿತ್ತು. ವಿಷ್ಣುವರ್ಧನನೂ ಆಗ ತಾನೇ ಜೈನ ಮತವನ್ನು ಬಿಟ್ಟು ವೈಷ್ಣವ ಮತವನ್ನು ಅಂಗೀಕರಿಸಿದ್ದನು.

ಆಚಾರ್ಯರು ಕೈಯಲ್ಲಿ ನೂರಾರು ಜನ ಆಳುಗಳನ್ನು ಕಟ್ಟಿಕೊಂಡು ಶ್ರೀ ಚನ್ನಕೇಶವ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದರು. ಆಚಾರ್ಯರು ಚನ್ನಕೇಶವ ದೇವಾಲಯ ಕಟ್ಟುವುದರಲ್ಲಿ ತೋರಿಸಿದ ಶಿಲ್ಪಕಲೆಯ ನೈಪುಣ್ಯ, ಕುಸುರಿನ ಕೆಲಸ, ಸಜೀವವಾಗಿರುವಂತೆ ಕಾಣಿಸುವ ಅಲ್ಲಿಯ ಕಲ್ಲಿನ ಮೂರ್ತಿಗಳು ಅವುಗಳಲ್ಲಿಯ ಮುಖ, ಕಣ್ಣು ಮತ್ತು ಅಂಗಾಂಗಳಲ್ಲಿ ಎದ್ದು ಕಾಣಿಸುತ್ತಿದ್ದ ಭಾವವಿಶೇಷ ಇವೆಲ್ಲವುಗಳನ್ನು ಕಂಡು ವಿಷ್ಣುವರ್ಧನನು ಆನಂದಪಟ್ಟು ಓಲಾಡಿದನು. ಆಚಾರ್ಯರನ್ನು ಬಾಯಿತುಂಬ ಹೊಗಳಿ ಗೌರವಿಸಿದನು. ಅವರಿಗೆ ಏನು ಕೊಟ್ಟರೂ ಅರಸನಿಗೆ ಕಡಿಮೆಯೆಂದೆನಿಸಿತು.

ದೇವಾಲಯದಲ್ಲಿ ಸ್ಥಾಪಿಸತಕ್ಕ ಮೂರ್ತಿಯನ್ನು ಜಕಣಾಚಾರ್ಯರು ಸ್ವತಃ ಕೈಯಿಂದ ಮಾಡಿದ್ದರು. ಅದರ ಸೌಂದರ್ಯವನ್ನು ಕಂಡರಂತೂ ಅರಸನಿಗೆ ಹಿಡಿಸಲಾರದ ಹಿಗ್ಗು. ಮಹೋತ್ಸವದಿಂದಲೂ ಲಕ್ಷ ಗಟ್ಲೆ ಜನರಿಗೆ ಅನ್ನದಾನ ಮಾಡಿಯೂ ಮೂರ್ತಿಯ ಪ್ರತಿಷ್ಠೆ ಮಾಡಿಸಬೇಕೆಂದು ಯೋಚಿಸಿದನು. ದಿಗ್ದೇಶಕ್ಕೆ ಈ ಸುದ್ದಿಯು ಹರಡಿತು. ಬೇರೆ ಬೇರೆ ಭಾಗಗಳಿಂದ ಜನರು ಬಂದು ಬೇಲೂರಿನಲ್ಲಿ ಇಳಿಯ ಹತ್ತಿದರು.

ಹೀಗೆಲ್ಲ ಇತ್ತ ನಡೆಯುತ್ತಿರುವ ಸಮಯಕ್ಕೆ ಕೈದಾಳದಲ್ಲಿಯೇ ಜಕಣಾಚಾರ್ಯರ ಮಗನು ಬೆಳೆಯುತ್ತಿದ್ದನು. ಹೆತ್ತ ಹೊಟ್ಟೆಯ ಕಿಚ್ಚಿನಿಂದ ತಾಯಿಯು ಹೇಗೋ ಕಷ್ಟಪಟ್ಟು ನಾಲ್ಕು ಜನರ ಆಸರೆಯಿಂದ ಮಗನನ್ನು ದೊಡ್ಡವನನ್ನಾಗಿ ಮಾಡಿದಳು. ತಂದೆಯ ನಿಜವಾದ ಮಗನನ್ನು ಕೇಳುವುದೇನು? ಬುದ್ಧಿಯಲ್ಲಿ ತಂದೆಗೂ ಒಂದು ಕೈ ಮೇಲಿದ್ದಾನೆಯೇ ಹೊರತು ಕೀಳಾಗಿರಲಿಲ್ಲ. ವಿದ್ಯಾಭ್ಯಾಸ ನಡೆಸುವಾಗಲೇ ಇತ್ತ ಯಾರೂ ಹೇಳದೆಯೇ ಕೇಳದೆಯೇ ತನ್ನ ಮಟ್ಟಿಗೆ ತಾನು ಬೆಣ್ಣೆಯಂಥ ಕಲ್ಲುಗಳನ್ನು ಆರಿಸಿಕೊಂಡು ಬಂದು ಅವುಗಳಲ್ಲಿ ಚಂದವಾದ ಮೂರ್ತಿಗಳನ್ನು ಮಾಡತೊಡಗಿದನು. ತಾಯಿ ಬಳಗದವರು, ಜನರು ಹುಡುಗನ ಜಾಣತನವನ್ನು ನೋಡಿ ವಿಸ್ಮಯ ಪಡುವರು.

ಬೇಲೂರಿನಲ್ಲಿಯ ಉತ್ಸವದ ಸುದ್ದಿಯನ್ನು ಆತನೂ ಕೇಳಿದನು. ಹೊಸದಾಗಿ ಕಟ್ಟಿದ ದೇವಾಲಯ, ಮೂರ್ತಿ ಮುಂತಾದವುಗಳನ್ನು ಕಣ್ಣು ಮುಟ್ಟಿ ನೋಡಿ ಬರಬೇಕೆಂಬ ಅಪೇಕ್ಷೆ ಅವನಿಗೆ ಉಂಟಾಯಿತು. ತನ್ನ ಓರಗೆಯ ಗೆಳೆಯರೊಂದಿಗೆ ಹೊರಟನು. ಎಲ್ಲ ಜನರಂತೆ ಗದ್ದಲದಲ್ಲಿ ಹೊಕ್ಕು ಗುಡಿ ಮೂರ್ತಿ ಮುಂತಾದವುಗಳನ್ನು ನೋಡುತ್ತಿರುವಾಗ ಗುಡಿಯಲ್ಲಿ ಸ್ಥಾಪಿಸಲ್ಪಡುವ ಮೂರ್ತಿಯನ್ನು ಮಾಡಲಿಕ್ಕೆ ಬಳಸಿದ ಕಲ್ಲು ಅಶುದ್ಧವಿರುವುದೆಂದೂ ಅದು ಪ್ರಾಣ ಪ್ರತಿಷ್ಠಾಪನೆಗೆ ಯೊಗ್ಯವಿಲ್ಲೆಂದೂ ಅವನಿಗೆ ಕಂಡುಬಂದುದರಿಂದ ಈ ಮಾತನ್ನು ಅವನು ಬಾಯಿಬಿಟ್ಟು ಆಡಿದನು. ಒಬ್ಬರ ಕಿವಿಯಿಂದ ಇನ್ನೊಬ್ಬರ ಕಿವಿಗೆ ಹೋಗಿ ಕಡೆಗೆ ಈ ವರ್ತಮಾನ ಅರಸನಿಗೆ ಮುಟ್ಟಿತು. ಅರಸನು ಆಚಾರ್ಯರನ್ನು ಕರೆಯಿಸಿ ಕೇಳಿದನು. ಅಷ್ಟಕ್ಕೆ ಮುಗಿಯದೆ ಬೆಳೆಯುತ್ತ ಬೆಳೆಯುತ್ತ ಜಕಣಾಚಾರ್ಯ ಮತ್ತು ಅವರ ಮಗ ಇವರಿಬ್ಬರಲ್ಲಿ ವಾದ ನಡೆಯುವುದು ಗೊತ್ತಾಯಿತು. ಹುಡುಗನಿಗೆ ಇವರು ತನ್ನ ತಂದೆ ಎಂಬುದು ಗೊತ್ತಿಲ್ಲ. ಪದ್ಧತಿಯಂತೆ ಅಶುದ್ಧ ಕಲ್ಲೆಂದು ಸಿದ್ಧ ಮಾಡಿಕೊಟ್ಟರೆ, ಬಲಗೈ ಕಡಿದುಕೊಳ್ಳುವೆನೆಂದು ಆಚಾರ್ಯರು ಅರಸನಿಗೆ ಹೇಳಿದರು. ಇಬ್ಬರಿಗೂ ಮಾತು ನಡೆಯಿತು. ಅರಸನು ಅಲ್ಲಿಯೇ ಕುಳಿತಿದ್ದನು. ಹುಡುಗನು ಈ ಮೂರ್ತಿಯ ಹೊಕ್ಕಳ ಹತ್ತಿರ ಒಳಗೆ ಒಂದು ಗುಂಡಿ ಇದ್ದು ಅದರೊಳಗೆ ತುಸು ನೀರು, ಒಂದು ಕಪ್ಪೆಯು ಇರುವುದೆಂದೂ ಅದುದರಿಂದಲೇ ಮೂರ್ತಿ ಮಾಡಲು ಅದು ಅಶುದ್ಧವೆಂದೂ ಹೇಳಿದನು. ಆದರೆ ಶ್ರಮಪಟ್ಟು ಮಾಡಿದ ಮೂರ್ತಿಯನ್ನು ಒಡೆದು ನೋಡುವುದೆಂತು ಎಂದು ಎಲ್ಲರೂ ಆಲೋಚನೆಯಲ್ಲಿ ಕುಳಿತರು. ಕೊನೆಗೆ ಹುಡುಗನೇ ಮುಂದಾಗಿ ಒಡೆಯುವುದು ಸಾಧ್ಯವಿಲ್ಲದಿದ್ದರೆ ಇನ್ನೊಂದು ಉಪಾಯ ಮಾಡಿರಿ. ಮೂರ್ತಿಯ ಮೈಗೆಲ್ಲ ಗಂಧ ಹಚ್ಚಿರಿ. ಆಗ ಹೊಕ್ಕಳ ಹತ್ತಿರದ ಗಂಧವು ಹಸಿಯುಳಿದು ಮಿಕ್ಕ ಕಡೆಯ ಗಂಧ ಒಣಗುವುದು ಎಂದನು.

ಈ ಹಂಚಿಕೆಯು ಎಲ್ಲರಿಗೂ ಒಪ್ಪಿಗೆಯಾಯಿತು. ಆಚಾರ್ಯರು ಆಗಬಹುದೆಂದರು. ಅದರಂತೆ ಮಾಡಿ ನೋಡಲಾಗಿ ಮೂರ್ತಿಯು ಮೈಗೆ ಬಳಿದ ಗಂಧ ಒಣಗಿದರೂ ಹೊಕ್ಕಳಿನ ಬದಿಯಲ್ಲಿ ಒಣಗಲಿಲ್ಲ. ಆಗ ಅರಸನಿಗೂ ಆಚಾರ್ಯರಿಗೂ ಮಿಕ್ಕವರಿಗೂ ಆಶ್ಚರ್ಯವೆನಿಸಿತು. ಜಕಣಾಚಾರ್ಯರಂತಹ ನಾನು ಎಂಬುವವರ ಮಾತನ್ನು ಸುಳ್ಳುಗೊಳಿಸಿದ. ಅವರ ಬುದ್ಧಿಯನ್ನೆಲ್ಲರೂ ಹೊಗಳಿ ಬಾಯಲ್ಲಿ ಬೆರಳಿಟ್ಟುಕೊಂಡರು. ಆಗ ಕೂಡಿದವರೂ ಆಚಾರ್ಯರೂ 'ನೀನು ಯಾರ ಮಗನಪ್ಪ! ನಿನ್ನ ಊರು ಯಾವುದು? ಯಾರ ಮನೆಯವನು? ಎಂದು ಮುಂತಾಗಿ ವಿಚಾರಿಸ ತೊಡಗಿದರು. ಹುಡುಗನು ನಮ್ಮೂರು ಕೈದಾಳ ಗ್ರಾಮ. ತಂದೆ ಜಕಣಾಚಾರ್ಯರು. ನಾನು ಹುಟ್ಟುತ್ತಲೇ ನನ್ನ ಜನ್ಮಕುಂಡಲಿಯನ್ನು ತಂದೆ ನೋಡಿ ಲೆಕ್ಕ ತಪ್ಪಿ ಅವರು ನನ್ನ ಹೆತ್ತ ತಾಯಿಯ ಮೇಲೆ ಸಲ್ಲದ ತಪ್ಪು ಹೊರಿಸಿ ಮನೆ ಬಿಟ್ಟು ಹೋದರು. ತಾಯಿಯು ಹೇಗೋ ಜೋಕೆ ಮಾಡಿ ಅಷ್ಟಿದ್ದವನನ್ನು ಇಷ್ಟು ಮಾಡಿದಳು' ಎಂದು ತಮ್ಮ ಮನೆತನದ ಸಮಾಚಾರವನ್ನೆಲ್ಲ ಉಸುರಿದನು. ಅಲ್ಲಿಯೇ ಇದ್ದ ಜಕಣಾಚಾರ್ಯರು ಆನಂದಾತಿಶದಿಂದ ಕುಳಿತ ಸ್ಥಳದಿಂದ ಓಡಿ ಬಂದು ಮಗನನ್ನು ಅಪ್ಪಿಕೊಂಡು ಮುದ್ದಾಡಿದರು. ತಮ್ಮ ತಪ್ಪಿಗಾಗಿ ತಾವೇ ಗೋಳಾಡಿದರು. ಕಣ್ಣೀರಿನ ಕೋಡಿ ಹರಿಸಿದರು. ಆದರೆ ಆಡಿದ ಮಾತನ್ನು ಸುಳ್ಳುಗೊಳಿಸಬಹುದೇ

ಎಂದು ಆಚಾರ್ಯರು ತಮ್ಮ ಬಲಗೈಯನ್ನು ಕಡಿದುಕೊಳ್ಳಲು ಹಾಕಲಿಕ್ಕೆ ಸಿದ್ಧರಾದರು. ಮಗನು, ನೆರೆದವರು, ಅರಸನು ಕೂಡಿಯೇ ಬೇಡ ಬೇಡವೆಂದು ಹೇಳಿದರೂ ಆಡಿದ ಮಾತನ್ನು ನಡೆಸದಿದ್ದರೆ ಬದುಕಿದ್ದು ಪ್ರಯೋಜನವೇನು ಎಂದು ಬಲಗೈ ಕಡಿದೊಗೆದು ಬಿಟ್ಟರು.

ಮುಂದೆ ಅರಸರು ಆಚಾರ್ಯರನ್ನು, ಅವರ ಮಗನನ್ನು ತಮ್ಮಲ್ಲಿಯೇ ಇಟ್ಟುಕೊಂಡು ಚನ್ನಕೇಶವ ದೇವಾಲಯದ ಕಟ್ಟಡವನ್ನು ಮುಗಿಸಲು ಆಜ್ಞಾಪಿಸಿದನು. ಅದನ್ನು ಮುಗಿಸಿದ ನಂತರ ಜಕಣಾಚಾರ್ಯರು ಹುಟ್ಟೂರಾದ ಕೈದಾಳಕ್ಕೆ ಹೋಗಿ ಅಲ್ಲಿಯೂ ತಮ್ಮ ಮಗನೊಂದಿಗೆ ಒಂಟಿ ಕೈಯಿಂದಲೇ ಕೇಶವ ಗುಡಿಯನ್ನು ಕಟ್ಟಿದರು. ಆಗ ಅವರ ಬಲಗೈ ಚಿಗಿಯಿತು. ಮುಂದೆ ಆಚಾರ್ಯರು ಕರ್ನಾಟಕವನ್ನೆಲ್ಲ ಸಂಚರಿಸಿ ಊರೂರಿಗೆ ದೇವಾಲಯಗಳನ್ನು ಕಟ್ಟಿದರು. ಬೇಲೂರಿನಲ್ಲಿ ಚನ್ನಕೇಶವ ದೇವಾಲಯದ ಅಂಗಣದಲ್ಲಿ ಕಪ್ಪೆ ಚೆನ್ನಿಗರಾಯನ ದೇವಾಲಯವು ಇರುವುದು.[೨೨]

**ಸಿದ್ಧಪ್ಪಾಜಿ ಕಥೆ**

ಕನ್ನಡ ಜನಪದ ಸಾಹಿತ್ಯದಲ್ಲಿ ಪಾಂಚಾಳ ಕಮ್ಮಾರರ ಸಿರಿವಂತಿಕೆಯನ್ನು ವರ್ಣಿಸುವ ಕಥೆ ಸಿದ್ಧಪ್ಪಾಜಿಯ ಹಲಗೂರು ಪವಾಡದ ಕಥೆಯಲ್ಲಿದೆ. ಮಂಟೇಸ್ವಾಮಿ ಕಾವ್ಯದಲ್ಲಿ ಈ ಕಥೆಯನ್ನು ಕಾಣುತ್ತೇವೆ. ಮಂಟೇಸ್ವಾಮಿಯ ಶಿಷ್ಯರಲ್ಲಿ ಸಿದ್ಧಪ್ಪಾಜಿ ಪವಾಡಪುರುಷ. ಸಿದ್ಧಪ್ಪಾಜಿಯನ್ನು ಸಿಡಿಲುಮರಿ ಎಂಬುದಾಗಿ ಜನಪದರು ವರ್ಣಿಸಿದ್ದಾರೆ. ಹತ್ತೊಂಬತ್ತರ ಹರೆಯದ ಸಿದ್ಧಪ್ಪಾಜಿ ತನ್ನ ಕುಲದ ಹಲಗೂರು ಪಾಂಚಾಳರ ಮನೆಗೆ ಕಬ್ಬಿಣದ ಭಿಕ್ಷೆಗೆ ಹೋಗುತ್ತಾರೆ. ಅವರು ಹಲಗೂರಿಗೆ ಹೋಗಿ ಮುಟ್ಟಿದಾಗ ಮಾರಿ ಗರ್ಜಿಸಿತು, ಹಗಲೂರು ನಡುಗಿತು ಎಂದು ಜನಪದರು ವರ್ಣಿಸುತ್ತಾರೆ.

ಹಲಗೂರು ಪಾಂಚಾಳರ ಕೇರಿಯಲ್ಲಿ ಏಳುನೂರೈವತ್ತು ಒಕ್ಕಲು. ಇವರಿಗೆ ಏಳು ಜನ ಒಡೆಯರು. ಹಲ್ಲೋಜ, ಚನ್ನೋಜ, ಬೋಲೋಜ, ಬೆಚ್ಚೋಜ, ಕಾಳೋಜ, ಲಿಂಗೋಜ, ನರಸೋಜ ಈ ಏಳು ಮಂದಿ ಧಣಿಗಳು ಕೂಡಿ ಪಗಡೆಯಾಡುತ್ತಿದ್ದರು. ಪಗಡೆಯ ಕೈ ನಿಲ್ಲಿಸಿ ಸಣ್ಣಕ್ಕಿ ಬೋನ ಮೆದ್ದು ಸರಳಮ್ಮ ನೊರೆ ಹಾಲು ಕುಡಿದಿ, ಚೆನ್ನಾಗಿ ಪಟ್ಟಣದ ರಾಮಪುಡಿ ಸಕ್ಕರೆ ಮಾಡಿ ಗಂಟಲನ್ನು ವಾಲಾಡಿಸಿದರು. ಅಷ್ಟರಲ್ಲಿ ಸಿದ್ಧಪ್ಪಾಜಿ ಭಿಕ್ಷೆಗೆ ಬರುವುದು ಕಂಡಿತು.

ಬೀದಿ ಬೀದಿಯಲ್ಲಿ ಭಿಕ್ಷೆ ಬೇಡುತ್ತಾ "ದಾನವ ಕೊಡಿರಯ್ಯಾ ಹಲಗೂರು ಪಾಂಚಾಳರಾ ಭಿಕ್ಷವ ಕೊಡಿರಯ್ಯಾ ಲಕ್ಷ್ಮೀಪತಿಗಳಿರಾ" ಎಂದು ಸಿದ್ಧಪ್ಪಾಜಿ ಕೇಳುತ್ತಾರೆ. ಅವರನ್ನು ಕಂಡ ಏಳು ಧಣಿಗಳು ಕಾಳಮ್ಮನ ಕಾವಲು, ತೆಂಕಲಲ್ಲಿ ವೀರಭದ್ರನ ಕಾವಲು, ಬಡಗಲಲ್ಲಿ ಮೂರು ಕೊಂಬಿನ ಬಸವನ ರಕ್ಷೆ ಇರುವಾಗ ಯಾರು ಬಿಟ್ಟರೋ ಈ ಕಾಡು ಗೊರವನಾ ಎಂದು ಸಿದ್ಧಪ್ಪಾಜಿಯನ್ನು ಅವಮಾನಿಸುತ್ತಾರೆ. ಪಾಂಚಾಳರ ಊರಿನಲ್ಲಿ ಕಬ್ಬಿಣದ ಭಿಕ್ಷೆಯ ಹೊರತು ಬೇರೇನು ಸಿಗಲಾರದು. ನಾವು ಏಳುನೂರೈವತ್ತು ಒಕ್ಕಲು, ಏಳು ಮಂದಿ ದೊರೆಗಳು ಕಬ್ಬಿಣದ ಭಿಕ್ಷೆ ಕೊಟ್ಟಲ್ಲಿ ಹಿಡಿಯುವಂತೆ ಶಕ್ತಿ ನಿನ್ನಲ್ಲಿ ಇದೆಯೋ ಎಂದು ಪ್ರಶ್ನಿಸಿ ಭಿಕ್ಷೆ ನೀಡಲು ಅಣಿಯಾಗುತ್ತಾರೆ.

ಹೆಗ್ಗಲುಮೆಯನ್ನು ಸಾರಿಸಿ ಗುಡಿಸಿ ರಂಗವಲ್ಲಿ ಇಟ್ಟು ನೇಗಿಲ ತುಂಡು ಗಾತ್ರದ ಕಬ್ಬಿಣವನ್ನು ಒಲೆಗೆ ಹಾಕಿದರು. ಇದ್ದಿಲು ಸುರಿದು, ನೆಲ ಹೊಟ್ಟು ಸುರಿದು ಪಾಂಚಾಳರು ತಿದಿ ಒತ್ತಿದ್ದರು. ನಿಗಿನಿಗಿ ಕೆಂಡವಾಯಿತು. ಕಬ್ಬಿಣದ ತುಂಡನ್ನು ನೂರು ಮಂದಿ ಪಾಂಚಾಳರು "ಕೊಂಗಿಕ್ಕಳದಲ್ಲಿ" ಎತ್ತಿದರು. "ಹಿಡಿಯೋ ಪರದೇಶಿ ನಿನ್ನ ಎರಡೂ ಕೈಯ" ಎಂದಾಗ ಸಿದ್ಧಪ್ಪಾಜಿ ಕಣ್ಣು ಮುಚ್ಚಿದರು. ಗುರುಧ್ಯಾನ ಮಾಡಿದರು. ಎರಡೂ ಕೈಯನ್ನು ಮುಂದಕ್ಕೆ ಚಾಚಿದರು. ಕಬ್ಬಿಣ ಕೈ ಮೇಲೆ ಬಿತ್ತು. ಎತ್ತಿ ಕಣ್ಣಿಗೊತ್ತಿಕೊಂಡರು. ಆ ಕಬ್ಬಿಣ ಮೂರು ತುಂಡಾಗಿ ಮುರಿದು ಜೋಳಿಗೆ ಸೇರಿಕೊಂಡಿತು. ಸಿದ್ಧಪ್ಪಾಜಿ ಅಲ್ಲಿ ಪವಾಡ ಮಾಡಿ ಹಲಗೂರಿನ ಪಾಂಚಾಳರನ್ನು ಬೆಚ್ಚಿ ಬೀಳಿಸುತ್ತಾರೆ.

ಆದರೂ ಪಾಂಚಾಳ ಧಣಿಗಳು ಬೆಚ್ಚಲಿಲ್ಲ. ಕಾದ ಕುಲುಮೆ ಮತ್ತೆ ಸಿದ್ಧವಾಯಿತು. ಎತ್ತಿನ ಗಾತ್ರದ ಕಬ್ಬಿಣದ ತುಂಡು ಏಳು ದಿನ ಕಾದಿತ್ತು. ಏಳುದಿನ ಕಾದ ಕಬ್ಬಿಣದ ಗಟ್ಟಿಯನ್ನು ಸಿದ್ಧಪ್ಪಾಜಿ ಎತ್ತುವುದನ್ನು ನೋಡಲು ಕೇರಿಯ ಜನರೆಲ್ಲ ನೆರೆದಿದ್ದರು. ಸಿದ್ಧಪ್ಪಾಜಿ ಒಮ್ಮೆ ಎಡಪಾದದಲ್ಲಿ ಕಬ್ಬಿಣವನ್ನು ಮೆಟ್ಟಿದಾಗ ಎತ್ತಿನ ಗಾತ್ರದ ಆ ತುಂಡು ಹಲಗೂರು ಚಿನ್ನಾಪುರದ ಹೊಳೆಗೆ ಹೋಗಿ ಬೀಳುತ್ತದೆ.

ಏಳು ಮಂದಿ ಪಾಂಚಾಳ ಧಣಿಗಳ ಕಣ್ಣು ಕೆಂಪೇರುತ್ತದೆ. ಅವರು ಪವಾಡವನ್ನು ಒಪ್ಪಿ ಇನ್ನು ಅವನು ಇಲ್ಲದಂತೆ ಮಾಡಿ ಬಿಡಬೇಕೆಂದು ಬಗೆದರು. ಏಳು ಸಾವಿರ ವರಹದ ಆನೆಯ ಗಾತ್ರದ ಪಂಚಲೋಹದ ತುಂಡಿನತ್ತ ಅವರ ದೃಷ್ಟಿ ಹೊರಳಿತು. ಅದನ್ನು ಹನ್ನೆರಡು ದಿನ ಕಾಯಿಸಿದರು. ಅದನ್ನು ಕಾಯಿಸಲು ಬಸವನ ಬೆಟ್ಟದಿಂದ ಏಳು ಸಾವಿರ ಖಂಡುಗ ಬಿದಿರಿನ ಇದ್ದಿಲು ಬಂದಿತ್ತು. ರಾಗಿಯ ಕಣದಗಲದ ಹೆಗ್ಗುಲುಮೆ ಊರ ಮೂಡಲ ಸಣ್ಣ ಹಳ್ಳದ ಅಂಚಿನಲ್ಲಿ ಹದಗೊಂಡಿತ್ತು. ಕುಲುಮೆ ಉರಿಸಲು ಕೋಣದ ತಿದಿಯೇ ಬೇಕಾಯಿತು. ಏಳುನೂರ ಐವತ್ತು ಒಕ್ಕಲು ತಿದಿಯೊತ್ತಿದರು.

ಹನ್ನೆರಡು ದಿನಗಳವರೆಗೆ ಆ ಗೊರವನನ್ನು ಬಂಧನದಲ್ಲಿ ಇರಿಸಿ ಎಂದು ಆದೇಶ ನೀಡಿದರು. ಊರ ದೇವತೆ ಕಾಳಮ್ಮನ ಸುತ್ತ ಏಳುಸುತ್ತಿನ ಬಿಚ್ಚುಗತ್ತಿ ಪಹರೆ ಕಾದಿತ್ತು. ಕಾಳಿಯು ಸೌಮ್ಯ ಸ್ವರೂಪ ತಾಳಿ ಸ್ವಾಮಿಯ ಪಾದಗಳನ್ನು ತನ್ನ ತೊಡೆಯ ಮೇಲಿಟ್ಟು ಒತ್ತಿ ಓಲೈಸಿದಳು. ಸಿದ್ಧಪ್ಪಾಜಿ ತನ್ನ ಗುರು ಮಂಟೇಸ್ವಾಮಿಯನ್ನು ಸ್ಮರಿಸಿಕೊಂಡರು. ಹಲಗೂರ ಹಾದಿಯಲ್ಲಿ ಬರಿಗಾಲ ನಡಿಗೆಯಲ್ಲಿ ಸ್ವಾಮಿ ನಡೆದು ಬಂದರು. ಕಾವಲಿನವರಿಗೆ ಮಾಯದ ನಿದ್ದೆ ಕೊಟ್ಟರು. ಶಿಷ್ಯನನ್ನು ಕರೆದು ಹೊರಗೆ ನಡೆದರು.

ಕುಲುಮೆಯಲ್ಲಿ ಉರಿಯುತ್ತಿರುವ ಆನೆ ಗಾತ್ರದ ಕಬ್ಬಿಣದ ತುಂಡು ಸಿದ್ಧವಾಯಿತು. ಅಷ್ಟರಲ್ಲಿ ಸಿದ್ಧಪ್ಪಾಜಿ ಗುಡಿಯೊಳಗಿಲ್ಲವೆಂದು ಸುದ್ದಿ ಬಂತು. "ಎಲ್ಲಿದ್ದರೂ ಹುಡುಕಿ ತನ್ನಿ ಎಂದು ಧಣಿಗಳ ಅಪ್ಪಣೆಯಾಯಿತು." ಸಿದ್ಧಪ್ಪಾಜಿ ನಸುನಗುತ್ತಾ ಜನಗಳ ಮಧ್ಯೆ ನಿಂತಿದ್ದರು. ದಾರಿ ಸರಿಸಿ ಬಂದು ಪಂಚಲೋಹದ ಗಟ್ಟಿಯ ಮೇಲೆ ಮಲಗಿದರು. ಮಲಗಿದ ಮೇಲೆ ಅವರ ಮೇಲೆ ಇದ್ದಲು ಸುರಿದರು. ಕೋಣದ ತಿದಿಯನ್ನೊತ್ತಿದರು. ತಿದಿಯೊತ್ತಿ ಒತ್ತಿ ಸಾಕಾಗಿ ಒಬ್ಬೊಬ್ಬರಾಗಿ ಬಳಲಿ ಕುಸಿದರು. "ಲೋಹದ ಗಟ್ಟಿ ನೀರಾಗಿ ಹರಿದುಹೋಗಲಿ ಎಂದು ಸಿದ್ಧಪ್ಪಾಜಿ ನುಡಿದನು. ಕಾದ ಗಟ್ಟಿ ನೀರಾಗಿ ಹಲಗೂರು ಬೀದಿಯಲ್ಲಿ ಹರಿದುಹೋಯಿತು.

ಆದರೂ ಏಳು ಮಂದಿ ಧಣಿಗಳ ಮನಸ್ಸು ಕರಗಲಿಲ್ಲ. ಇನ್ನಷ್ಟು ಕಠಿಣ ಪರೀಕ್ಷೆ ನಡೆಸಿದರು. ಮೂರು ತಿಂಗಳು ತುಂಬಿತು. ಕಬ್ಬಿಣದ ಭಿಕ್ಷೆ ದೊರೆಯಲಿಲ್ಲ. ಸಿದ್ಧಪ್ಪಾಜಿ ಸಿಟ್ಟುಗೊಂಡರು. "ಹಲಗೂರಿಗೆ ವಾಂತಿ ಭೇದಿ ಹಬ್ಬಲಿ" ಎಂದು ಶಾಪವಿತ್ತರು. ರೋಗ ಹರಡಿ ಊರಿಗೆ ಬಂದಾಗ ಪಾಂಚಾಳರ ಧಣಿಗಳು ಧೈರ್ಯಗೆಟ್ಟರು. ಸೋತು ಶರಣಾಗಿ ಸಿದ್ಧಪ್ಪಾಜಿಯ ಅಡಿಗೆರಗಿದರು. ಚಿಕ್ಕ ಸಿದ್ಧಪ್ಪಾಜಿ ಜಲಭಾವಿಯಲ್ಲಿ ಪವಡಿಸಿ ಲೋಕಕ್ಕೆ ಮಂಗಳ ಕೋರಿದರು. ಚಿಕ್ಕಲೂರಿನ ಅವರ ತಪೋಭೂಮಿಯಲ್ಲಿ ವರ್ಷಕ್ಕೊಮ್ಮೆ ಆರು ದಿನಗಳ ಕಾಲ ಸಿದ್ಧಪ್ಪಾಜಿಯ ಜಾತ್ರೆ ನಡೆಯುತ್ತದೆ. ಹಲಗೂರು ಪವಾಡದ ಕಥೆ ಕಮ್ಮಾರ ವೃತ್ತಿಯ ಪಾಂಚಾಳರ ವೈಭವನ್ನು ಸಾರುತ್ತದೆ.[೨೩]

ಕಮ್ಮಾರನ ದುಡಿಮೆಯನ್ನು ಮೆಚ್ಚಿ ಲಕ್ಷ್ಮಿ(ಹಣ, ಸಂಪತ್ತು)ಯು ಅವನಲ್ಲಿಯೇ ನೆಲೆಸುವುದೆಂದು ನಿರ್ಧರಿಸಿಕೊಂಡು ಕಮ್ಮಾರನ ಮನೆಗೆ ಬರುತ್ತಾಳೆ. ಲಕ್ಷ್ಮಿ ಮನೆಗೆ ಬಂದದ್ದನ್ನು ಕಂಡು ತುಂಬಾ ಸಂತೋಷಗೊಂಡ ಕಮ್ಮಾರನು ಆಕೆಯನ್ನು ಕರೆದು ಮನೆಯಲ್ಲಿ ಕುಳ್ಳಿರಿಸಿ, ಅವಳಿಗೆ ಅಲಂಕಾರ ಮಾಡಿ ಪೂಜಿಸಿದ. ಇನ್ನೇನು ಲಕ್ಷ್ಮಿ ಸಂತುಷ್ಟಳಾದಳು ಎನ್ನುವಷ್ಟರಲ್ಲಿ ಆಲಂಕಾರಿಕ ಲಕ್ಷ್ಮಿಯನ್ನು ಕಂಡ ಕಮ್ಮಾರನು ಆಕೆಯನ್ನು ಪ್ರೇಮಿಸುವ ಆಸೆಯಿಂದ ಹಿಡಿದುಕೊಳ್ಳಲು ಹೋದ. ಇದರಿಂದ ಕೋಪಗೊಂಡ ಲಕ್ಷ್ಮಿಯು ನೀನೆಷ್ಟು ದುಡಿದರೂ ನನ್ನನ್ನು ಒಲಿಸಿಕೊಳ್ಳಲಾರೆ ಎಂದು ಶಾಪವಿತ್ತು. ನೆರೆಮನೆಗೆ ಹೋಗುತ್ತಾಳೆ. ಆ ಮನೆಯ ಶೆಟ್ಟಿಯು ಆಕೆಯನ್ನು ದೇವರ ಮನೆಗೆ ಕರೆದುಕೊಂಡು ಹೋಗಿ ಅಲಂಕರಿಸಿ ಪೂಜಿಸಿದ. ಪೂಜೆ ಮುಗಿದ ನಂತರ ನಾನು ಹೋಗುವೆ ಎಂದು ಲಕ್ಷ್ಮಿ ಎದ್ದ ತಕ್ಷಣ ಶೆಟ್ಟಿಯು ತನ್ನ ಪಕ್ಕದಲ್ಲಿಯೇ ಇದ್ದ ಒನಕೆಯಿಂದ ಲಕ್ಷ್ಮಿಯ ಎರಡೂ ಕಾಲಿಗೆ ಜೋರಾಗಿ ಹೊಡೆದನು. ಕಾಲು ಮುರಿದುಕೊಂಡ ಲಕ್ಷ್ಮಿಯು ಹೊರಗೆ ಹೋಗಲಾರದೆ ಶಪಿಸತೊಡಗಿದಳು. ಅವಳ ಅಸಹಾಯಕತೆ ಕಂಡು ಶೆಟ್ಟಿಯು ಸಂತುಷ್ಟನಾಗಿ ತಾಯಿ ನಿನ್ನ ಸ್ಥಾನ ನನ್ನ ಮನೆ. ಇದರಾಚೆಗೆ ನೀನು ಹೋಗಬಾರದೆಂದೇ ನಾನು ಈ ರೀತಿ ಮಾಡಿದ್ದು ಎಂದು ತಿಳಿಸಿದ. ಅಂದಿನಿಂದ ಲಕ್ಷ್ಮಿ ಶೆಟ್ಟರ ಮನೆಯ ಪಾಲಾದಳು. ಒಲಿದು ಬಂದ ಲಕ್ಷ್ಮಿಯನ್ನು ಹೊರದೂಡಿದ ಕೀರ್ತಿ ಮಾತ್ರ ಕಮ್ಮಾರನಿಗೆ ಬಂದಿತು.[೨೪]

**ದ್ಯಾಮವ್ವನ ಕಥೆ**

ದ್ಯಾಮವ್ವ ಎಲ್ಲ ಊರುಗಳಲ್ಲಿ ಬಡಿಗೇರ ಮನೆಯ ಹತ್ತಿರ ಇರುವ ಪದ್ಧತಿ ಅಂದಿನಿಂದ ಇಂದಿನವರೆಗೂ ಇದೆ. ಯಾಕೆಂದರೆ ಅದಕ್ಕೆ ಕಾಳಮ್ಮ ಬಡಿಗೇರ ಊರು ಅಂಟರರಾಣಿ ವಯಸ್ಸು ೮೫ ಒಂದು ಕಥೆ ಹೇಳಿದರು. ಅದು, "ಸುಮಾರು ವರ್ಷಗಳಿಂದ ಹಿಂದೆ ದ್ಯಾಮವ್ವನಿಗೆ ವರ್ಷಕ್ಕೊಂದು ಬ್ಯಾಟಿ (ಬಲಿ) ಬೇಕೆಂದು ಆ ಊರಿನ ಪ್ರತಿಯೊಂದು ಮನೆಯಿಂದ ಒಂದು ವರ್ಷಕ್ಕೆ ಒಬ್ಬರು ಬಲಿ ಕೊಡುತ್ತಿದ್ದರು. ಇದು ಆ ಊರಿನ ಅಗಸಿಯಿಂದ ಪ್ರಾರಂಭವಾಗುತ್ತಿತ್ತು. ಊರಿನ ಕಡೆ ದಂಡೆಗೆ ಬಡಿಗೇರ ಮನೆ ಹೀಗೆ ಒಂದೊಂದು ಮನೆಯಲ್ಲಿ ಒಬ್ಬ ವ್ಯಕ್ತಿಯ ಬಲಿ ಬಿಡುತ್ತಿದ್ದರು. ಬಲಿ ಬಿಟ್ಟ ವ್ಯಕ್ತಿ ಎಲ್ಲಿ ಏನು ತಿಂದರೂ ಯಾರೂ ಬೇಡ ಎಂದು ಹೇಳುತ್ತಿದ್ದಿಲ್ಲ. ಬೇಡ ಅಂದರೆ ಅಪಶಕುನ. ಅವನನ್ನು ದೇವರಿಗೆ ಬಿಟ್ಟಿದ್ದಾರೆ ಎಂದು ಜನರಲ್ಲಿ ಭಯ ಇತ್ತು. ವರ್ಷಪೂರ್ತಿ ಸರಿಯಾಗಿ ತಿಂದು ತಿಂದು ಒಳ್ಳೆ ಭರ್ತಿ

ದೇಹ ಬೆಳೆಸಿದಂತೆ ಕಾಣುತ್ತಿದ್ದ. ದ್ಯಾಮವ್ವನ ಜಾತ್ರೆಗೆ ಅವನನ್ನು ಬಲಿ ಕೊಡುತ್ತಿದ್ದರು. ಹೀಗೆ ಪ್ರತಿಯೊಂದು ವರ್ಷ ಪ್ರತಿಯೊಂದು ಮನೆಯಿಂದ ಮನುಷ್ಯನನ್ನೇ ಬಲಿ ಕೊಡುತ್ತಾ ಬಂದರು.

ಒಂದು ವರ್ಷ ಕೊನೆಯದಾಗಿ ಬಡಿಗೇರ ಮನೆಯ ಪಾಳಿ/ಸರತಿ ಬಂತು. ಅದು ಬಡಿಗೇರ ದ್ಯಾಮವ್ವಗ ಅವನ ಜಾತ್ರೆದಿನ ಜಳಕ ಮಾಡಿಸಿ ಪೂಜೆ ಮಾಡಿಸಿ ವರ್ಷಪೂರ್ತಿ "ನೀನು ಎಲ್ಲಿ ಬೇಕಾದರು ಏನಾದರು ತಿನ್ನುತ್ತಾ ಇರಬಹುದು. ನಿನಗೆ ಯಾರು ಏನೂ ಅನುವುದಿಲ್ಲ" ಎಂದು ಗ್ರಾಮದ ಹಿರಿಯರು ಹೇಳುತ್ತಿದ್ದರು. ಅವನ ಬೀದಿಗೆ ಬಿಟ್ಟು ಬಿಡುತ್ತಿದ್ದರು. ಬಡಗಿ ಊರಿನ ಜನ ಹೇಳುವಂತೆ ದಿನಾಲು ತನಗೆ ಬೇಕಾದ ಅಂಗಡಿಯಲ್ಲಿ ರುಚಿ ರುಚಿಯಾವ ತಿಂಡಿ ತಿನಿಸುಗಳನ್ನು ಹೊಟ್ಟೆ ತುಂಬಾ ತಿನ್ನುತ್ತಾ ಇದ್ದ. ಯಾರೂ ಏನೂ ಅನ್ನುವಂತಿರಲಿಲ್ಲ. ಹೀಗೆ ಆ ಬಡಿಗೇರ ದ್ಯಾಮಣ್ಣ ಒಂದು ವರ್ಷ ಕಳೆದ. ಜಾತ್ರೆ ಸಮೀಪ ಬಂತು. ಬಡಗಿ ಏನೋ ವಿಚಾರಿಸುತ್ತಾ ಕುಂತ. ಮೊದಲೇ ಪಾಂಚಾಳದವರು ಎಂದರೆ ಬುದ್ಧಿವಂತರು ಎಂದು ಹೆಸರು ಪಡೆದವರು ಕೊನೆಗೂ ಒಂದು ನಿರ್ಧಾರ ಮಾಡಿ ಸುಮ್ಮನಿದ್ದ.

ಜಾತ್ರೆ ದಿನ ಎಲ್ಲ ಪೂಜೆ ನೈವೇದ್ಯ ಮುಗಿದಿತ್ತು. ಇನ್ನೇನು ಬಲಿ ಕೊಡಬೇಕು ಎಂದು ಊರಿನ ಜನ ಸೇರಿದರು. ಅದರಲ್ಲಿ ಒಬ್ಬ ಹಿರಿಯ ವ್ಯಕ್ತಿ ಬಡಗಿಯನ್ನು ಕೂಗಿ ಕರೆಯುತ್ತಾನೆ. "ಎಲ್ಲಿ ಅದಿ ಬಡಗಿ ಬಾ ಮುಂದಕ" ಅನ್ನುತ್ತಾರೆ. ಬಡಗಿ ದ್ಯಾಮವ್ವನ ಗರ್ಭಗುಡಿಯಲ್ಲಿ ಇರುತ್ತಾನೆ. ನಾ ಒಳಗ ಅದಿನರಿ ಗೌಡ್ರ" ಅಂದ. ಜನರೆಲ್ಲ ಈ ಸಲದ ಬಲಿ ಒಳ್ಳೆಯ ಸಂತೋಷದಿಂದ ಇದೆ ಎಂದು ಮಾತಾಡಿಸಿಕೊಂಡು ಪೂಜೆ ಪ್ರಾರಂಭಿಸುತ್ತಾರೆ. ಬುದ್ಧಿವಂತ ಎಂದು ಅನ್ನಿಸಿಕೊಂಡ ಪಾಂಚಾಳರ ಮಗ ತನ್ನ ಸೊಂಟದಲ್ಲಿ ತಾವು ಕೆಲಸ ಮಾಡುವ ಚೂಪಾದ ಉಳಿ ಮತ್ತು ಕೊಡತಿಯನ್ನು ಇಟ್ಟುಕೊಂಡು ಅವನು ಕರೆದ ಕೂಡಲೆ ದ್ಯಾಮವ್ವನ ನಡು ತಲೆ ಮೇಲೆ ಉಳಿ ಇಟ್ಟು ಕೊಡತಿಯಿಂದ ಒಂದು ಏಟು ಜೋರಾಗಿ ಹೊಡೆದರೆ ಕಟಿಗೆ ದ್ಯಾಮವ್ವನ ಮೂರ್ತಿ ಎರಡು ಹೋಳಾಯಿತು. ಆವಾಗ ದ್ಯಾಮವ್ವ "ಲೋ ಬಡಗಿ ಇನ್ನು ಮುಂದೆ ಎರಡು ಕಾಲಿನ ಬ್ಯಾಟಿ ಬೇಡ, ನಾಲ್ಕು ಕಾಲಿನ ಬ್ಯಾಟಿ ಮಾಡಿರಿ" ಎಂದು ಒಬ್ಬರ ಮೈಯಲ್ಲಿ ಬಂದು ನುಡಿದಳಂತೆ. ಆವಾಗಿನಿಂದ ಕುಂಬಳವತಿ ದ್ಯಾಮವ್ವಗ ಇವತ್ತಿನವರೆಗೂ ನಾಲ್ಕು ಕಾಲಿನ ಬ್ಯಾಟಿ ಮಾಡುತ್ತಾರೆ. ಹೊಸ ಮೂರ್ತಿ ಮಾಡಿಸಿ ಅದು ಬಡಿಗೇರ ಮನೆಯ ಹತ್ತಿರ / ಬಡಿಗೇರ ಓಣಿಯಲ್ಲಿ ದ್ಯಾಮವ್ವನ ಗುಡಿ ಸ್ಥಾಪಿಸಿ ಬಡಿಗೇರನನ್ನೇ ಪೂಜಾರಿಯನ್ನಾಗಿ ನೇಮಕ ಮಾಡಿದ್ದು ತಿಳಿದುಬರುತ್ತದೆ. ಅಂದಿನಿಂದ ದ್ಯಾಮವ್ವ ಪಾಂಚಾಳರಿಂದಲೇ ತನ್ನ ಸೇವೆ ಮಾಡಿಸಿಕೊಳ್ಳುತ್ತಾಳೆ.[೨೫]

**ಜಕಣಾಚಾರ್ಯನ ಕಥೆ**

"ಕ್ರಿ.ಶ. ೧೧ನೆಯ ಶತಮಾನದ ಕೊನೆಗೆ ಜಕಣಾಚಾರ್ಯ ಹೆಸರಿನ ವಿಶ್ವಬ್ರಾಹ್ಮಣ ಕುಲೋತ್ಪನ್ನ ಶಿಲ್ಪಶಾಸ್ತ್ರಜ್ಞ ಮಹಾಪಂಡಿತನು ಹಳೇಬೀಡು ಅಥವಾ ದ್ವಾರಸಮುದ್ರದಲ್ಲಿ ಆಗಿ ಹೋದ. ಆತನು ಒಮ್ಮೆ ದೇಶಾಂತರ ಸುತ್ತುತ್ತಿದ್ದಾಗ ಪುಷ್ಪಗಿರಿ ಹೆಸರಿನ ಪರ್ವತದ ಮೇಲೆ ಆತನ ಹಾಗೂ ವೀರ ಸೋಮೇಶ್ವರ ರಾಜನ ಆಕಸ್ಮಿಕ ಭೇಟಿಯಾಯಿತು. ರಾಜನು ಬಹಳ ಚಿಂತ್ರಾಕ್ರಾಂತನಾಗಿದ್ದುದನ್ನು ನೋಡಿ ಜಕಣಾಚಾರ್ಯನು ಆತನಿಗೆ ಪ್ರಶ್ನೆ ಮಾಡಿದ. 'ರಾಜೇಶ್ವರಾ ನೀನು ಮಹಾಪರಾಕ್ರಮಿ ಸಾರ್ವಭೌಮ

ನೃಪತಿಯಾಗಿದ್ದು ಇಂತಹ ಅರಣ್ಯವಾಸವನ್ನು ಏಕೆ ಸ್ವೀಕರಿಸಿದಿ? ಆಗ ರಾಜನು ನಮ್ರತೆಯಿಂದ ಈ ರೀತಿ ಉತ್ತರಿಸಿದ "ನೀವು ಬ್ರಹ್ಮಸ್ವರೂಪರಾಗಿದ್ದೀರಿ. ಆದ್ದರಿಂದ ನಿಮಗೆ ಎಲ್ಲ ವೃತ್ತಾಂತವೂ ತಿಳಿದೇ ಇದೆ. ನಾನು ಮಹಾರೋಗದಿಂದ ಬಹಳ ಪೀಡಿತನಾಗಿರುವೆ. ಪ್ರಾಣತ್ಯಾಗದ ಹೇತುವಿನಿಂದ ನಾನು ಈ ರೀತಿ ಅರಣ್ಯದಲ್ಲಿ ತಿರುಗುತ್ತಿರುವೆ. ನನ್ನ ಹಿಂದಿನ ಜನ್ಮದ ಪುಣ್ಯದ ಪ್ರಭಾವದಿಂದ ನನಗೆ ನಿಮ್ಮ ದರ್ಶನವಾಯಿತು.

ಜಕಣಾಚಾರ್ಯರು ಹೀಗೆ ಹೇಳಿದರು. "ರಾಜ ಏಳು, ಇಲ್ಲಿ ಹತ್ತಿರವೇ ಒಂದು ಬಾವಿ ಇದೆ. ಅದರಲ್ಲಿ ಸ್ನಾನ ಮಾಡು, ಆಗ ನೀನು ನಿರೋಗಿಯಾಗುವೆ" ಜಕಣಾಚಾರ್ಯನು ಹೇಳಿದ ಪ್ರಕಾರ ರಾಜನು ಸ್ನಾನ ಮಾಡಿದ ಕೂಡಲೇ ಆತನಿಗೆ ದಿವ್ಯದೇಹ ಪ್ರಾಪ್ತವಾಯಿತು. ಆಗ ರಾಜನ ಪೂರ್ಣಭಕ್ತಿಯು ಜಕಣಾಚಾರ್ಯರ ಮೇಲೆ ಉಂಟಾಗಿ ಆತ ಅವರ ಶಿಷ್ಯನಾದ. ರಾಜನಿಗೆ ಶಂಕರನ ದೇವಾಲಯಗಳನ್ನು ಕಟ್ಟಿಸುವ ಬಗ್ಗೆ ದೃಷ್ಟಾಂತವಾಯಿತು. ಜಕಣಾಚಾರ್ಯರು ದೇಶಪರ್ಯಟನೆ ಮಾಡಲು ಹೊರಟಾಗ ಅವರ ಪತ್ನಿಯು ಐದು ತಿಂಗಳ ಗರ್ಭವತಿಯಾಗಿದ್ದಳು. ಅವಳಿಗೆ ಯಥಾಕಾಲಕ್ಕೆ ಪುತ್ರ ಹುಟ್ಟಿದ. ಈ ಪುತ್ರನು ದೊಡ್ಡವನಾದ ಬಳಿಕ ಒಮ್ಮೆ ಒಂದೆಡೆ ಲಗ್ನ ಸಮಾರಂಭಕ್ಕೆ ಹೋದಾಗ 'ಆತ ಪಿತೃ ವಂಶೋತ್ಪನ್ನನಲ್ಲ.' ಎಂದು ಕೆಲವರು ಹೇಳಿ ಆತನಿಗೆ ತಾಂಬೂಲ ದಕ್ಷಿಣೆ ಕೊಡಲಿಕ್ಕೆ ಅಡ್ಡಿ ಮಾಡಿದರು. ಆಗ ಆತನು ಮನೆಗೆ ಬಂದು ತಾಯಿಗೆ ಎಲ್ಲ ವೃತ್ತಾಂತವನ್ನು ಹೇಳಿದ. ಆತ ನನ್ನ ತಂದೆ ಯಾರು? ಹಾಗೂ ಆತ ಎಲ್ಲಿರು ಎಂದು ವಿಚಾರಿಸಿದ. ಆಗ ತಾಯಿಯು ಆತನಿಗೆ ತನ್ನ ಪತಿಯು ಪ್ರವಾಸಕ್ಕೆ ಹೋದದ್ದನ್ನು ಹೇಳಿ ಈ ರೀತಿ ಅಂದಳು. "ನಿನಗೆ ತಂದೆಯಿಲ್ಲ ಅನ್ನುವವರ ಮೂಗು ನಷ್ಟವಾಗಲಿ ಆ ರೀತಿ ಜನರಿಗೆ ಪ್ರತ್ಯಂತರವೂ ಬಂದಿತು. ಆಗ ಜನರಿಂದ ಆತನಿಗೆ ಚಿಂತೆಯಾಯಿತು. ಅನಂತರ ಆತನು ಪಿತೃಶೋಧಾರ್ಥ ದೇಶಾಂತರಕ್ಕೆ ಹೊರಟ. ಜಕಣಾಚಾರ್ಯರು ಬೇಲೂರಿನಲ್ಲಿ ಚನ್ನಕೇಶವ ದೇವಾಲಯದ ಪ್ರತಿಷ್ಠೆ ಮಾಡುತ್ತಿದ್ದರು. ಅಲ್ಲಿ ಪಿತಾ ಪುತ್ರರ ಭೇಟಿಯಾಯಿತು. ಜಕಣಾಚಾರ್ಯರು ದಕ್ಷಿಣ ದಿಕ್ಕಿನಿಂದ ಬಂದದ್ದರಿಂದ ಅವರಿಗೆ ದಕ್ಷಿಣಾಚಾರ್ಯ ಎಂಬ ಹೆಸರು ದೊರಕಿತು. ಅವರು ಮತ್ತು ಪೂರ್ವಾಚಾರ್ಯರಿಬ್ಬರು ಸೇರಿ ಕೈದಾಳೇಶ್ವರ ಹಾಗೂ ಹೊಯ್ಸಳೇಶ್ವರ ದೇವರನ್ನು ಕ್ರಿ.ಶ. ೧೨೫೦ ಸುಮಾರಿಗೆ ಸ್ಥಾಪಿಸಿದರು. ರಾಜನು ತನ್ನ ಅಗಣಿತ ಸಂಪತ್ತನ್ನು ಈ ಪಿತಾಪುತ್ರರ ಕಡೆಯಿಂದ ಅನೇಕ ದೇವಾಲಯ ಕಟ್ಟುವುದಕ್ಕೆ ಖರ್ಚು ಮಾಡಿದ.[೨೬] ಈ ಕಥೆಯಲ್ಲಿ ಜಕಣಾಚಾರ್ಯ ಎಂಬ ಮಹಾಶಿಲ್ಪಿ ವೀರ ಸೋಮೇಶ್ವರ ಅರಸರ ಕಾಯಿಲೆಗೆ ವೈದ್ಯನಾಗಿ ಮತ್ತು ಕೈದಾಳೇಶ್ವರ ಹಾಗೂ ಹೊಯ್ಸಳೇಶ್ವರ ದೇವಾಲಯದ ನಿರ್ಮಾಪಕನಾಗಿ ಈ ಕಥೆಯಲ್ಲಿ ಜಕಣಾಚಾರ್ಯರು ಕಂಡುಬರುತ್ತಾರೆ.

**ಮಹಾಶಿಲ್ಪಿ ಅರಿಷ್ಟನೇಮಿ**

ಚಾವುಂಡರಾಯ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನ ವಿಗ್ರಹವನ್ನು ಮಾಡಿಸಬೇಕೆಂದು ಮನಸ್ಸು ಮಾಡುತ್ತಾನೆ. ಅದಕ್ಕೆ ತಕ್ಕನಾಗಿರುವ ಸಮರ್ಥ ಶಿಲ್ಪಿಯನ್ನು ಹುಡುಕುತ್ತಾನೆ. ಆಗ ಹುಚ್ಚನಂತಿರುವ ಅರಿಷ್ಟನೇಮಿಯಲ್ಲಿ ಈ ಶಕ್ತಿಯನ್ನು ಗುರುತಿಸುತ್ತಾನೆ. ಇಂಥ ಮಹತ್ಕಾರ್ಯವನ್ನು ಈಡೇರಿಸಿಕೊಡಬೇಕೆಂದು

ವಿಜ್ಞಾಪಿಸಿದಾಗ ಶಿಲ್ಪಿಯು ಅಲಕ್ಷ್ಯ ಮಾಡುತ್ತಾನೆ. ಕೊನೆಗೆ ವಿಗ್ರಹ ಕೆತ್ತುವಾಗ ಎದ್ದ ಕಲ್ಲಿನ ಚಕ್ಕೆಯ ತೂಕದಷ್ಟು ಹೊನ್ನು ಕೊಡುವುದಾದರೆ ಮಾಡಿಕೊಡುವುದಾಗಿ ಹೇಳುತ್ತಾನೆ. ಅಂತೆಯೇ ಶಿಲ್ಪಿಯು ಶಿಲ್ಪಿ ಕರ್ಮವನ್ನು ಪ್ರಾರಂಭಿಸುತ್ತಾನೆ. ಕೆತ್ತನೆ ಮಾಡುತ್ತಾ ಶಿಲ್ಪಿಯ ಕೈಗಳು ವ್ರಣಗಳಾಗಿ ಬಿಡುತ್ತವೆ. ಅರ್ಧ ಕೆಲಸವಾಗಿದೆ ಮುಂದೆ ಕೆಲಸ ಮಾಡಲು ಸಾಧ್ಯವಾಗುವುದೇ ಇಲ್ಲ ಶಿಲ್ಪಿಯು ವ್ಯಥಿತನಾಗುತ್ತಾನೆ. ಕೊನೆಗೆ ಶಿಲ್ಪಿಯ ತಾಯಿ ಮತ್ತು ಚಾವುಂಡರಾಯನ ತಾಯಿಯು ಮಹಾಧರ್ಮ ಕಾರ್ಯವೊಂದನ್ನು ಕೈಕೊಂಡಿರುವಾಗ ಲೋಭಿಯಾಗಿ ಹೊನ್ನಿಗೆ ಆಸೆ ಪಡುವುದು ಯೋಗ್ಯವಲ್ಲ. ಆದ್ದರಿಂದಲೇ ಹೀಗೆ ವ್ರಣಗಳಾಗಿವೆ ಎಂದು ಹೇಳುತ್ತಾರೆ. ಅದನ್ನು ಕೇಳಿ ಒಪ್ಪಿದ ಶಿಲ್ಪಿಯು ತಾನು ಅಲ್ಲಿಯವರೆಗೂ ಕೂಡಿಟ್ಟಿದ್ದ ಕಲ್ಲಿನ ಚಕ್ಕೆಯ ಮೂಟೆಗಳನ್ನೆಲ್ಲ ಉರುಳಿಸಿ ಚೆಲ್ಲುತ್ತಾನೆ. ಲೋಭವನ್ನು ಬಿಡುತ್ತಾನೆ. ಕೊನೆಗೆ ಅವನ ಕೈಗಳ ವ್ರಣಗಳು ಗುಣವಾಗುತ್ತವೆ. ಅನಂತರ ಶಿಲ್ಪಿಯು ಕೆಲಸವನ್ನು ಯಶಸ್ವಿಯಾಗಿ ಮಾಡಿ ಪೂರ್ಣಗೊಳಿಸುತ್ತಾನೆ. ಚಾವುಂಡರಾಯನು ಸಂತೋಷಗೊಂಡು ಶಿಲ್ಪಿಯನ್ನು ಸನ್ಮಾನಿಸುತ್ತಾನೆ.[೨೭] ಈ ಕಥೆಯಲ್ಲಿ ಶಿಲ್ಪಿಯು ತಾಯಿಯ ಮಾತು ಕೇಳಿ ತನ್ನ ಕೆಲಸಕ್ಕೆ ಮಹತ್ವ ಕೊಟ್ಟಿದ್ದು ಮತ್ತು ಆದಾಯಕ್ಕೆ ಆಸೆ ಯೋಗ್ಯವಲ್ಲ ಎಂದು ತಿಳಿದು ಶಿಲ್ಪಿ ಕೆತ್ತನೆಯಲ್ಲಿ ಹೆಸರು ಮಾಡಿಕೊಂಡು ಚಾವುಂಡರಾಯನಿಂದ ಗೌರವಿಸಿಕೊಂಡಿದ್ದು ಈ ಕಥೆಯಲ್ಲಿ ಉಲ್ಲೇಖವಾಗಿದೆ.

**ತ್ವಷ್ಟಬ್ರಹ್ಮರ ಕಥೆ**

ಉತ್ತರದ ಕಡೆಯ ಶ್ರೀಗಿರಿ ಎಂಬ ಊರಿನಲ್ಲಿ ಶ್ರೀ ಗಣೋತ್ತಮರಾದ ಕಂಚುಗಾರರು ಭಾಂಡವನ್ನು ಮಾರಾಟ ಮಾಡುತ್ತಾ ಐವತ್ತಾರು ದೇಶವನ್ನು ಸುತ್ತಿ ಕೊನೆಗೆ ಪಶ್ಚಿಮ ದಿಕ್ಕಿನಲ್ಲಿರುವ ಬಳ್ಳಿಗಾವೆ ದೇಶದಲ್ಲಿರುವ ಚಂದ್ರಗುತ್ತಿ ಎಂಬ ನಗರವನ್ನು ಹೊಕ್ಕರು. ಅಲ್ಲಿ ಚಂದ್ರಗುಪ್ತನೆಂಬ ರಾಜೇಂದ್ರನು ಅರಸುಗೈಯುತ್ತಿದ್ದನು. ಕಂಚುಗಾರ ತ್ವಷ್ಟಬ್ರಹ್ಮರು ಆ ನಗರದಲ್ಲಿ ಗುಡಿಯನ್ನು ಹೊಕ್ಕು ತಾವು ತಂದ ಭಾಂಡಗಳ ವ್ಯವಹಾರವನ್ನು ಮಾಡುತ್ತಿದ್ದರು. ನಾಲ್ಕು ಮಾಸಗಳು ಸಂದವು. ಒಂದು ದಿನ ಅರಸನು ಅವರನ್ನು ಕರೆಸಿ ಎತ್ತಿನ ಮೇಲೆ ಹೇರಿದ ಸರಕಿಗೆ ಹತ್ತು ವರಹವನ್ನು, ಕತ್ತೆಯ ಮೇಲೆ ಹೇರಿದ ಸರಕಿಗೆ ಐದು ವರಹವನ್ನು ಹೇರುಸುಂಕ ಎಂದು ಕೊಡಬೇಕು ಎಂದು ಹೇಳಿದನು. ಮಾತಿನ ನಡುವೆ ಅರಸು ಇವರನ್ನು ಸೆಟ್ಟಿಗಳೆಂದು ಸಂಬೋಧಿಸಿದನು. ಅದಕ್ಕೆ ಕಂಚುಗಾರರು ತಾವು ಬೆಲ್ಲ ಜೀರಿಗೆ ಮಾರುವ ಸೆಟ್ಟಿಗಳಲ್ಲವೆಂದೂ, ತಮಗೆ ಸುಂಕವನ್ನು ಹಿಂದೆ ಯಾರೂ ಕೇಳಿರಲಿಲ್ಲ. ಭುವನದೊಳಗೆಲ್ಲಿಯೂ ತಾವು ಸುಂಕ ಕೊಟ್ಟುದ್ದಿಲ್ಲ. ಯಾವ ಭೂಪನೂ ಸುಂಕಕ್ಕಾಗಿ ತಡಹಲಿಲ್ಲ. ತೊತ್ತು ಗರತಿಯನ್ನು ಮಾರಿದರೂ ಕೂಡ ಹತ್ತು ಕಾಸನ್ನು ಕೂಡ ಸುಂಕವಾಗಿ ಕೊಡುವುದಿಲ್ಲ. ಕೇಳಿ ಕುಂದು ಮಾಡಿಕೊಳ್ಳಬೇಡಿರಿ ಎಂದು ಕೈಮುಗಿದು ನಿಂತು, ಆದರೆ ಖಡಾಖಂಡಿತವಾಗಿ ಕಂಚುಗಾರರು ಹೇಳಿದರು. ಇದರಿಂದ ಕೋಪಗೊಂಡ ಅರಸನು ಅವರನ್ನು ದುರ್ಗದ ನಡುವೆ ನೇತುಹಾಕಿದನು ಕಂಚುಗಾರರು ಸತ್ತರು.

ಉತ್ತರ ದೇಶದ ಶ್ರೀಗಿರಿಯಲ್ಲಿ ಈ ಸುದ್ದಿಯನ್ನು ಕೇಳಿದ ಲಲನಾಮಣಿಯರು, ಮಕ್ಕಳು ಹಾಗೂ ಮಿತ್ರರು ಗೋಳಾಡಿದರು. ದುಃಖವನ್ನು ನುಂಗಿಕೊಂಡು ಮಹಿಳೆಯರು ಮಕ್ಕಳನ್ನು ಸಾಕಿ ಬೆಳೆಸಿದರು.

ಐದು ಜನ ಮಕ್ಕಳು ದೊಡ್ಡವರಾದ ಮೇಲೆ ತಮ್ಮ ತಂದೆಯನ್ನು ತೋರಿಸಿರಿ, ಅವರು ಸತ್ತ ದೇಶ ಯಾವುದು? ಎಂದು ತಾಯಿಯರ ಸೆರಗು ಹಿಡಿದು ಪ್ರಲಾಪಿಸಿದರು. ತಾಯಿಯರು ಅದು ಮಕ್ಕಳಾಟಿಕೆಯಲ್ಲ ಎಂದು ಎಷ್ಟು ಹೇಳಿದರೂ ಕೇಳದೆ ನೀವು ನಮಗೆ ವಿಷ ಕುಡಿಸಿರಿ, ತಂದೆಯವರು ಸುರಲೋಕ ಪ್ರಾಪ್ತವಾದ ಮೇಲೆ ನಾವೇನು ಆಚಂದ್ರಾರ್ಕವಾಗಿ ಉಳಿಯುತ್ತೇವೆಯೇ ಎಂದು ಬಹುವಾಗಿ ಪೀಡಿಸಿದರು. ಆಗ ತಾಯಿಯು ಪಶ್ಚಿಮದೇಶದ ಚಂದ್ರಗುತ್ತಿ ನಗರದ, ಚಂದ್ರಗುಪ್ತನೆಂಬ ರಾಜೇಂದ್ರನು ನಿಮ್ಮ ತಂದೆಯವರನ್ನು ಗುತ್ತಿದುರ್ಗವನ್ನೇರಿಸಿ ಶಿರವನ್ನು ಕತ್ತರಿಸಿ ಬಾಲಗಳನ್ನು ಪೂತ್ತಿಸಿದ ಕಡುಪಾತಕಿ. ಅದನ್ನು ನೀವು ಕನಸಿನಲ್ಲಿ ಕೂಡ ನೆನೆಯಬಾರದು ಎಂದು ಹೇಳಿ ಮಕ್ಕಳನ್ನು ಬಿಗಿದಪ್ಪಿದಳು.

ಇದನ್ನು ಕೇಳಿದ ಮಕ್ಕಳು ಕೋಪದಿಂದ ಶಿವತಾಂಡವ ಮಾಡಿದರು. ನೃತ್ಯ, ನಾಟ್ಯವನ್ನು ಕಲಿತರು. ಕಾಲಲ್ಲಿ ಗೆಜ್ಜೆಯನ್ನು ತಲೆಯಲ್ಲಿ ದಂಡೆ ಬಾಸಿಂಗವನ್ನು ಧರಿಸಿ ಮೇಳದವರ ಜೊತೆಗೂಡಿ ದೇಶವನ್ನು ಸಂಚರಿಸಿ ಪಶ್ಚಿಮದ ಬಳ್ಳಿಗಾವೆ ದೇಶವನ್ನು ಪ್ರವೇಶಿಸಿದರು. ಅಲ್ಲಿ ಇವರ ನೃತ್ಯವನ್ನು ನೋಡಿದ ಪುರಜನರು ಸಂತೋಷಗೊಂಡು ದ್ರವ್ಯವನ್ನು ಚೆಲ್ಲಿದರು. ಚಂದ್ರಗುತ್ತಿ ನಗರದಲ್ಲಿ ಚಂದ್ರಗುಪ್ತನೆಂಬ ಅರಸನಿದ್ದಾನೆ. ಅವನು ಕಪ್ಪಕಾಣಿಕೆಗಳಿಂದ ಶ್ರೀಮಂತನಾಗಿದ್ದಾನೆ. ಅಲ್ಲಿಗೆ ಹೋಗಿರಿ ಎಂದು ಹೇಳಿದರು. ಅಂತೆಯೇ ಬಾಲಕರು ಪ್ರಯಾಣಗತಿಯಲ್ಲಿ ಚಂದ್ರಗುತ್ತಿಗೆ ಬಂದು ಅಲ್ಲಿ ಒಂದು ಗುಡಿಯನ್ನು ಹೊಕ್ಕರು. ದೊಡ್ಡ ಚಿಕ್ಕ ಅಂಗಡಿಗಳ ಮುಂದೆ ಆಟ ತೋರಿಸಿದರು. ಈ ರೀತಿ ಆರು ತಿಂಗಳು ಕಳೆಯಿತು. ಕೊನೆಗೆ ರಾಜನ ಭೇಟಿಯಾಯಿತು. ಅವನು ವೀಳೆಯವನ್ನಿತ್ತು ಆಹ್ವಾನಿಸಿದನು. ಆದರೆ ಮಕ್ಕಳು ತಮಗೆ ವಿದ್ಯೆಯನ್ನು ಹೇಳಿಕೊಡುವ ಕಾಳಿಕಾದೇವಿಯ ವ್ರತದ ಅಂಗವಾಗಿ ತಾವು ಗಳಿಸಿದ್ದರಲ್ಲಿ ಅರ್ಧವನ್ನು ಊರಿಗೆ ಕಳಿಸಿ ಉಳಿದ ಹಣದಲ್ಲಿ ಆಟ ಆಡುತ್ತಿದ್ದರು.

ವ್ರತ ಮುಗಿದ ಮೇಲೆ ಗೆಜ್ಜೆಕಟ್ಟಿ ಹಲಗೆಯನ್ನು ಖಡ್ಗವನ್ನು ಹಿಡಿದು ಕುಣಿಯುತ್ತಾ ನೃಪನ ಓಲಗಕ್ಕೆ ಬಂದರು. ರಾಜನನ್ನು ಸ್ತುತಿಸಿದರು. ಆಟದಲ್ಲಿ ರಾಜನಿಗೆ ಊಟದಿಚ್ಚೆಯೇ ಮರೆಯುವಂತೆ ಮಾಡಿದರು. ಆಡಿ ನಗಿಸಿದರು. ರಾಜ ಆಭರಣಗಳ ಇನಾಮು ಕೊಟ್ಟನು. ಹೀಗೆ ಇಪ್ಪತ್ತೊಂದು ದಿನಗಳು ಸಂದವು. ಇದು ಕೇವಲ ಹಾಸ್ಯದ ಆಟವಲ್ಲ ಎಲ್ಲ ರಾಣಿಯರು ಮಕ್ಕಳು ಪರಿವಾರದವರೂ ನೋಡಬೇಕಾದುದು ಎಂದು ಹೇಳಿ ಎಲ್ಲರನ್ನೂ ಕರೆಸಿದರು. ಎಲ್ಲರೂ ಸೇರಿದ ಮೇಲೆ ಈ ಐವರು ತ್ವಷ್ಟವಂಶಾನ್ವಯರಾದ ಮಕ್ಕಳ ರಾಜ, ರಾಣಿ, ಮಕ್ಕಳು ಮತ್ತು ಪರಿವಾರದವರನ್ನೆಲ್ಲ ಕೊಂದರು. ಆನೆ ಕುದುರೆಗಳು ಸತ್ತವು. ಅರಮನೆಗೆ ಬೆಂಕಿ ಇಟ್ಟರು. ಅನಂತರ ಐವರೂ ತಮ್ಮ ದೇಶಕ್ಕೆ ಮರಳಿದರು.[೨೮]

**ಪೆರುಂತಚ್ಚನ**

"ಪೆರುಂತಚ್ಚನ ಎಂಬ ಮುಖ್ಯ ಮರಗೆಲಸದ ಕುಶಲಕರ್ಮಿಯು ತನ್ನ ವೃತ್ತಿ ಮಾತ್ಸರ್ಯದಿಂದ ತನ್ನ ಮಗನನ್ನೆ ಕೊಂದುಬಿಡುತ್ತಾನೆ. ಹೀಗೆ ಕೇರಳದಲ್ಲಿ ಕೆಲಸಗಾರರ ಕುಟುಂಬದಲ್ಲಿ ಬಿಗಿಯಾದ ಕೌಟುಂಬಿಕ ಸಂಬಂಧವಿದ್ದರೂ ಕೂಡ ಮುಖ್ಯ ಕುಶಲಕೆಲಸಗಾರರು ತಮ್ಮ ಶಿಷ್ಯನ ಬಗ್ಗೆ ಕಟುವಾಗಿಯೇ ನಡೆದುಕೊಳ್ಳುತ್ತಿದ್ದರು. ಕೆಲಸವನ್ನು ಕಲಿಯಲು ಬಂದ ಉದ್ಯೋಗಾರ್ಥಿಯು ತನ್ನ ಯಜಮಾನನ

ಅಡುಗೆ ಮಾಡಬೇಕಾಗಿತ್ತು. ಬಟ್ಟೆ ಒಗೆಯಬೇಕಾಗಿತ್ತು. ಉಪಕರಣಗಳ ಪೆಟ್ಟಿಗೆಯನ್ನು ಹೊತ್ತು ನಡೆಯಬೇಕಾಗಿತ್ತು. ಅನೇಕ ಸಾರಿ ಯಜಮಾನನು ಬೈಯುತ್ತಿದ್ದ ಒದೆಯುತ್ತಿದ್ದ.[೨೯]

**ಆಚಾರಿಯ ಕಥೆ**

"ಒಂದೂರಿನಲ್ಲಿ ಒಬ್ಬ ಆಚಾರಿಯು ಇರುತ್ತಾನೆ. ಅವನಿಗೆ ಇಬ್ಬರು ಹೆಂಡಿರು. ಆಚಾರಿಯು ಒಂದು ದಿನ ಕೆಲಸದ ಮೇಲೆ ಊರು ಬಿಟ್ಟು ಹೋಗುತ್ತಾನೆ. ವರ್ಷಾನುಗಟ್ಟಲೆ ಬರುವುದೇ ಇಲ್ಲ. ಅವನ ಹೆಂಡಿರು ದಿನಾಲು ಕಾಯುತ್ತಾ ಇರುತ್ತಾರೆ. ಹೀಗೆ ಒಂದು ವರ್ಷ ಕಾದು ಸಾಕಾಗಿ ಹೋಗಿರುತ್ತದೆ. ಹಿರಿಯ ಹೆಂಡತಿಯು ತನ್ನ ಯಜಮಾನ ಇಷ್ಟು ದಿನವಾದರೂ ಬರಲಿಲ್ಲ ಅವನು ಸತ್ತು ಹೋಗಿರಬೇಕು ಎಂದು ಅಂದುಕೊಂಡು ಕುಂಕುಮ ಬಳೆಯನ್ನೆಲ್ಲ ತೆಗೆದು ವೈಧವ್ಯವನ್ನು ಸ್ವೀಕರಿಸುತ್ತಾಳೆ. ಆದರೆ ಚಿಕ್ಕ ಹೆಂಡತಿಯು ಎಂದಿದ್ದರೂ ತನ್ನ ಗಂಡ ಬಂದೇ ಬರುತ್ತಾನೆಂದು ನಂಬಿಕೆಯಿಂದ ಇರುತ್ತಾಳೆ. ಆಕೆ ತನ್ನ ಕುಂಕುಮವನ್ನು ತೆಗೆಯುವುದಿಲ್ಲ. ಹೀಗೆ ಇರುವಾಗ ಒಂದು ದಿನ ಆಚಾರಿಯು ಮನೆಗೆ ಬಂದು ಬಿಡುತ್ತಾನೆ. ತನ್ನ ಕಿರಿಯ ಹೆಂಡತಿಯ ನಂಬಿಕೆ ಸುಳ್ಳಾಗಲಿಲ್ಲ. ಆಚಾರಿ ತನ್ನ ಕಿರಿಯ ಹೆಂಡತಿ ಮಕ್ಕಳ ಜೊತೆ ಸಂಸಾರ ಮಾಡಿಕೊಂಡು ಇರುತ್ತಾನೆ.[೩೦] ಆಚಾರಿಯ ಕಿರಿಯ ಹೆಂಡತಿಯ ವಿಶ್ವಾಸ, ನಂಬಿಕೆ ಎದ್ದು ಕಾಣುತ್ತದೆ. ಮನೆಯಿಂದ ಹೋದ ಆಚಾರಿ ಒಂದು ದಿನ ಬಂದೇ ಬರುತ್ತಾನೆ ಎಂಬ ನಂಬಿಕೆ ಎಂದು ಕೈ ಬಿಡಲಿಲ್ಲ. ಕೊನೆಗೂ ಆಚಾರಿ ಬಂದ ಬಗ್ಗೆ ಈ ಕಥೆ ಹೇಳುತ್ತದೆ.

**೪.೩. ವಾದ್ಯಪ್ರಧಾನ ಪ್ರಕಾರಗಳು**

ಡೊಳ್ಳು: ಕನ್ನಡ ನಾಡಿನ ಬಹುಮುಖ್ಯ ಚರ್ಮವಾದ್ಯವಾದಗಳಲ್ಲಿ ಡೊಳ್ಳು ವಾದ್ಯ ಒಂದಾಗಿದೆ. ಇದೊಂದು ಬೃಹತ್‌ವಾದ್ಯ. ಇದರ ಪಡಗವನ್ನು ಹೆಬ್ಬೇವು, ಹೊನ್ನಮರಗಳ ಕಟ್ಟಿಗೆಯಿಂದ ಪರಿಣತ ಬಡಗಿಯೊಬ್ಬ ತಯಾರಿಸುತ್ತಾರೆ. ಸುಮಾರು ಎರಡೂವರೆ ಅಡಿ ಉದ್ದದ ಮರದ ತುಂಡನ್ನು ಕತ್ತರಿಸಿ ಅದರ ಒಳಭಾಗದ ತಿರುಳನ್ನು ಸೂಕ್ಷ್ಮವಾಗಿ ತೆಗೆದು ಟೊಳ್ಳು ಮಾಡುತ್ತಾರೆ(ಸಿಲಿಂಡರಿನಾಕಾರ). ಈ ಡೊಳ್ಳು ವಾದ್ಯದ ಪಡಗವನ್ನು ಸ್ವತಃ ನನ್ನ ತಂದೆಯವರಾದ ಚಂದಪ್ಪ ಬಡಿಗೇರ ಇವರು ಕಲಾತ್ಮಕವಾಗಿ ತಯಾರಿಸಿದ್ದನ್ನು ಬಾಲ್ಯದಲ್ಲಿ ಗಮನಿಸಿದ್ದೇನೆ. ಡೊಳ್ಳಿನ ಪಡಗದ ತಯಾರಿಕೆಗೊಂದು ಆಚರಣೆ ಇರುವುದು ಗಮನಾರ್ಹ.

ಒಂದು ಗೊತ್ತಾದ ದಿನದಂದು ಕುರುಬಗೌಡ ತನ್ನ ಸಮುದಾಯದ ಹಿರಿಯರೊಂದಿಗೆ ಮಂಗಳವಾದ್ಯ ಕಳಸ ಹಾಗೂ ಉಲುಪಿಯೊಂದಿಗೆ ಬಡಿಗೇರ ಮನೆಗೆ ಬಂದು ಡೊಳ್ಳಿನ ಪಡಗ ಮಾಡಲು ಆಮಂತ್ರಣ ಕೊಡುತ್ತಾನೆ. ಈ ಆಮಂತ್ರಣವನ್ನು ಸ್ವೀಕರಿಸುವ ಬಡಗಿ ನಿರ್ದಿಷ್ಟ ದಿನದಂದು ಶ್ರದ್ಧೆಯಿಂದ ಕಟ್ಟಿಗೆಯನ್ನು ತಂದು ತನ್ನ ಜಾಣ್ಮೆಯನ್ನು ಬಳಸಿ ಪಡಗವನ್ನು ತಯಾರಿಸುತ್ತಾನೆ. ಪಡಗ ತಯಾರಾದ ನಂತರ ಮತ್ತೆ ಕುರುಬಗೌಡ ವಾದ್ಯ ಹಾಗೂ ಉಲುಪಿಯೊಂದಿಗೆ ಬಡಗಿಗೌಡನ ಮನೆಗೆ ಬಂದು ಪಡಗವನ್ನು ಪೂಜಿಸಿ ದಕ್ಷಿಣ ಇಟ್ಟು ಸಾದ್ಯವಿದ್ದರೆ ಬಡಗಿಗೌಡರಿಗೆ ಬಟ್ಟೆ ಆಯೇರಿ ಮಾಡಿ ಮೆರವಣಿಗೆಯಲ್ಲಿ ತಮ್ಮ ಓಣಿಗೆ ತೆಗೆದುಕೊಂಡು ಹೋಗುತ್ತಾರೆ. ಪಡಗ ತಯಾರಿಕೆ ಒಂದು ಆಚರಣೆಯಾದಂತೆ ಅದೊಂದು ಕೌಶಲ್ಯವೂ

ಆಗಿರುವುದನ್ನು ಇಲ್ಲಿ ಕಾಣುತ್ತೇವೆ. ಡೊಳ್ಳುವಾದ್ಯದದ ಪಡಗ ತಯಾರಿಕೆಯಲ್ಲಿ ಬಡಗಿ ಪರಿಣತನಾದದ್ದನ್ನು ಇಲ್ಲಿ ನೋಡುತ್ತೇವೆ.

**೪.೩.೧. ಕೊಂಬು ಕಹಳೆ**

ಕೊಂಬು ಕಹಳೆಗಳು ಗಾಳಿ ವಾದ್ಯಗಳು. ಕಹಳೆಯನ್ನು 'ಸಿಂಗ' 'ಕೊಂಬು' ಹೆಸರುಗಳಿಂದಲೂ ಕರೆಯುತ್ತಾರೆ. ಕೊಂಬು ಕಹಳೆಯನ್ನು ಪಾಂಚಾಳರಲ್ಲಿ ಒಬ್ಬರಾದ ಕಂಚುಗಾರರು ತಯಾರಿಸುತ್ತಾರೆ. ಬಾಗಲಕೋಟೆಯ ಜಮಖಂಡಿ ತಾಲ್ಲೂಕಿನ ಹನಗಂಡಿ ಗ್ರಾಮದ ಈಶ್ವರಪ್ಪ ಕಂಚುಗಾರ ಅವರು ಇಂತಹ ವಾದ್ಯವನ್ನು ತಯಾರಿಸುವಲ್ಲಿ ಹೆಸರು ಮಾಡಿದ್ದಾರೆ. ಜೊತೆಗೆ ಅವರ ಮೂಲ ವೃತ್ತಿ ಕೂಡ ಲೋಹ, ಕಂಚು, ಹಿತ್ತಾಳೆಗಳ ಮೂಲಕ ಮೂರ್ತಿಗಳು, ವಾದ್ಯಗಳನ್ನು ಮಾಡುವುದು. ಕೊಂಬು ಮತ್ತು ಕಹಳೆಯನ್ನು ಲೋಹ ಅಥವಾ ಹಿತ್ತಾಳೆಯಿಂದ ಮಾಡುತ್ತಾರೆ. ಕಂಚುಗಾರರು ಹಿತ್ತಾಳೆಯಿಂದ ತಯಾರಿಸಿದ ಕೊಂಬು ಹೆಚ್ಚು ನಾದವನ್ನು ಹೊರಡಿಸುತ್ತದೆ. ಇದು ನೋಡಲು ಎತ್ತಿನ ಕೊಂಬಿನಂತಿದ್ದು ಇದನ್ನು ಕೊಂಬು ಕಹಳೆ ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಕಹಳೆ ಅರ್ಧವರ್ತುಲಾಕಾರದಲ್ಲಿರುತ್ತದೆ. ಊದುವ ಭಾಗ ಒಂದು ಇಂಚು ದಪ್ಪ ಇರುತ್ತದೆ. ಒಂದು ಇಂಚಿನ ವೃತ್ತಾಕಾರದಿಂದ ಪ್ರಾರಂಭವಾಗಿ ತುದಿಯಲ್ಲಿ ಸುಮಾರೂ ನಾಲ್ಕು/ಐದು ಇಂಚಿನಷ್ಟು ಅಗಲವಾಗಿರುತ್ತದೆ. ಎರಡು ತುದಿಗಳ ನಡುವಿನ ಅಂತರ ಸುಮಾರು ಐದು ಅಡಿ ಇರುತ್ತದೆ. ಕೊನೆಯ ಭಾಗದಲ್ಲಿ ಗಗ್ಗರಿ ಆಕಾರದ ಅಲಂಕಾರ ಇರುತ್ತದೆ.

**೪.೩.೨. ಚೌಡಿಕೆ**

ಬಾಗಲಕೋಟೆ, ಧಾರವಾಡ, ಬಿಜಾಪುರ, ಬೆಳಗಾವಿ ಹೀಗೆ ಉತ್ತರಕರ್ನಾಟಕದಾದ್ಯಂತ ಹೀಗೆ ವ್ಯಾಪಕವಾಗಿ ಹಾಗೂ ದಕ್ಷಿಣ ಕರ್ನಾಟಕದ ಅಲ್ಲಲ್ಲಿ ಚೌಡಿಕೆ ಸಂಪ್ರದಾಯ ಜನಪ್ರಿಯವಾಗಿದೆ. ಚೌಡಿಕೆ ಎನ್ನುವ ವಾದ್ಯ ವಿಶೇಷದೊಂದಿಗೆ ತಳುಕು ಹಾಕಿಕೊಂಡಿರುವ ಈ ಕಲೆ ಗೀತಪ್ರದಾನವಾದುದಾಗಿದ್ದು, ಯಲ್ಲಮನ ಆರಾಧನೆಯ ಪ್ರಮುಖ ಗುರಿಯುಳ್ಳದ್ದು. ಈ ವಾದ್ಯವನ್ನು ಪಾಂಚಾಳರು ತಯಾರಿಸುವುದು ವಿಶೇಷ. ಮರದ ತುಂಡು ಅಥವಾ ತಾಮ್ರದ ಪುಟ್ಟ ಕೊಳಗಕ್ಕೆ ಚರ್ಮದ ಹೊದಿಕೆ ಎರಡು/ಎರಡುವರೆ ಅಡಿ ಉದ್ದದ ಕುರಿಯ ಕರುಳಿನ ಬೆಸೆದಾರವನ್ನು ಕೊಳಗದ ಮಧ್ಯದ ರಂಧ್ರದಿಂದ ತಂದು ಗೆಜ್ಜೆ ಮತ್ತು ಗಗ್ಗರಗಳನ್ನು ಕಟ್ಟಿದ ಆರು ಇಂಚಿನ ಕಟ್ಟಿಗೆಯ ದಾರವನ್ನು ಮೀಟಿದರೆ ಇಂಪಾದ ಸದ್ದು ಹೊರಡುತ್ತದೆ. ಈ ಚೌಡಿಕೆ ವಾದ್ಯದ ಪ್ರಧಾನ ಸದ್ದಿಗೆ ತಾಳ, ಸಂಬಾಳ ಹಾಗೂ ತುಂತುಣಿ ಇರುತ್ತವೆ. ತುಂತುಣಿ ನೋಡಲು ಚೌಡಿಕೆಯ ರೀತಿಯಲ್ಲಿಯೇ ಕಾಣುತ್ತದಾದರೂ ಅದಕ್ಕೆ ಕರುಳಿನ ಬೆಸೆದಾರದ ಬದಲು ತಾಮ್ರದ ತಂತಿಯನ್ನು ಉಪಯೋಗಿಸುತ್ತಾರೆ. ಇದು ಶೃತಿಯ ಕೆಲಸ ಮಾಡುತ್ತದೆ. ತಾಳ ಅಥವಾ ಸಂಬಾಳ, ತುಂತುಣಿ ಹಾಗೂ ಚೌಡಿಕೆಯನ್ನು ಹಿಡಿದ ಕಲಾವಿದರು ತಮ್ಮ ಆರಾಧ್ಯ ದೈವವಾದ ಯಲ್ಲಮ್ಮನ ಬಗ್ಗೆ ಹಾಡುತ್ತಾ ನರ್ತಿಸುತ್ತಾರೆ.

**೪.೩.೩. ಜಗ್ಗಲಿಗೆ**

ಜಗ್ಗಲಿಗೆ ಒಂದು ಚರ್ಮದ ದೊಡ್ಡ ವಾದ್ಯ. ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲೂಕಿನ ಅನೇಕ ಹಳ್ಳಿಗಳಲ್ಲಿ ಈ ವಾದ್ಯ ಕಂಡುಬರುತ್ತದೆ. ಈ ವಾದ್ಯವನ್ನು ಹಳ್ಳಿಯ ಗೌಡ, ಕುಲಕರ್ಣಿ, ಸ್ಥಿತಿವಂತರು,

ದೇವಸ್ಥಾನದ ಮುಖ್ಯಸ್ಥರು ಕಮ್ಮಾರ ಮತ್ತು ಬಡಿಗೇರ ಕಡೆಯಿಂದ ತಯಾರಿಸಿರುತ್ತಾರೆ. ಇದನ್ನು ಹೋಳಿ ಹಬ್ಬ, ಯುಗಾದಿ, ಬಸವ ಜಯಂತಿ, ದಸರಾ, ದೀಪಾವಳಿ ಮತ್ತು ಊರಿನ ಜಾತ್ರೆಗಳಲ್ಲದೆ ವಿಶೇಷ ಉತ್ಸವ ಸಭೆ ಸಮಾರಂಭಗಳ ಮೆರವಣಿಗೆಯಲ್ಲಿ ಈ ವಾದ್ಯವನ್ನು ಬಾರಿಸುತ್ತಾರೆ. ಈ ಜಗ್ಗಲಿಗೆಯನ್ನು ತಯಾರಿಸಲು ಪಾಂಚಾಳರು ಚಕ್ಕಲಿ ಗಾಲಿಯ ಹಳಿಯನ್ನಾಗಲಿ ಅಥವಾ ತಮ್ಮಲ್ಲೇ ತಯಾರಿಸುವ ಕಬ್ಬಿಣದ ಸಲಕೆಯನ್ನಾಗಲಿ ದುಂಡಗೆ ಮಾಡಿಕೊಂಡಿರುತ್ತಾರೆ. ಇದು ಐದು ಅಡಿ ಎತ್ತರವಿರುತ್ತದೆ. ಇದಕ್ಕೆ ಎತ್ತು, ಆಕಳು, ಕೋಣದ ಚರ್ಮವನ್ನು ಬಳಸುತ್ತಾರೆ. ಪಾಂಚಾಳರು ಚಕ್ಕಡಿ ಗಾಲಿ ಆಕಾರದ ಕಬ್ಬಿಣದ ಅಥವಾ ಕಟ್ಟಿಗೆಯದ್ದನ್ನು ತಯಾರಿಸಿರುತ್ತಾರೆ. ನಂತರ ಆ ವಾದ್ಯದ ಧ್ವನಿ(ಸೌಂಡ್) ಗಮನಿಸುವಂತ ಅನುಭವಸ್ಥ ಹಿರಿಯರ ಸಮ್ಮುಖದಲ್ಲಿ ಇತರೆ ಸಮುದಾಯದವರು ಈ ವಾದ್ಯಕ್ಕೆ ಚರ್ಮವನ್ನು ಗಟ್ಟಿಯಾಗಿ ಸುತ್ತಿ ಕಾಯಿಸಿ ಬಾರಿಸುತ್ತಾರೆ. ಈ ಧ್ವನಿಯನ್ನು ಹಿರಿಯರು ಅಂತಿಮ ನಿರ್ಧಾರವಾಗುತ್ತದೆ. ನಂತರ ಜಗ್ಗಲಿಗೆಯ ಹಿಂಭಾಗದಲ್ಲಿ ಚಕ್ರದ ಕೆಳಗೆ ಒಂದು ಲೋಹದ ಬಳೆ ಇರುತ್ತದೆ. ಹಲಗೆಯ ಮೇಲೆ ವಿವಿಧ ಬಣ್ಣಗಳಿಂದ ತ್ರಿಕೋನಾಕಾರದಲ್ಲಿ ಚಿತ್ರ ಬಿಡಿಸಿರುತ್ತಾರೆ. ಜಾತ್ರೆ ಉತ್ಸವದಲ್ಲಿ ಈ ವಾದ್ಯವನ್ನು ಬಡಿಯುವ ಸಂದರ್ಭದಲ್ಲಿ ಆಸಕ್ತಿವಂತರು ಭಾಗವಹಿಸುತ್ತಾರೆ. ಪಾಂಚಾಳರು ಜಗ್ಗಲಿಗೆಯನ್ನು ತಯಾರಿಸಿಕೊಂಡಿರುವುದರ ಜೊತೆಗೆ ತಾವು ಬಾರಿಸಿದ್ದು ಕಾಣಬಹುದು.

**೪.೩೪. ತಮಟೆ ವಾದ್ಯ**

ತಮಟೆ ವಾದ್ಯವನ್ನು ಪಾಂಚಾಳರು ತಯಾರಿಸಿದ್ದು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿದ್ದೇನೆ. ಇದನ್ನು ಹುನಗುಂದ ತಾಲೂಕಿನ ವೀರಾಪುರ ಗ್ರಾಮದಲ್ಲಿ ಗಿರಿಯಪ್ಪ ಬಡಿಗೇರ ತಯಾರಿಸಿದ್ದು ಗಮನಿಸಿದ್ದೇನೆ. ಇದರ ತಯಾರಿಕೆ ಸರಳವಾದುದು. ಬಡಿಗೇರ/ಕಂಬಾರ ಒಂದು ವೃತ್ತಾಕಾರವಾದ ಮರದ ಇಲ್ಲವೇ ಕಬ್ಬಿಣದ ಬಳೆಯನ್ನು ಸಿದ್ಧಗೊಳಿಸಲಾಗುತ್ತದೆ. ಈ ಬಳೆಗೆ ನಾಲ್ಕು ಮೂಲೆಗೆ ಮೊಳೆ ಹೊಡೆದು ಬಿಗಿಗೊಳಿಸುತ್ತಾರೆ. ಮರದ ಬಳೆಗಾದರೆ ಹೊನ್ನೇರುಮರ, ಹಲಸಿನ ಮರದ ಕಟ್ಟಿಗೆ ಬಳಸಿದರೆ ಉತ್ತಮ ತಮಟೆಯಾಗುತ್ತದೆ ಎನ್ನುತ್ತಾರೆ. ಕಬ್ಬಿಣದ ಬಳೆಗಾದರೆ ಬಂಡಿಯ ಚಕ್ರದ ಪಟ್ಟಾವನ್ನು ಉಪಯೋಗಿಸುತ್ತಾರೆ. ಈ ಬಳೆಯ ವ್ಯಾಸ ಸುಮಾರು ಅರ್ಧ ಅಂಗುಲದಿಂದ ಒಂದುವರೆ ಅಡಿಯಾಗಿರುತ್ತದೆ. ಪಾಂಚಾಳರು ಕಬ್ಬಿಣದ್ದೊ ಅಥವಾ ಮರದ್ದೊ ಬಳೆಯ ಆಕಾರದ್ದನ್ನು ತಯಾರಿಸಿ ಕೊಡುತ್ತಾರೆ. ಅಷ್ಟೇ ಅಲ್ಲದೆ, ಪಾಂಚಾಳರು ತಮ್ಮ ವೃತ್ತಿಯ ಬಿಡುವಿನಲ್ಲಿ ಖಾಲಿ ಇದ್ದ ಸಂದರ್ಭದಲ್ಲಿ ಇಂತಹ ಹಲವಾರು ಬಳೆಗಳನ್ನು ತಯಾರಿಸಿ ಇಟ್ಟಿರುತ್ತಾರೆ. ಅವರ ಊರಿನ ಅಕ್ಕಪಕ್ಕದವರು ಸಹ ಬಂದು ತೆಗೆದುಕೊಂಡು ಹೋಗುವುದನ್ನು ಗಿರಿಯಪ್ಪ ಬಡಿಗೇರ ಅವರು ನೆನಪಿಸಿಕೊಳ್ಳುತ್ತಾರೆ. ಇವರು ಸುಮಾರು ಇಪ್ಪತ್ತು, ಮೂವತ್ತು ವರ್ಷಗಳಿಂದ ಬಡಗಿ ವೃತ್ತಿ ಮಾಡುತ್ತಾ ಬಂದಿದ್ದಾರೆ. ಆಗಿನ ಕಾಲದಲ್ಲಿ ತಮಟೆಯ ಬಳೆಯ ಆಕಾರದ್ದನ್ನು ತಯಾರಿಸಿಕೊಡುತ್ತಿದ್ದರು. ಅದನ್ನು ಮಾದಿಗರು ತಮಗೆ ಯಾವ ಚರ್ಮದ್ದು ಬೇಕು, ಯಾವ ಚರ್ಮದ್ದು ಹಾಕಿದರೆ ಸರಿಯಾದ ನಾದ ಬರುತ್ತದೆ ಎಂದು ಅವರು ಚರ್ಮದ ಮುಚ್ಚಳಿಕೆ ಆಕಾರದ ಚರ್ಮದಿಂದ ತಯಾರಿಸಿ ಆ ಬಳೆಗೆ ಬಿಗಿಯಾಗಿ ಕಟ್ಟಿಕೊಳ್ಳುತ್ತಿದ್ದರು ಎಂದು ಹೇಳುತ್ತಾರೆ.

ಇಲ್ಲಿ ಮೂರು ವೃತ್ತಿಗಳ ಶ್ರಮದಿಂದ ತಮಟೆ ವಾದ್ಯ ತಯಾರಾಗಿದ್ದು ತಿಳಿಯುವಂತದ್ದು. ಬಡಗಿ, ಕಮ್ಮಾರ, ಮಾದಿಗ ಈ ಮೂವರ ಶ್ರಮವೇ ಒಂದು ವಾದ್ಯವಾಗಲು ಕಾರಣರು ಎಂದು ತಿಳಿಯುವಂತದ್ದು.

**೪.೩.೫. ತಾಳ**

ಉತ್ತರ ಕರ್ನಾಟಕದ ಬಾಗಲಕೋಟೆ ಜಿಲ್ಲೆಯ ಲೋಕಾಪುರ, ಮುಧೋಳ, ಜಮಖಂಡಿ ಈ ಊರುಗಳಲ್ಲಿ ಜನಪದ ಕಲೆಗಳಾದ ಶ್ರೀ ಕೃಷ್ಣಪಾರಿಜಾತ, ದೊಡ್ಡಾಟ–ಸಣ್ಣಾಟ, ಬೈಲಾಟ, ಕರಡಿ ಮಜಲು ಮುಂತಾದ ಜನಪದ ಕಲೆಗಳು ತುಂಬಿ ತುಳುಕುತ್ತವೆ. ಇಂತಹ ಕಲೆಗಳು ತುಂಬಿದ ಊರಿನಲ್ಲಿ ಒಂದಾದ ಜಮಖಂಡಿ ತಾಲೂಕಿನ ಹನಗಂಡಿ ಪ್ರಸಿದ್ಧವಾದುದು. ಈ ಗ್ರಾಮದಲ್ಲಿ ಲಾಳೆಕಿಯರು ಎಂದು ಹೆಸರಾದ ವಿಶ್ವಕರ್ಮ ಕುಲದ ಈಶ್ವರಪ್ಪ ಲಾಳೆಕಿ ಇವರು ಹಿತ್ತಾಳೆ, ಕಂಚು, ತಾಮ್ರಗಳಲ್ಲಿ ವಿವಿಧ ರೀತಿಯ ಮೂರ್ತಿಗಳು ಮತ್ತು ತಾಳವಾದ್ಯಗಳ ತಯಾರಿಕೆಯಲ್ಲಿ ಹೆಸರು ಮಾಡಿದವರು.

ಜನಪದರಿಗೆ ಮುಖ್ಯವಾಗಿ ಬೇಕಾದ ಡಂಗುರ, ಪಡಗ, ಜಾಗಟೆ ತಾಳಗಳನ್ನು ಇವರು ಮಾಡುತ್ತಾರೆ. ತಾಳಗಳನ್ನು ಮೊದಲು ಹಳೆಯ ಹಿತ್ತಾಳೆ ತಾಟುಗಳನ್ನು ರೊಟ್ಟಿ ಮುರಿದಷ್ಟು ಸರಳವಾಗಿ ಮುರಿದು ಮುಸಿಯಲ್ಲಿ ಹಾಕಿ ಒಂದು ರಸಪಾಕವಾಗುವವರೆಗೂ ನಿಗಿನಿಗಿ ಬೆಂಕಿಯಲ್ಲಿ ಕಾಯಿಸುತ್ತಾರೆ. ಕಾಯಿಸಿದ ಹಿತ್ತಾಳೆ ರಸವನ್ನು ಯಾವ ಅಳತೆಯ ತಾಳಗಳು ಬೇಕೊ ಆ ಅಳತೆಯಲ್ಲಿ ಅದನ್ನು ಹಾಕಿ ಬಡಿದು ನಂತರ ಅದನ್ನು ಒಂದು ಹದಕ್ಕೆ ಬರುವಂತೆ ಬೆಂಕಿಯಲ್ಲಿ ಕಾಯಿಸುತ್ತಾರೆ. ನಂತರ ಇಕ್ಕಳದಿಂದ ಒಬ್ಬನ್ನು ಹಿಡಿದು ನಿಂತಿರುತ್ತಾನೆ, ಇನ್ನೊಬ್ಬ ಸುತ್ತಿಗೆಯಿಂದ ಬಡಿಯುತ್ತಿರುತ್ತಾನೆ. ಹೀಗೆ ತಾಳವನ್ನು ಎರಡು/ಮೂರು ಭಾರಿ ಕಾಯಿಸಿ ಬಡಿದು ಅದನ್ನು ತಾಳದ ರೂಪಕ್ಕೆ ತಂದ ನಂತರ ಅದಕ್ಕೆ ಸ್ವರ ನಿಲ್ಲಿಸಲಾಗುತ್ತದೆ.

ತಾಳವನ್ನು ಅವರ ಅಳತೆಗೆ ತಕ್ಕಂತೆ ಕತ್ತರಿಸಿ ಅದರ ನಾದವನ್ನು ಪರೀಕ್ಷಿಸುತ್ತಾರೆ. ಇದನ್ನು ಕಾಸುವ ಅಥವಾ ಬಡಿಯುವ ಕ್ರಿಯೆಗಳಿಂದಲೇ ನಿರ್ಧರಿಸುತ್ತಾರೆ. ಹದಕ್ಕೆ ಬಂದ ನಡುವೆ ತಾಳಕ್ಕೆ ರಂಧ್ರಹಾಕಿ ಅದರ ಸುತ್ತಳತೆ ಗೆರೆಗಳನ್ನು ಹಾಕಿ ಕೊನೆಗೆ ಮುಷಿನಿಂದ ಅರ ಹಿಡಿದು ಶುದ್ಧವಾಗಿ ತಯಾರಿಸುತ್ತಾರೆ. ತಾಳ ತೆಗೆದುಕೊಂಡು ಹೋಗಲು ಬಂದ ಕಲಾವಿದರು ಅವುಗಳನ್ನು ನೋಡಿ ಸಂತೋಷ ಪಡುವುದರ ಜೊತೆಗೆ ಎರಡು/ಮೂರು ಬಾರಿ ಬಾರಿಸಿ ನೋಡುತ್ತಾರೆ. ತಾಳಗಳನ್ನು ತಯಾರಿಸಿದ ಕಂಚುಗಾರರ ತಾಳಗಳನ್ನು ದೇವರ ಮುಂದೆ ಇಟ್ಟು ಎಲೆ, ಅಡಿಕೆ, ಪಂಚಪಟಾಕರ ಹಾಗೂ ದಕ್ಷಿಣೆ ಇಟ್ಟು ಪೂಜಿಸಿ ಪಳಾರ ಹಂಚಿ ತಾಳ ತೆಗೆದುಕೊಂಡು ಹೋಗುತ್ತಾರೆ. ಇಲ್ಲಿನ ವಿವರ ಇಷ್ಟೆ. ಒಬ್ಬ ಕಂಚುಗಾರ ಲೋಹಗಳಲ್ಲಿ ವಾದ್ಯ ತಯಾರಿಸುವುದಷ್ಟೇ ಅಲ್ಲದೆ ಆಯಾ ವಾದ್ಯಗಳದ ಗುಣಧರ್ಮಕ್ಕನುಗುಣವಾಗಿ ತಾಳಗಳಿಗೆ ನಾದ ತುಂಬುವ ತಾಂತ್ರಿಕತೆಯನ್ನು ತಿಳಿದುಕೊಳ್ಳಬಹುದು.

**೪.೩.೬. ದಮ್ಮಡಿ**

ಈ ವಾದ್ಯವನ್ನು ಕೋಲಾಟದಲ್ಲಿ ಬಾರಿಸುತ್ತಾರೆ. ಈ ವಾದ್ಯವನ್ನು ನಂದಿಕೇಶ್ವರದ ರೇವಣೆಪ್ಪ ಬಡಿಗೇರ ಇವರು ತಯಾರಿಸುತ್ತಾರೆ. ಹತ್ತು ಅಂಗುಲಗಳ ಸುತ್ತಳತೆಯ ಮರದ ಸಾಧನವೊಂದಕ್ಕೆ

ಉಡುವಿನ ಚರ್ಮವನ್ನು ಬಲವಾಗಿ ಬಿಗಿದು ಮಾಡಿದ ಒಂದು ಉಪಕರಣವೇ ಈ ದಮ್ಮಡಿಯಾಗಿರುತ್ತದೆ. ಉಡುವಿನ ಚರ್ಮದಿಂದ ಒಳ್ಳೆಯ ನಾದವು ಉಂಟಾಗುವುದರಿಂದ ದಮ್ಮಡಿಗೆ ಅದನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಮರದ ಅಂಚಿನಲ್ಲಿ ಮೂರು ಕಡೆ ಗೆಜ್ಜೆಯ ನಾದ ಬರಲು ಅನುಕೂಲವಾಗುವಂತೆ ಎರಡೆರಡು ಲೋಹದ ಬಿಲ್ಲೆಗಳನ್ನು ತೂಗು ಹಾಕಿರುತ್ತಾರೆ. ದುಮ್ಮಡಿಯನ್ನು ಹಗಲು ಹೊತ್ತು ಬಡಿದಾಗ ಶಬ್ದ ಸ್ಪಷ್ಟವಾಗಿ ಕೇಳಿಬರುತ್ತದೆ. ಮಳೆಗಾಲದಲ್ಲಿ ಮತ್ತು ರಾತ್ರಿಯ ವೇಳೆಗಳಲ್ಲಿ ಶೀತದ ಕಾರಣದಿಂದಾಗಿ ಶಬ್ದವು ತನ್ನ ಮೂಲ ಶಕ್ತಿಗಿಂತ ಕಡಿಮೆಯಾಗುವುದುಂಟು. ಅಂತಹ ಸಮಯಗಳಲ್ಲಿ ಸ್ವಲ್ಪಮಟ್ಟಿಗೆ ಬೆಂಕಿಯಿಂದ ಕಾಯಿಸಿದರೆ ದಮ್ಮಡಿಯು ತನ್ನ ಮಾಮೂಲು ಸ್ಥಿತಿಯಲ್ಲಿ ಶಬ್ದವನ್ನುಂಟು ಮಾಡುತ್ತದೆ.

ರೇವಣ್ಣೆಪ್ಪ ಬಡಿಗೇರ ಇವರು ಕೋಲಾಟ ಹಾಗೂ ಕರಡಿಮಜಲು ಗುಂಪುಗಳಲ್ಲಿ ಇವರು ತಾಳ ಬಾರಿಸುತ್ತಿದ್ದರಂತೆ. ತಮ್ಮಗೆ ಬೇಕಾದ ದಮ್ಮಡಿ, ಕೋಲುಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು ಎಂದು ರೇವಣಪ್ಪ ಅವರ ಮಗ ಶಂಕ್ರಪ್ಪ ಬಡಿಗೇರ ಅವರು ಹೇಳುತ್ತಾರೆ.

ಒಟ್ಟಿನಲ್ಲಿ ಜನಪದ ವಾದ್ಯಪರಿಕರಗಳಿಗೆ ಬೇಕಾದ ವಿವಿಧ ರೀತಿಯ ಪಡಗಗಳನ್ನು ತಾಳಗಳನ್ನು ಪಾಂಚಾಳರಲ್ಲಿ ಒಬ್ಬರಾದ ಕಂಚುಗಾರರು ತಯಾರಿಸುವುದರಲ್ಲಿ ಪರಿಣತರಾಗಿದ್ದುದು ಇಲ್ಲಿ ತಿಳಿದುಬರುತ್ತದೆ.

**೪.೪. ಪ್ರದರ್ಶನಪ್ರಧಾನ ಪ್ರಕಾರಗಳು**

**೪.೪.೧. ಕರಡಿಮಜಲು**

ಈ ಕಲೆಯು ಕರ್ನಾಟಕದ ಬೆಳಗಾವಿ, ಬಾಗಲಕೋಟ ಗುಲ್ಬರ್ಗಾ, ಕೊಪ್ಪಳ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಕರಡಿಮಜಲು ಅನೇಕ ಜನವರ್ಗಕ್ಕೆ ಸೇರಿರುವುದರಿಂದ ಇದು ನಿರ್ದಿಷ್ಟ ಜಾತಿಯೊಂದಕ್ಕೆ ಸೀಮಿತವಾದ ಕಲೆಯಾಗಿಲ್ಲ. ಇತರ ಎಲ್ಲ ಜಾತಿಯರು ಸೇರಿರುತ್ತಾರೆ. ಈ ಕರಡಿ ವಾದ್ಯ ತಯಾರಿಸಲು ಕಬ್ಬಿಣ, ಮರ, ಚರ್ಮ ಹಾಗೂ ನಾರು(ಹಗ್ಗ) ಮುಖ್ಯವಾಗಿರುತ್ತವೆ. ಕಂಬಾರ, ಬಡಗಿ ಮತ್ತು ಮಾದಿಗ ಈ ಮೂರು ನಾಲ್ಕು ಸಮುದಾಯಗಳ ಶ್ರಮದಿಂದ ಕರಡಿ ವಾದ್ಯ ತಯಾರಾಗುತ್ತದೆ. ತಯಾರಾಗುವುದಷ್ಟೇ ಅಲ್ಲದೆ ಆಸಕ್ತಿವಂತ ಪಾಂಚಾಳರು ಸಹ ಈ ಮೇಳದ ಗುಂಪಿನಲ್ಲಿ ಸೇರಿರುತ್ತಾರೆ. ಉದಾ: ಬಾಗಲಕೋಟೆ ಜಿಲ್ಲೆಯ ಬೆಣ್ಣೂರಿನ ಶ್ರೀ ಶೇಷಪ್ಪ ಬಡಿಗೇರ(ಕರಡಿ), ಈರಪ್ಪ ಬಡಿಗೇರ(ಕರಡಿ), ಶೇಕಪ್ಪ ಬಡಿಗೇರ(ತಾಳ), ಯಂಕಣ್ಣ ಬಡಿಗೇರ(ತಾಳ), ದ್ಯಾನೇಶ ಬಡಿಗೇರ(ದಿಮ್ಮ) ಅಲ್ಲದೆ ಹೊಸ ತಲೆಮಾರಿನ ಕಲಾವಿದರಾದ ಡಾ. ವೀರೇಶ ಬಡಿಗೇರ(ಕರಡಿ), ಸುರೇಶ ಬಡಿಗೇರ(ದಿಮ್ಮ), ತೋಗುನಸಿಯ ಮೌನೇಶ ಬಡಿಗೇರ(ತಾಳ), ವಡಗೇರಿಯ ಮೌನೇಶ ಬಡಿಗೇರ(ಕರಡಿ), ಶೇಷಪ್ಪ ಬಡಿಗೇರ(ತಾಳ), ಕಟಾಪುರದ ಶಂಕ್ರಪ್ಪ ಬಡಿಗೇರ(ಕರಡಿ), ಭೀಮಪ್ಪ ಬಡಿಗೇರ(ತಾಳ), ಇವರು ತಮ್ಮ ವೃತ್ತಿಯ ಜೊತೆಗೆ ಈ ಕರಡಿ ಮಜಲು ಮೇಳದಲ್ಲಿ ಭಾಗವಹಿಸುತ್ತಿದ್ದರು. ಕರಡಿಮಜಲು ಎಂದರೆ ತುಂಬಾ ಗೌರವ, ಅಷ್ಟೇ ಆಸಕ್ತಿ ವಹಿಸಿ ಕುಣಿಯುತ್ತಾರೆ.

ಪಾಂಚಾಳರು ಕರಡಿ ವಾದ್ಯದ 'ಪಡಗ'ವನ್ನು ಕಟ್ಟಿಗೆಯಲ್ಲಿ ತಯಾರಿಸುತ್ತಾರೆ. ಹೆಬ್ಬೇವು, ಟೊನೆಪಿ, ಹೊನ್ನೆ, ಸೀಹೊನ್ನೆ, ತೆರೆದ ಬುಗುಲಿ ಬಾರಿ ಮರಗಳಿಂದ ಪಡಗ ತಯಾರಿಸುತ್ತಾರೆ. ಒಂದು ಗೇಣು ಒಳಾಯ ಎರಡು ಗೇಣು ಉದ್ದ ಇರುವ ನಡುವೆ ಟೊಳ್ಳಾದ ಮರವನ್ನು ಹದ ಮಾಡಲಾಗುತ್ತದೆ.

ಅದಲ್ಲದೆ ಮುಚ್ಚಿಗೆ ಬಿಗಿಯಲು ಬಳಿ(ರಿಂಗ್)ಯನ್ನು ಕಮ್ಮಾರರು ತಯಾರಿಸುತ್ತಾರೆ. ಮಾದಿಗ ಕುಲದವರು ಆಡಿನ ಚರ್ಮವನ್ನು ಒಂದೂಕಾಲ ಅಡಿಯಷ್ಟು ಕೊಯ್ದು ಎರಡು ಬದಿಗಳಿಗೆ ಹೊಂದಿಸುತ್ತಾರೆ. ಹೀಗೆ ಹೊಂದಿಸುವಾಗ ಮೂರು ಅಂಗುಲಕ್ಕೆ ಒಂದರಂತೆ ಸುತ್ತಲೂ ಹೆಚ್ಚು (ರಂಧ್ರ) ಕೊರೆಯಲಾಗುವುದು ಆ ರಂಧ್ರಗಳಿಗೆ ಹೊಂದುವಂತಹ ನೂಲಿನ ಹುರಿಯನ್ನು ಶ್ರುತಿಗೆ ಹೊಂದುವಂತೆ ಕಬ್ಬಿಣದ ಬಳೆ ಸರಿಯಾದ ಸ್ಥಾನದಲ್ಲಿ ಕುಳಿತು ವಾದ್ಯ ನುಡಿಸಲು ಅನುಕೂಲವಾಗುತ್ತದೆ.[೬೧]

ಕರಡಿ ವಾದ್ಯವನ್ನು ನುಡಿಸುವ ಕೋಲುಗಳಲ್ಲಿ ಎಡಗೈಯಲ್ಲಿ ಕೋಲು ಒಂದು ಗೇಣು ಉದ್ದ ಹಾಗೂ ಕಿರುಬೆರಳಿನಷ್ಟು ದಪ್ಪ ಇರುತ್ತದೆ. ಅದೇ ರೀತಿ ಬಲಗೈಯ ಕೋಲು ಕಿರುಬೆರಳ ಗಾತ್ರಕ್ಕಿಂತ ದೊಡ್ಡದಾಗಿರುತ್ತದೆ. ಕರಡಿಯೊಂದಿಗೆ ತಾಳ, ದಿಮ್ಮು, ಚಾಗಡ, ಶಹನಾಯಿ, ಶೃತಿ ಮೊದಲಾದ ವಿಶೇಷ ವಾದ್ಯ ಪರಿಕರಗಳಿರುತ್ತವೆ. ಮುಖ್ಯವಾಗಿ ಹಬ್ಬ, ಜಾತ್ರೆ, ಗಣೇಶೋತ್ಸವ, ಮದುವೆ ಹಾಗೂ ಎಲ್ಲ ರೀತಿಯ ಧಾರ್ಮಿಕ ಉತ್ಸವಗಳಲ್ಲಿ ಕರಡಿ ಮಜಲು ನಡೆಯುತ್ತದೆ. ವೀರಗಾಸೆ ಅಥವಾ ಪುರವಂತಿಕೆಯ ಮೇಳಕ್ಕೆ ರೌದ್ರತೆಯನ್ನು ಒದಗಿಸುವುದಕ್ಕಾಗಿಯೂ ಈ ವಾದ್ಯವನ್ನು ಬಳಸಲಾಗುತ್ತದೆ.[೬೨]

ಈ ಕರಡಿ ಮೇಳದ ಹೆಜ್ಜೆಗಾರಿಕೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು, ಅವುಗಳೆಂದರೆ. ೧. ಎದುರು-ಬದುರು, ೨. ವೃತ್ತಾಕಾರ, ೩. ಅರ್ಧಚಂದ್ರಾಕೃತಿ.

೧. ಎದುರು-ಬದುರು: ಪಲ್ಲಕ್ಕಿ, ಜಾತ್ರೆ, ಮದುವೆ ಇತ್ಯಾದಿ ಸಮಾರಂಭಗಳಲ್ಲಿ ಎದುರು ಬದರು ಹೆಜ್ಜೆಗಾರಿಕೆಯಿರುತ್ತದೆ. ಎದುರು ಬದುರು ನಡೆಯುತ್ತಾ ಹೆಜ್ಜೆ ಹಾಕುವುದು ಇದರ ವೈಶಿಷ್ಟ್ಯ[೬೩]

ವೃತ್ತಾಕಾರ : ವೀರಗಾಸೆಯ ಸಂಧರ್ಭದಲ್ಲಿ ವೀರಗಾಸೆಯವರನ್ನು ನಡುವೆ ನಿಲ್ಲಿಸಿ ಸುತ್ತುವರಿದು ಕರಡಿಮಜಲು ಮೇಳದವರಿರುತ್ತಾರೆ. ಒಡಪುಗಳಿಗೆ ಅನುಗುಣವಾಗಿ ಕರಡಿಮಜಲಿನ ನುಡಿತವಿರುತ್ತದೆ. ಅರ್ಧಚಂದ್ರಾಕೃತಿ: ಇದನ್ನು ಯಾವುದಾದರೂ ಪ್ರದರ್ಶನದ ಸಂದರ್ಭದಲ್ಲಿ ಮಾತ್ರ ಬಳಸಿಕೊಳ್ಳುತ್ತಾರೆ. ಮುಖ್ಯವಾಗಿ ವೇದಿಕೆಯ ಮೇಲೆ ಪ್ರದರ್ಶನವಾಗಬೇಕಾದಾಗ ಈ ರಚನೆಯಿರುತ್ತದೆ.

ಕರಡಿಯಲ್ಲಿ ಸಪ್ತತಾಳಗಳು ಪ್ರಮುಖವಾಗಿರುತ್ತವೆ. ಪ್ರದರ್ಶನ ನಾಂದಿಯಲ್ಲಿ, ವಿಘ್ನೇಶ್ವರ, ಸರಸ್ವತಿ, ವಿದ್ಯಾದೇವಿ, ಶ್ರೀಗುರು, ಶ್ರೀ ವಿಶ್ವನಾಥ, ಶ್ರೀ ಮೃದಂಗ ಮೊದಲಾದ ಸ್ತೋತ್ರಗಳಿರುತ್ತವೆ. ಎರಡು ದಿಮ್ಮು ಒಂದು ಕರಡಿ ಅಥವಾ ಒಂದು ಸಂತ್ರದಾನಿ ಒಂದು ಡೋಲು ಒಂದು ಜಾಗಡ ಒಂದು, ಜೋಡಿತಾಳ ಒಂದು ಜೋಡಿಗುಳಗುಳಿ ಒಂದು ಜೋಡು ಗೆಜ್ಜೆ ಇವುಗಳೊಂದಿಗೆ ಜೋಡಿ ಶಹನಾಯಿ ಹಾಗೂ ಶ್ರುತಿಗಳಿಂದ ತಾಳಲಯ, ಬದ್ಧವಾಗಿ, ನುಡಿಸಿದರೆ ಅದನ್ನು ಮಂಗಲವಾದ್ಯವೆಂದು ಕರೆಯಲಾಗುತ್ತದೆ.

ಕರಡಿಮಜಲಿಗೆ ಸಂಬಂಧಿಸಿದಂತೆ ಕೆಲವೊಂದು ವಿಧಿ-ನಿಷೇಧಗಳಿವೆ. ವಾದ್ಯಗಳನ್ನು ನುಡಿಸುವ ಮೊದಲು ವಾದಕನು ಶುಚಿರ್ಭೂತನಾಗಿರಬೇಕು. ಪಾದರಕ್ಷೆಯನ್ನು ಹಾಕಬಾರದು, ಇತ್ಯಾದಿ.

ಒಟ್ಟಾರೆ ಇದೊಂದು ಸಮೂಹ ವಾದ್ಯಮೇಳ. ಹಲವು ರೀತಿಯ ವಾದ್ಯ, ಹಲವು ಗತಿ ಗತ್ತು ಹಾಗೂ ಹಲವು ಹೆಜ್ಜೆಗಳಿಂದ ಲಘುವಾಗಿ ನರ್ತಿಸುತ್ತಾ ನುಡಿಸಲಾಗುವ ಈ ಸಮೂಹ ವಾದ್ಯ ಉತ್ತರ ಕರ್ನಾಟಕದ ಒಂದು ಪ್ರಮುಖ ಕಲಾವಿಶೇಷವಾಗಿದೆ. ಅದರಲ್ಲಿ ವಿಶೇಷವಾಗಿ ಪಾಂಚಾಳರು ಕರಡಿ,

ದಿಮ್ಮ ಹಾಗೂ ತಾಳಗಳ ತಯಾರಿಯಲ್ಲಷ್ಟೆ ಅಲ್ಲದೆ ಅವುಗಳನ್ನು ನುಡಿಸುವಲ್ಲಿಯೂ ಪ್ರಾವೀಣ್ಯತೆಯನ್ನು ಪಡೆದಿದ್ದರು.

**೪.೪.೨. ಡೊಳ್ಳು ಕುಣಿತ**

ಕರ್ನಾಟಕದ ಬಿಜಾಪುರ, ಬೆಳಗಾವಿ, ಧಾರವಾಡ ಜಿಲ್ಲೆಗಳಲ್ಲಿ ಡೊಳ್ಳುಕುಣಿತ ಹೆಚ್ಚು ಪ್ರಚಲಿತವಾಗಿದೆ. ಡೊಳ್ಳು ಎನ್ನುವ ವಾದ್ಯ ವಿಶೇಷತೆಯೊಂದಿಗೆ ನಡೆಯುವ ಈ ಕುಣಿತ ಕುರುಬ ಜಾತಿಯೊಂದಿಗೆ ನೇರವಾದ ಸಂಬಂಧ ಹೊಂದಿದೆ. ಇತ್ತೀಚೆಗೆ ಬಿಜಾಪುರ ಜಿಲ್ಲೆಯ ಬೆಳ್ಳುಹುಬ್ಬಿ ಗ್ರಾಮದ ಮಾನಪ್ಪ ಬಡಿಗೇರ ಇವರು ಈ ಕಲೆಯಲ್ಲಿ ತಾಳ ವಾದ್ಯಕರಾಗಿ ಪಾಲ್ಗೊಳ್ಳುತ್ತಾರೆ.

ಬೆಳ್ಳುಹುಬ್ಬಿಯಲ್ಲಿ ಇವರದೇ ಆದ ಒಂದು ಡೊಳ್ಳು ಮೇಳವಿದೆ. ಅದರಲ್ಲಿ ಕನಿಷ್ಠ ಪಕ್ಷ ಒಂಬತ್ತು ಜನ ಪಾಂಚಾಳೇತರ ಸಮುದಾಯದವರು, ಒಬ್ಬರು ಪಾಂಚಾಳರು ಇರುತ್ತಾರೆ. ಮಾನಪ್ಪ ಬಡಿಗೇರ ಇವರು ಡೊಳ್ಳು ಬಾರಿಸುವುದಿಲ್ಲ. ಇದರ ಬದಲಿಗೆ ತಾಳ ಬಾರಿಸುತ್ತಾರೆ. ಇವರು ಉಡುಪು, ಬಿಳಿ ದೋತ್ರ, ಬಿಳಿ ಅಂಗಿ, ಪಟಗಿ ಧರಿಸುತ್ತಾರೆ. ಇನ್ನುಳಿದ ಜನರು ಮೈಗೆ ಕಂಬಳಿ ಸುತ್ತಿ ಡೊಳ್ಳು ಬಾರಿಸುತ್ತಾರೆ. ಮಾನಪ್ಪ ಅವರು ಹಾಡು ಹಾಡುತ್ತಾ ತಾಳ ನುಡಿಸುತ್ತಾರೆ. ಈತ ಮೇಳಕ್ಕೆ ಸೂತ್ರಧಾರನಿದ್ದಂತೆ. ಕುಣಿತದ ಭಂಗಿಗಳು ಇವನ ಮೂಲಕವೇ ಬದಲಾವಣೆಯಾಗುತ್ತವೆ.

ಎಲ್ಲ ಧಾರ್ಮಿಕ ಸಮಾರಂಭಗಳಲ್ಲಿ ಡೊಳ್ಳು ಕುಣಿತ ಮಾಡುತ್ತಾರೆ. ಈ ಡೊಳ್ಳು ಒಂದು ನಿರ್ದಿಷ್ಟ ಕಾಲಮಾನಕ್ಕೆ ಅಥವಾ ಜನಾಂಗಕ್ಕೆ ಸಂಬಂಧಿಸಿದ ಕುಣಿತವಾಗಿ ಉಳಿದಿಲ್ಲ. ಹಬ್ಬ, ಜಾತ್ರೆ, ರಥೋತ್ಸವ, ಗಣಪತಿ ವಿಸರ್ಜನೆ ಸಮಾರಂಭ, ಗ್ರಾಮದೇವರ ಉತ್ಸವ, ಮದುವೆ ವಿಶೇಷವಾಗಿ ಹಾಲುಮತ ಸಮುದಾಯದವರ ಮದುವೆಗೆ ಮುಖ್ಯವಾಗಿ ಡೊಳ್ಳು ಕುಣಿತ ಇದ್ದೇ ಇರುತ್ತದೆ.[೬೪]

**೪.೪.೩. ಭಜನೆ**

ಭಜನೆ ಕರ್ನಾಟಕದಾದ್ಯಂತ ಕಂಡುಬರುತ್ತದೆ. ಒಂದೊಂದು ಭಾಗದಲ್ಲಿ ಹಾಡುವ ಭಜನೆಗಳ ಹಿನ್ನೆಲೆ ಹಾಗೂ ಪ್ರಕಾರಗಳ ಮಟ್ಟಿಗೆ ಸ್ವಲ್ಪ ವ್ಯತ್ಯಾಸವಾದರೂ ಒಟ್ಟಾಗಿ ಭಜನೆ ಮೇಳಗಳು ಒಂದಲ್ಲ ಒಂದು ರೀತಿಯಲ್ಲಿ ನಾಡಿನ ಉದ್ದಗಲಕ್ಕೂ ವ್ಯಾಪಿಸಿವೆ. ಇದು ಸಾಮೂಹಿಕ ಭಜನೆ ಮೇಳದ ರೂಪದ್ದು. ಇಲ್ಲಿಯ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳದೇ ಒಂದಕ್ಕಿಂತ ಹೆಚ್ಚು ಎನ್ನುವುದೇ ಸೂಕ್ತ. ತಾಳ, ತಪ್ಪಡಿ, ಏಕತಾರಿ, ಚಾಟು, ಶ್ರುತಿ ಮೊದಲಾದ ವಾದ್ಯವಿಶೇಷಗಳು ಇಲ್ಲಿರುತ್ತವೆ.

ಬಾಗಲಕೋಟೆ ಜಿಲ್ಲೆಯ ದಮ್ಮುರ ಗ್ರಾಮದಲ್ಲಿ ಶಂಕ್ರಪ್ಪ ಬಡಿಗೇರ, ಸಿದ್ದಪ್ಪ ಬಡಿಗೇರ ಇವರು ಭಜನೆಯ ಮೇಳದಲ್ಲಿ ತಾಳ ಬಾರಿಸುತ್ತಾರೆ. ಶಂಕ್ರಪ್ಪ ಇವರು ಭಜನೆಯ ಮೇಳದಲ್ಲಿ ಮುಖ್ಯ ಗಾಯಕರು. ಭಜನೆಯನ್ನು ಹಾಡುತ್ತಾ ಹೋದಂತೆ ಉಳಿದವರು ಅದೇ ಧಾಟಿಯಲ್ಲಿ ಅದನ್ನು ಪುನರಾವರ್ತಿಸುತ್ತಾರೆ. ನಿಧಾನಗತಿಯಲ್ಲಿ ಆರಂಭವಾಗಿ ಆ ಮೇಲೆ ತ್ವರಿತಗತಿಯಲ್ಲಿ ಮುಕ್ತಾಯವಾಗುವುದು ಭಜನೆಗಳ ಸಾಮಾನ್ಯ ಲಕ್ಷಣ. ಪ್ರತಿಯೊಂದು ಭಜನೆ ಆರಂಭವಾಗುವಾಗ ಮತ್ತು ಮುಗಿಯುವಾಗ ಮುಖ್ಯಗಾಯಕನು "ಹರಹರ ಮಹಾದೇವ" ಎನ್ನುತ್ತಾನೆ. ಆಗ ಎಲ್ಲರೂ ಅದನ್ನು ಪುನರಾವರ್ತಿಸುತ್ತಾರೆ. ಸಾಮಾನ್ಯವಾಗಿ ಭಜನೆಯು

ಶ್ರಾವಣ ಮತ್ತು ಕಾರ್ತಿಕ ಮಾಸದಲ್ಲಿ ನಡೆಯುತ್ತದೆ. ಇಂತಹ ಸಂದರ್ಭಗಳಲ್ಲಿ ನನ್ನ ಬಾಲ್ಯದಲ್ಲಿ ನನ್ನ ಚಿಕ್ಕಪ್ಪರಾದ ಮಲ್ಲಪ್ಪ ಬಡಿಗೇರ, ಭೀಮಪ್ಪ ಬಡಿಗೇರ ಇವರು ಭಜನೆಯಲ್ಲಿ ತಾಳ ಬಾರಿಸುತ್ತಾ ಅಹೋ ರಾತ್ರಿ ಭಜನೆ ಮಾಡಿದ್ದು ಹಾಡಿ ಕುಣಿದಿದ್ದು ಗಮನಿಸಿದ್ದೇನೆ. ಇದಕ್ಕೆ ಭಜನೆ ಕುಣಿತ ಎಂದು ಕರೆಯಬಹುದು. ಈಗಲೂ ಈ ಭಜನೆಯ ಕಲೆ ದಮ್ಮೂರಿನಲ್ಲಿ ಪಾಂಚಾಳರಾದ ಶಂಕ್ರಪ್ಪ ಬಡಿಗೇರ ಇವರು ಭಜನೆಯಲ್ಲಿ ಮುಖ್ಯಗಾಯಕನಾಗಿ ಹಾಡುತ್ತಾ ಕುಣಿಯುತ್ತಾರೆ. ಇವರ ಭಜನೆಯ ಕುಣಿತ ಸರಳವಾದುದು. ಇವರು ಕುಣಿಯುವಾಗ ಕೈತಾಳಗಳನ್ನು ಹಿಡಿದುಕೊಂಡು ವೃತ್ತಾಕಾರವಾಗಿ ಸುತ್ತುತ್ತಾರೆ. ಮಧ್ಯ-ಮಧ್ಯ ಭಜನೆಯ ತಾಳಲಯಕ್ಕನುಗುಣವಾಗಿ ಒಮ್ಮೆ ಬಲಗಾಲು ಮತ್ತು ಎಡಗಾಲನ್ನು ಎತ್ತುತ್ತಾ ಏಕಕಾಲದಲ್ಲಿ ತಾಳವನ್ನು ನುಡಿಸುತ್ತಾ ಕುಣಿಯುತ್ತಾನೆ. ಇದು ಒಂದು ವಿಧ. ಇನ್ನೊಂದು ವಿಧದಲ್ಲಿ ಮೇಳದವರೆಲ್ಲರೂ ಮುಂದಕ್ಕೆ ಹಾಕಿ ತಾಳ ಹಾಕಿ ಮತ್ತು ಹಿಂದಕ್ಕೆ ಹಾರಿ ಇನ್ನೊಮ್ಮೆ ತಾಳ ಹಾಕುತ್ತಾರೆ. ಹೀಗೆ ಹಿಂದಕ್ಕೆ ಹಾರುವಾಗ, ತಿರುಗಿ ಅಂದರೆ ಬೆನ್ನ ಹಿಂದಕ್ಕೆ ತಾಳ ಹಾಕುವುದು ವಾಡಿಕೆ. ಇಂತಹ ಕುಣಿತದಲ್ಲಿ ಪಾಂಚಾಳರು ಬೆಳಗಿನವರೆಗೆ ಪ್ರತ್ಯಕ್ಷವಾಗಿ ಪಾಲ್ಗೊಳ್ಳುತ್ತಾರೆ.

ಹೀಗೆ ಪಾಂಚಾಳರು ಹಲವಾರು ಗ್ರಾಮೀಣ ಪ್ರದೇಶದಲ್ಲಿ ಭಜನೆ ಮೇಳದಲ್ಲಿ ಪಾಲ್ಗೊಂಡಿರುವುದು ಕಾಣಿಸುತ್ತದೆ. ಕಟಾಪುರ ಶಂಕ್ರಪ್ಪ ಬಡಿಗೇರ ಇವರು ಆ ಗ್ರಾಮದಲ್ಲಿ ಹಾರ್ಮೋನಿಯಂ ಮಾಸ್ತರೆಂದರೇ ಹೆಸರುವಾಸಿಯಾಗಿದ್ದಾರೆ. ಇವರಿಗೆ ಇಂತಹ ಜನಪದ ಕಲೆಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದಾರೆ. ಭಜನೆ ಮೇಳದಲ್ಲಿ ತಾಳ ಬಾರಿಸುತ್ತಾರೆ. ಮಾನಪ್ಪ ಬಡಿಗೇರ(ತಾಳ), ವಡಗೇರಿಯ ಮೌನೇಶ ಬಡಿಗೇರ(ತಾಳ), ಕೇಶಪ್ಪ ಬಡಿಗೇರ(ತಾಳ), ಚಿತ್ತವಾಡಿಗೆಯ ಸದಾಶಿವ ಬಡಿಗೇರ(ತಾಳ) ಹೀಗೆ ಪಾಂಚಾಳರು ಜನಪದ ಕಲೆಗಳಲ್ಲಿ ತಮ್ಮ ಪ್ರತಿಭೆ ತೋರಿಸುತ್ತಾ ಹೆಸರು ಗಳಿಸಿದ್ದಾರೆ. ಇವರು ಯಾವ ಜಾತಿ ಭೇದಬಾವ ಮಾಡದೆ ಇಂತಹ ಹಲವಾರು ಗ್ರಾಮಗಳಿಗೆ ಭಜನೆಯ ಮೇಳದೊಂದಿಗೆ ಊರಿಂದ ಊರಿಗೆ ಹೋಗಿ ಭಜನೆ ಮಾಡಿ ಬಂದಿದ್ದಾರೆ.

**೪.೪.೪. ಪುರವಂತಿಕೆ**

ಪುರವಂತಿಕೆಯನ್ನು ಪಾಂಚಾಳರ ಕೆಲವು ಮನೆತನಗಳು ತಮ್ಮ ಧಾರ್ಮಿಕ ಆಚರಣೆಯಾಗಿ ಆರಾಧಿಸಿಕೊಂಡು ಬಂದಿದ್ದಾರೆ. ಇವರು ಕಾಳಿಕಾದೇವಿಯನ್ನು ತಮ್ಮ ಕುಲದೇವತೆಯಾಗಿ ಪೂಜಿಸುತ್ತಾರೆ. ವೀರಭದ್ರ ಕಲ್ಯಾಣ ಅಥವಾ ಭದ್ರಕಾಳಿ ವಿವಾಹ ಗಿರಿಜೆಯನ್ನು ಅಪಮಾನಿಸಿ ಅವಳ ಸಾವಿಗೆ ಕಾರಣವಾದ ದಕ್ಷ ಬ್ರಹ್ಮನ ವಧೆಯ ಸಲುವಾಗಿ ಶಿವನಿಂದ ಸೃಷ್ಟಿಯಾದ ಉಗ್ರರೂಪದ ದೈವೀ ಶಕ್ತಿಗಳಲ್ಲಿ 'ವೀರಭದ್ರ' ಮತ್ತು 'ಭದ್ರಕಾಳಿ' ಪ್ರಮುಖರು. ಇಬ್ಬರೂ ಪಾಂಚಾಳರ ಕುಲದೇವತೆಗಳಾಗಿ ಪೂಜಿಸಲ್ಪಟ್ಟಿದ್ದಾರೆ.

'ಪುರವಂತಿಕೆ' ಈ ಆಚರಣೆಗಳಲ್ಲಿ ಸಾಮ್ಯತೆಗಳಿರುವಂತೆಯೇ ವೈರುಧ್ಯಗಳೂ ಇವೆ. ಪುರವಂತಿಕೆ ಶುದ್ಧ ಆಚಾರ ರೂಪದ ಆಚರಣೆ ಹಾಗೂ ಕಲೆಯೂ ಹೌದು. ಇವರು ಕಲೆಯನ್ನು ಕೇವಲ ಆಚರಣೆಯ ಸಂದರ್ಭದಲ್ಲಿ ಮಾತ್ರ ಪ್ರದರ್ಶಿಸುವವರು. ಪ್ರದರ್ಶನ ಕಲೆಯಾಗಿ ಇದರ ಬಳಕೆ ವಿರಳ. ಅನಿವಾರ್ಯ ಪ್ರಸಂಗಗಳಲ್ಲಿ ಪ್ರದರ್ಶನ ಕಲೆಯಾಗಿ ಆಚರಿಸಬೇಕಾದ ಸಂದರ್ಭದಲ್ಲಿ ಆಚರಣೆಯ ಪಾವಿತ್ರ್ಯತೆಯನ್ನು

ಉಳಿಸಿಕೊಂಡು ಬರುತ್ತಾರೆ. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಈ ಪುರವಂತಿಕೆ ವಿಶಿಷ್ಟವಾದ ಧಾರ್ಮಿಕ ಕಲೆಯಾಗಿದೆ. ಪುರವಂತರು ವೀರಭದ್ರನ ಅವತಾರವೆಂಬ ನಂಬಿಕೆಯಿದೆ. ಅವರು ರೌದ್ರಾವತಾರದ ಕುಣಿತ ಆ ನಂಬಿಕೆಯನ್ನು ದೃಢಪಡಿಸುತ್ತದೆ. ತಮ್ಮ ಕುಟುಂಬಕ್ಕೆ ಪುರವಂತರ ಮನೆಯವರೆಂದು ಅಡ್ಡ ಹೆಸರಾಗುವಷ್ಟರ ಮಟ್ಟಿಗೆ ಕಲೆಯನ್ನು ರೂಪಿಸಿಕೊಂಡು ಬಂದಿರುವ ಕಲಾವಿದರೂ ಇದ್ದಾರೆ.

"ದೇಹವನ್ನು ದಂಡಿಸಿಕೊಳ್ಳುವ ಶಕ್ತಿ ಅವರಲ್ಲಿದೆ. ಇವರು ಗುಗ್ಗಳ ಮಾಡುವ ಸಂದರ್ಭದಲ್ಲಿ ಅಗ್ನಿ ಹಾಕಿಕೊಂಡು ಹೋಗುತ್ತಾರೆ. ವೀರಭದ್ರನ ಪ್ರತಿರೂಪವೇ ಈ ಪುರವಂತ. ಇವರು ಕಾಸೆ ತೊಟ್ಟು ಬಂದ ಸಂದರ್ಭದಲ್ಲಿ ಯಾರೂ ಎದುರು ಹೋಗುತ್ತಿರಲಿಲ್ಲ. ಒಂದು ವೇಳೆ ಹೋದರೆ ಕೈಯಲ್ಲಿರುವಂತಹ ಖಡ್ಗ ತೆಗೆದುಕೊಂಡು ಹೊಡೆಯುವಅಷ್ಟು ಅವರಿಗೆ ಉಗ್ರತೆ ಇರುತ್ತಿತ್ತು.[೩೫]

ಪುರವಂತರ ವೇಷಭೂಷಣಗಳು ತುಂಬ ವರ್ಣಮಯ ಹಾಗೂ ಆಕರ್ಷಕವಾಗಿರುತ್ತವೆ. "ರೇಷ್ಮೆದೋತ್ರ ಹಾಗೂ ಕಾವಿ ಅಂಗಿ ಧರಿಸಿ, ಟೊಂಕಕ್ಕೆ ನಡುಪಟ್ಟಿಯನ್ನು ಕಟ್ಟುತ್ತಾರೆ. ಮೈಮೇಲೆ 'ಗಲೀಫದಂಥ ವಸ್ತ್ರವನ್ನು ಹಾಕಿಕೊಂಡಿರುತ್ತಾರೆ. ಈ ವಸ್ತ್ರದ ಅಂಚು ಚುಂಗುಗಳಿಂದ ಅಲಂಕಾರವಾಗಿರುತ್ತದೆ. ತಲೆಗೆ ಕಾವಿಯ ರೇಷ್ಮೆ, ರುಮಾಲು, ತೋಳಿಗೆ ಬೆಳ್ಳಿಯ ನಾಗರಗಳು, ಎದೆಗೆ ತೀರ್ಥ, ಮುಖಗಳು, ದರ್ಪಣ ನಡುವಿನ ನರಸಿಂಹ ಮುಖ ಹಾಗೂ ರುಂಡಮಾಲೆಗಳು, ಕೈಗೆ ಮಣಿಕಟ್ಟಿಗೆ ರುದ್ರಾಕ್ಷಿ, ಕೊರಳಿಗೆ ರುದ್ರಾಕ್ಷಿ ಮಾಲೆ, ಕಿವಿಯಲ್ಲಿ ರುದ್ರಾಕ್ಷಿ, ಪಕ್ಕದಲ್ಲಿ ಸಣ್ಣ ರಕ್ಷಾ ಜೋಳಿಗೆ, ಹಣೆಗೆ ವಿಭೂತಿ" ಇವಿಷ್ಟು ಪುರವಂತರ ವೇಷಭೂಷಣಗಳು.[೩೬]

ಪುರವಂತರು ಬಲಗೈಯಲ್ಲಿ ಖಡ್ಗ ಅಥವಾ ತ್ರಿಶೂಲ ಹಿಡಿದಿದ್ದರೆ, ಎಡಗೈಯಲ್ಲಿ ತುದಿಗೆ ನಿಂಬೆ ಹಣ್ಣು ಸಿಕ್ಕಿಸಿದ ಶಸ್ತ್ರಗಳನ್ನು ಹಿಡಿದಿರುತ್ತಾರೆ. ಪಂಚಲೋಹದಿಂದ ಮಾಡಿದ ಪುರವಂತರ ಶಸ್ತ್ರಗಳು ಪಾಂಚಾಳರೇ ಸಕಲ ವಿದ್ಯೆಯನ್ನು ಉಳ್ಳವರಾದ ಇವರು ತಮಗೆ ಬೇಕಾದ ಶಸ್ತ್ರಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಬೆಳ್ಳಿಶಸ್ತ್ರ, ಪತ್ತಾರರು, ಹಿತ್ತಾಳೆ ತೀರ್ಥ ಮುಖಗಳನ್ನು ಕಂಚುಗಾರರು ತಯಾರಿಸುತ್ತಿದ್ದರು. ಪಾಂಚಾಳರ ಸಮುದಾಯದಲ್ಲಿ ತಮ್ಮ ಮನೆಯ ಮದುವೆ ಮೆರವಣಿಗೆ ಹಾಗೂ ದೇವರ ಉತ್ಸವ ಮೊದಲಾದ ಸಂದರ್ಭಗಳಲ್ಲಿ ಪುರವಂತರ ಕುಣಿತ ಇರುತ್ತದೆ. ಕುಣಿತದ ಮಧ್ಯ-ಮಧ್ಯ ಒಡುಪುಗಳನ್ನು ಹೇಳುವ ಪುರವಂತರು.

"ಆಹಾಹಾ ಶರ್ಪ, ಖಡೇ ಅಹಹಾ ರುದ್ರಾ ಖಡೇ
ನಮ್ಮ ಶ್ರೀ ವೀರಭದ್ರ ದೇವರು ಹುಟ್ಟಿದಾಗಲೇ ಹೂವಿನಕಾಶಿ
ವಿಷ್ಣುಕಾಶಿ, ಬ್ರಹ್ಮಕಾಶಿ, ಮುಟ್ಟುವ ಆವಿಗೆ, ಸಾವಿರ, ಶಿರಸ್ಸು
ಮೂರು ಸಾವಿರ ಕಣ್ಣು, ಎರಡು ಸಾವಿರ, ಭುಜ
ಜಟಾಧಾರಿ, ಶೆಡಕಿನ ಹಗ್ಗಾ, ಗಜದಂಡಾ, ಗಜಾಂಕುಶ, ಚಪ್ಪಗೊಡಲಿ

ಹೀಗೆ ನಮ್ಮ ವೀರಭದ್ರನು ಹುಟ್ಟಿ ಬಂದನಯ್ಯ ಖಡೇ ಖಡೇ ಎಂದು[೩೭] ಪುರವಂತರು ಮುಂದಾಗಿ ಹೇಳುವಾಗ ಹಿಂದೆ ಹಿಮ್ಮೇಳ ಪುರವಂತರು ಮಾತು ಮಾತಿಗೊಮ್ಮೆ ಖಡೇ ಖಡೇ ರುದ್ರ ಎಂದು

ಉಗ್ಗಡಿಸುತ್ತಾರೆ. ಅನೇಕ ಶಿವಶರಣರ ವಚನಗಳನ್ನು ಕೂಡ ಹೇಳುತ್ತಾರೆ. ಒಡಪುಗಳು ಮುಗಿಯುತ್ತಿದ್ದಂತೆ ಸಂಬಾಳ, ಸನಾದಿ, ಮೇಳದಗತ್ತಿಗೆ ವೀರಾವೇಶದಿಂದ ಕುಣಿಯುತ್ತಾರೆ.

ಪಾಂಚಾಳರು ತಮ್ಮ ಮನೆಯ ಮದುವೆಗಳಲ್ಲಿ ಗುಗ್ಗಳ ಹಾಕುವುದು, ಅಷ್ಟೆ ಅಲ್ಲದೆ, ವೀರಶೈವರ ಸಮುದಾಯದವರ ಮದುವೆಗೂ ಹೋಗುತ್ತಾರೆ. ಮದುವೆ ದಿನ ಮನೆಯಿಂದ ದೇವಸ್ಥಾನಕ್ಕೆ ಒಡಪು ಹೇಳುತ್ತಾ ಕುಣಿಯುತ್ತಲೇ ಹೊರಡುತ್ತಾರೆ. ಪುರವಂತರು ಒಡಪುಗಳನ್ನು ಹೇಳುವಾಗ ಪ್ರತಿಸಾಲು ಅಥವಾ ನುಡಿಗೊಮ್ಮೆ ಸಂಬಾಳದ ಧ್ವನಿಯಾಗುತ್ತದೆ. ಅದು ಒಡಪು ಮುಂದುವರಿಸಲು ಸ್ಫೂರ್ತಿ ನೀಡುತ್ತದೆ. ಈ ಕಲಾಪ್ರದರ್ಶನದಲ್ಲಿ ನಡೆಯುವ 'ಶಸ್ತ್ರ ಪವಾಡ' ಒಂದು ರೋಮಾಂಚಕಾರಿ ದೃಶ್ಯ. ಕಲಾವಿದರು ಆವೇಶದಿಂದ ಕುಣಿಯುವಾಗ ಶಸ್ತ್ರಗಳನ್ನು ಲೀಲಾಜಾಲವಾಗಿ ದೇಹದ ವಿವಿಧ ಭಾಗಗಳಿಗೆ ಚುಚ್ಚಿಕೊಳ್ಳುತ್ತಾರೆ. ಚಿಕ್ಕ ಮಕ್ಕಳಿಂದ ಹಿಡಿದು ವೃದ್ಧ ವಯಸ್ಸಿನವರಿಗೂ ಈ ಶಸ್ತ್ರಗಳನ್ನು ಹಾಕುತ್ತಾರೆ.

"ದೇವರ ಬಗ್ಗೆ ಪೂರ್ಣವಾದ ನಂಬಿಕೆಯನ್ನಿಟ್ಟು ಶಸ್ತ್ರವನ್ನು ಹಾಕಿದರೆ ಅವರಿಗೆ ಏನೂ ಆಗುವುದಿಲ್ಲ" ಎಂದು ಈರಣ್ಣ ಬಡಿಗೇರ ಹುನಗುಂದ ಇವರು ಪುರವಂತರು ಹೇಳುತ್ತಾರೆ. ಇವರು ಫಣಿಶಾಸ್ತ್ರ, ನಾಭಿಶಾಸ್ತ್ರ, ಜನಿವಾರಶಾಸ್ತ್ರ, ಕಂಠಶಾಸ್ತ್ರ, ಗುಪ್ತಶಾಸ್ತ್ರ ಹೀಗೆ ಹತ್ತಾರು ಬಗೆಯ ಶಸ್ತ್ರ ಪವಾಡ ನಡೆಸುತ್ತಾರೆ. ಇವರು ಕುಣಿಯುತ್ತಾ ಬರುವಾಗ ಮಧ್ಯದಲ್ಲಿ ಹರಕೆ ಹೊತ್ತವರು ಇವರ ಕೈಯಿಂದ ಶಸ್ತ್ರಗಳನ್ನು ನಾಟಿಸಿಕೊಳ್ಳುವುದುಂಟು. ಹರಕೆ ಹೊತ್ತುಕೊಳ್ಳುವ ಅರ್ಥ ಶಿಕ್ಷೆ ಕೊಡುವುದಾಗುತ್ತದೆ.

ಪುರವಂತರು ಕುಣಿಯುತ್ತಾ 'ಆಹಾ ವೀರ ಆಹಾಹಾ ರುದ್ರ' ಎಂದು ಪ್ರಾರಂಭಿಸಿ ವೀರಭದ್ರನ ರೌದ್ರಾವತಾರವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುವುದಲ್ಲದೆ ಶರಭಾವತಾರ ಮತ್ತು ಶಿವನ ವರ್ಣನೆಗಳನ್ನು ಸೊಗಸಾಗಿ ಹೇಳುತ್ತಾರೆ.

ಹೀಗೆ ಪುರವಂತರು ತಮ್ಮ ಮನೆಯ ಕಾರ್ಯಕ್ರಮದಲ್ಲಿ ಜಾತ್ರೆ ಉತ್ಸವದಲ್ಲಿ ಅನೇಕ ಕಡೆ ಧಾರ್ಮಿಕ ಕಾರ್ಯಕ್ರಮದಲ್ಲಿ ಪುರವಂತ ಪ್ರದರ್ಶನಗೊಂಡಿದ್ದು ನೋಡಬಹುದು.

**೪.೪.೫. ಹೋಳಿ ಕುಣಿತ**

ಹೋಳಿ ಹಬ್ಬವನ್ನು ಕಾಮನಹಬ್ಬ ಎಂದೂ ಕರೆಯಲಾಗುತ್ತದೆ. ಈ ಹಬ್ಬವನ್ನು ಭಾರತದೆಲ್ಲೆಡೆ ಸಾರ್ವತ್ರಿಕವಾಗಿ ಆಚರಿಸಿದರೂ ಕಲೆ ಸಂಸ್ಕೃತಿಯ ತವರೂರಾದ ಬಾಗಲಕೋಟೆ ಇಡೀ ದೇಶದಲ್ಲಿಯೇ ಐದು ದಿನ ಬಣ್ಣವಾಡುವ ಎರಡನೇ ಸ್ಥಾನ ಪಡೆದುಕೊಂಡಿದೆ.

ಹೋಳಿ ಹುಣ್ಣಿಮೆಯ ಮೊದಲು ಬರುವ ಮಾಘ ಅಮಾವಾಸ್ಯೆಯಿಂದಲೇ ಓಣಿಓಣಿಗಳಲ್ಲಿ ಹಲಗೆಯ ಶಹನಾಯಿ ಧ್ವನಿ ಸಪ್ಪಳ ಕಿವಿ ಗಡಚಿಕ್ಕುವಂತೆ ಕೇಳಿಬರುತ್ತದೆ. ಹೋಳಿ ಹುಣ್ಣಿಮೆಯ ಬರುವನ್ನು ಈ ಹಲಗೆಯ ಧ್ವನಿ ಸಾರಿ ಸಾರಿ ಹೇಳುತ್ತದೆ. ಚಿಕ್ಕ ಮಕ್ಕಳು ಮೊದಲುಗೊಂಡು ದೊಡ್ಡವರೂ ಸಹಿತ ಸಂತೋಷದಿಂದ ದಿನಾಲು ರಾತ್ರಿ ಊಟವಾದ ಮೇಲೆ ಕೂಡಿಕೊಂಡು ಸಂತೋಷದಿಂದ ಹಲಗೆಯ ಮೇಳದಲ್ಲಿ ಪಾಲ್ಗೊಳ್ಳುತ್ತಾರೆ. ಇಲ್ಲಿ ಜಾತಿ ಭೇದ ವರ್ಗ ಭೇದ ಯಾವುದೂ ಇರುವುದಿಲ್ಲ. ಈ ಕುಣಿತದಲ್ಲಿ ಪಾಂಚಾಳರು ಪಾಲ್ಗೊಂಡು ಕುಣಿಯುತ್ತಾರೆ. ಗುಡೂರಿನ ಸುರೇಶ ಬಡಿಗೇರ, ಮೌನೇಶ

ಬಡಿಗೇರ, ಕಮತಗಿಯ ಹುಚ್ಚೇಶ್ ಬಡಿಗೇರ, ಮೌನೇಶ ಬಡಿಗೇರ, ಮುತ್ತಣ್ಣ ಬಡಿಗೇರ, ಅಶೋಕ ಬಡಿಗೇರ, ಇಲಕಲ್ಲದ ವೀರೇಶ ಬಡಿಗೇರ, ವಿನೋದ ಬಡಿಗೇರ, ಅಯ್ಯಪ್ಪ ಬಡಿಗೇರ ಇವರು ಈ ಹೋಳಿ ಹಬ್ಬದಲ್ಲಿ ಪಾಲ್ಗೊಂಡು ಕುಣಿಯುತ್ತಾರೆ. ಈ ಹಬ್ಬವನ್ನು ಅತ್ಯಂತ ಸಂಭ್ರಮದಿಂದ ಇತರ ಸಮುದಾಯದವರ ಜೊತೆಗೆ ಕುಣಿದು ಕುಪ್ಪಳಿಸಿದ್ದು ನಾನು ಗಮನಿಸಿದ್ದೇನೆ.

ಈ ಹಬ್ಬದ ಮುಖ್ಯ ಆಕರ್ಷಣೆ ಸಾಂಪ್ರದಾಯಿಕ ತುರಾಯಿ ಹಲಗೆ ವಾದನ ನಾಯಕ ಗತ್ತಿನೊಂದಿಗೆ ಬಡಿಯುತ್ತಿರುತ್ತಾನೆ. ಹಿಮ್ಮೇಳದವರು ಕುಣಿಯುತ್ತಿರುತ್ತಾರೆ. ಹೋಳಿ ಹುಣ್ಣಿಮೆಯ ದಿನ ಕಾಮದಹನಕ್ಕಾಗಿ ಮೊದಲೇ ಹುಡುಗರು ಕಳ್ಳತನದಿಂದ ಕಟ್ಟಿಗೆ, ಕುಳ್ಳು ತಂದು ಸಂಗ್ರಹಿಸುತ್ತಾರೆ. ಕೈಗೆ ಸಿಕ್ಕ ಕಟ್ಟಿಗೆಗಳನ್ನು ತರುವಾಗ ಬೈಸಿಕೊಳ್ಳುವುದು, ಬಡಿಸಿಕೊಳ್ಳುವುದು ನಡೆದೇ ಇರುತ್ತದೆ.

ಹುಣ್ಣಿಮೆಯ ದಿನ ಮಂಟಪದಲ್ಲಿ ಕಾಮನನ್ನು ಮತ್ತು ರತಿಯನ್ನು ಕೂರಿಸಿರುತ್ತಾರೆ. ಕಾಮನಷ್ಟೆ ರತಿಯೂ ಸುಂದರಳು. ಇಂತಹ ಸುಂದರ ಕಾಮ ರತಿಯನ್ನು ನೋಡಲು ವಾರ ಜನ ತಂಡ ತಂಡವಾಗಿ ಬರುತ್ತಾರೆ. ನೋಡಿ ಆನಂದ ಪಡುತ್ತಾರೆ. ಅಂದು ಸಂಜೆ ಕಾಮನ ಮೆರವಣಿಗೆ ನಡೆಯುತ್ತದೆ. ಬಂಡಿಯ ಮೇಲೆ ಕಾಮನನ್ನು ಕೂರಿಸಿ, ಅಲಂಕರಿಸಿ, ಮೋಜು, ಮಜಲು ಮಾಡುವುದು ಬಾಗಲಕೋಟೆ ಜಿಲ್ಲೆಯಲ್ಲಿ ಬಹುಕಾಲದಿಂದ ಸಾಗಿಬಂದ ಸಂಪ್ರದಾಯವಾಗಿದೆ. ಬಂಡಿಯ ಮುಂದೆ ಊರ ಜನರೆಲ್ಲಾ ಸಾಲುಸಾಲಾಗಿ ನಿಂತು ಕೈಯಲ್ಲಿ ಹಲಗೆ ಹಿಡಿದು ಗುಣಿಯಿಂದ ಬಾರಿಸುತ್ತ ಕುಣಿದಾಡುತ್ತಾರೆ. ಈ ಕುಣಿತದಲ್ಲಿ ಪಾಂಚಾಳರ ಮಕ್ಕಳು ಸಹ ಬಾಗಿಯಾಗಿರುತ್ತಾರೆ.ಪಾಂಚಾಳರು ಹಲಗೆ ಬಾರಿಸುವುದಕ್ಕೆ ಗುಣಿಯನ್ನು ತಯಾರಿಸಿಕೊಡುತ್ತಾರೆ. ಇಲ್ಲಿ ಸಾಮೂಹಿಕ ಹೆಜ್ಜೆಯ ಕುಣಿತ, ನಡುನಡುವೆ ಸಿಳ್ಳು ಹೊಡೆದು ಕೇಕೆ ಹಾಕುವುದು ನಡದೇ ಇರುತ್ತದೆ.

ಕಾಮನ ಮೆರವಣಿಗೆ ಮುಗಿಸಿ ಕಾಮನನ್ನು ಒಟ್ಟಿದ ಕಟ್ಟಿಗೆ ಕುಳ್ಳಿನ ಮೇಲೆ ಇಡುತ್ತಾರೆ. ಕಾಮನ ಜೀವನದಲ್ಲಿ ಈ ಸನ್ನಿವೇಶ ಮಸಣವೂ ಹೌದು. ಮದುವೆಯೂ ಹೌದು. ಕಟ್ಟಿಗೆಗೆ ಬೆಂಕಿ ಹಚ್ಚಿ ಸುಡುತ್ತಾರೆ. ಕಾಮನ ತಲೆ ಹೊಡೆದು ಕೆಂಡವನ್ನು ಕೆದರಿ, ಬೂದಿಯನ್ನು ಸೂರೆ ಮಾಡಿ ಜನರು ಕೇಕೆ ಹಾಕುವುದುಂಟು. ಬೆಳಗಾಗುತ್ತಲೇ ಕಾಮನ ಬೆಂಕಿಯನ್ನು ಒಯ್ದು ಸುಮಂಗಲೆಯರು ತಂತಮ್ಮ ಮನೆಯ ಒಲೆಯನ್ನು ಹೊತ್ತಿಸಿ ಹೋಳಿಗೆ ಮಾಡುತ್ತಾರೆ.[೩೮] ಈ ಸಂಪ್ರದಾಯ ಈಗಲೂ ಬಾಗಲಕೋಟೆ ಜಿಲ್ಲೆಯಲ್ಲಿ ನಡೆಯುತ್ತದೆ. ಕಾಮನ ಬೆಂಕಿಯಲ್ಲಿ ತೆಂಗು, ಗೆಣಸು, ಕಡಲೆಕಾಳು ಸುಟ್ಟು ತಿಂದರೆ ಹಲ್ಲು ಗಟ್ಟಿಯಾಗುತ್ತವೆಂದು ಬಾವಿಸುತ್ತಾರೆ.

ಕಾಮದಹನದ ಮರುದಿನದಂದು ಬಣ್ಣದಾಟ ನಡೆಯುತ್ತದೆ. ಒಬ್ಬರ ಮೇಲೊಬ್ಬರು ಕೆಂಪುಬಣ್ಣ ಉಗ್ಗಿ, ಉಗ್ಗಿಸಿಕೊಂಡು ನಕ್ಕುನಲಿದಾಡುವುದು ರೂಢಿಯಾಗಿದೆ. ಬಂಡಿಯ ಮೇಲೆ ಬಣ್ಣದ ಹಂಡೆಗಳನ್ನು ಹೇರಿ ಕಂಡವರಿಗೆಲ್ಲ ಬಣ್ಣ ಹಾಕುತ್ತಾರೆ. ಮೋಜು, ಮಜಲು ಮಾಡುತ್ತಾರೆ. ವಿವಿಧ ರೀತಿಯಲ್ಲಿ ಸೋಗು ಹಾಕಿಕೊಂಡು ಕುಣಿದಾಡುತ್ತಾರೆ. ಜನತೆಗೆ ಇದೊಂದು ಸೊಗಸಿನ ಸುಗ್ಗಿ ಆಗಿದೆ.

### ೪.೪.೬. ಕೋಲಾಟ

ಮಾನವನ ಬಾಳಭೂಮಿಯಲ್ಲಿ ಆನಂದದ ಹೂ ಅರಳುವುದಕ್ಕೆ ಕಲೆಯೂ ಒಂದು ಕಾರಣ. ಬಾಳಿನಲ್ಲಿ ಅಗಣಿತ ಕಲೆಗಳು ಹಾಸುಹೊಕ್ಕಾಗಿ ಸೇರಿಕೊಂಡಿರುತ್ತವೆ. ಆಂತರಿಕವಾಗಿ ಪ್ರತಿಯೊಬ್ಬ ಮಾನವನೂ ಕಲಾವಿದನೆ. ಆ ಕಲಾಶಕ್ತಿ ಕ್ರಿಯಾರೂಪದಲ್ಲಿ ಪ್ರಕಟವಾಗಿ ಸಾರ್ವತ್ರಿಕ ಮುದ್ರೆ ಬಿದ್ದಾಗ ಆ ಕಲೆಗೊಂದು ಬೆಲೆ ಸಿಗುತ್ತದೆ.

ಕೋಲಾಟ ಒಂದು ಮುಖ್ಯ ಜನಪದ ಕಲೆ. ಸಾಹಿತ್ಯ ಸಂಗೀತಗಳನ್ನೊಳಗೊಂಡ ಇದು ಆಕರ್ಷಕ ನೃತ್ಯ ಕೂಡ. ಇದು ಹಳ್ಳಿಗರಿಗೆ ಸುಲಭಸಾಧ್ಯವೂ ವೈವಿಧ್ಯಮಯವೂ ಆದ ಒಂದು ಪ್ರಮುಖ ಮನೋರಂಜನಾ ಕ್ರಿಯೆ ಸಾಮಾನ್ಯವಾಗಿ ಪ್ರತಿ ಹಳ್ಳಿಗಳಲ್ಲಿ ಈ ಕೋಲಾಟ ಇದ್ದೇ ಇರುತ್ತದೆ. ವಿಶೇಷವಾಗಿ ಈ ಕೋಲಾಟದಲ್ಲಿ ಪಾಂಚಾಳರು ಭಾಗವಹಿಸಿದ್ದು ಗಮನಿಸಿದ್ದೇನೆ.

ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಬೆಳ್ಳುಹುಬ್ಬಿ ಗ್ರಾಮದಲ್ಲಿ ಪಾಂಚಾಳರಾದ ಮಾನಪ್ಪ ಬಡಿಗೇರ ಇವರು ಮೂಲತಃ ಬಡಗಿಗಳು. ಇವರು ವಿಶೇಷವಾಗಿ ಜಾತ್ರೆ, ಉತ್ಸವ ಮೆರವಣಿಗೆಗಳಿದ್ದ ಸಂದರ್ಭದಲ್ಲಿ ಕೋಲಾಟ ಪ್ರದರ್ಶನ ಮಾಡುತ್ತಾರೆ. ಇವರು ಒಂದು ಕೋಲಾಟದ ಮೇಳವನ್ನು ತಯಾರುಮಾಡಿಕೊಂಡಿದ್ದಾರೆ. ಇವರು ಬಿಜಾಪುರದಲ್ಲಿ ಶಿವರಾತ್ರಿ ಹಬ್ಬದ ಅಂಗವಾಗಿ ಶಿವಗಿರಿ ಶಿವನ ಮೆರವಣಿಗೆಯಲ್ಲಿ ಹಲವಾರು ಜನಪದ ಮೆರವಣಿಗೆಗಳು ಪ್ರದರ್ಶನಗೊಳ್ಳುತ್ತವೆ. ಅದರಲ್ಲಿ ಈ ಕೋಲಾಟವು ಸಹ ಪ್ರದರ್ಶನಗೊಳ್ಳುತ್ತದೆ. ತಮ್ಮ ಊರಿನಲ್ಲಿ ನಡೆಯುವ ಗಣೇಶ ಚತುರ್ಥಿ, ಶ್ರಾವಣ, ಹೋಳಿಹಬ್ಬ, ಜಾತ್ರೆ ಉತ್ಸವದಲ್ಲಿ ಇವರು ತಮ್ಮ ಪ್ರತಿಭೆಯನ್ನು ಈ ಕೋಲಾಟದ ಪ್ರದರ್ಶನದಲ್ಲಿ ತೋರಿಸುತ್ತಾರೆ.

ಸಕಲ ಕಲೆಯುಳ್ಳ ಪಾಂಚಾಳರು ಅದರಲ್ಲಿ ಒಬ್ಬರಾದ ಮಾನಪ್ಪ ಬಡಿಗೇರ ಇವರು ತಮ್ಮ ಕೋಲಾಟಕ್ಕೆ ಬೇಕಾದ ಕೋಲನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಹೊನ್ನೆಮರ, ಕಾರಿ, ಜಾಲಿ ಇವು ಕೋಲಿಗೆ ಉತ್ತಮವಾದ ಮರಗಳಾಗಿದ್ದವು. ಈ ಕಟ್ಟಿಗೆಯಿಂದ ಕೋಲು ತಯಾರಿಸಿ ಮುಂದೆ ಮೂರು ಹಿತ್ತಾಳೆ ಗೆಜ್ಜೆ ಕಟ್ಟುತ್ತಿದ್ದರು. ಕೋಲಾಟಕೆ ಗೆಜ್ಜೆ ನಾದ ಸೊಗಸಾಗಿರುತ್ತದೆ ಎಂದು ಗೆಜ್ಜೆ ಕಟ್ಟುತ್ತಿದ್ದರು.

ಬಿಳಿ ದೋತರ, ಬಿಳಿ ಅಂಗಿ, ತಲೆಗೆ ಬಣ್ಣದ ವಸ್ತ್ರ ಮತ್ತು ನಡುವಿಗೆ ವಸ್ತ್ರ, ಕಾಲಿಗೆ ಗೆಜ್ಜೆ ಇವು ಇವರ ವೇಷಭೂಷಣಗಳು, ಚೆನ್ನಾಗಿ ಕುಣಿದರೂ ಸಹ ಕಾಲಿಗೆ ಗೆಜ್ಜೆ ಇಲ್ಲದಿದ್ದರೆ ಅದು ಅಷ್ಟಾಗಿ ಶೋಭಿಸುವುದಿಲ್ಲ. ಕುಣಿತಕ್ಕೆ ರೂಪು ಕೊಡುವುದೇ ಗೆಜ್ಜೆಯ ಝುಣ್, ಝುಣ್ ನಾದ. ಗೆಜ್ಜೆ ಇಲ್ಲದೆ ಕುಣಿಯುವುದು ಸದ್ದು ಬಾರದ ತಮಟೆಯನ್ನು ಬಡಿದಂತೆ. ಅದ್ದರಿಂದ ಕೋಲು ಹಿಡಿಯುವುದಕ್ಕೆ ಮುಂಚೆ ಆಟಗಾರರು ತಮ್ಮ ಎರಡು ಕಾಲುಗಳಿಗೂ ಎರಡು ಗೆಜ್ಜೆಗಳನ್ನು ಕಟ್ಟಿಕೊಂಡಿರುತ್ತಾರೆ. ಒಂದೊಂದು ಸರದಲ್ಲಿಯೂ ಸಾಮಾನ್ಯವಾಗಿ ಐವತ್ತು ಗೆಜ್ಜೆಗಳಿರುತ್ತವೆ. ಗೆಜ್ಜೆಗಳು ಸಾಧಾರಣವಾಗಿ ಒಂಟಿ ನೆಲಗಡಲೆಯ ಗಾತ್ರ, ಅವರೆ ಕಾಳು ಗಾತ್ರದಲ್ಲಿ ಇರುತ್ತವೆ.[೫] ಈ ಮೇಳದಲ್ಲಿ ಒಟ್ಟು ಹತ್ತು ಜನ ಇರುತ್ತಾರೆ. ಕೋಲು, ತಾಳ, ತಬಲ ವಾದ್ಯಗಳನ್ನು ಒಳಗೊಂಡಿರುತ್ತದೆ. ಬಸವರಾಜ ಅಂಗಡಿ(ತಬಲ), ಸಂಗಮೇಶ ಬಡಿಗೇರ(ಕಂಚಿನ ತಾಳ), ಮಾನಪ್ಪ ಬಡಿಗೇರ ಹಾಗೂ ಸಂಗಡಿಗರು ಸೇರಿ ಕೋಲಾಟ ಆಡುತ್ತಾರೆ.

"ಕೋಲಿಗೆ ತಕ್ಕಂತೆ ಕಾಲು ಹಾಕು" "ಕಾಲಿಗೆ ತಕ್ಕಂತೆ ಗೆಜ್ಜೆ ಕಟ್ಟು" ಎಂಬ ಗಾದೆ ಪ್ರಸಿದ್ಧವಾಗಿದೆ. ಈ ಗಾದೆ ಕೋಲಾಟವನ್ನು ಕುರಿತದ್ದಾಗಿದೆ. ಮೊದಲು ಗಣೇಶ, ಸ್ತುತಿಯೊಂದಿಗೆ ಕೋಲಾಟ ಆರಂಭವಾಗುತ್ತದೆ. ಗಣೇಶನ ಸ್ತುತಿಗೆ ಮೊದಲು ಎಲ್ಲರೂ ಸುತ್ತಾಗಿ ನಿಂತು ಮಧ್ಯ ಕೋಲುಗಳನ್ನಿಟ್ಟು ಕೈ ಮುಗಿದು ಕೋಲಾಟ ಕಲಿಸಿದ ಮಾನಪ್ಪ ಅವರಿಗೆ ನಮಸ್ಕರಿಸಿ ಕೋಲು ಮುಟ್ಟುತ್ತಾರೆ/ಹಿಡಿಯುತ್ತಾರೆ. ಗಣೇಶನ ಸ್ತುತಿ ಆರಂಭವಾಗುತ್ತಿದ್ದಂತೆ ಕೋಲುಗಳ ಸಪ್ಪಳವೂ ನಿಧಾನಗತಿಯಲ್ಲಿ ಆರಂಭವಾಗುತ್ತದೆ.

**ಕೋಲಾಟದ ವಿವಿಧ ಗತಿಗಳು**

ಒಬ್ಬನ ಕೋಲಿಂದ ಮತ್ತೊಬ್ಬನ ಕೋಲನ್ನು ತಾಕಿಸುವ ಮೂಲಕ ಆರಂಭವಾಗುವ ಕೋಲಾಟ ಒಬ್ಬನಿಗೆ ಮತ್ತೊಬ್ಬ ಸುತ್ತು ಸುತ್ತು ಹೊಡೆಯುತ್ತಾ ಆಡುವುದು ಗುಂಪಿನಲ್ಲಿಯೇ ಚದುರಿದಂತೆ ನಿಂತು ಹೊರಗಿನವರು ಒಳಗೂ ಒಳಗಿನವನು ಹೊರಗೂ ಕೋಲನ್ನು ಕೊಡುವುದು ಹೀಗೆ ಆಡುತ್ತಾ ಕುಕ್ಕುರುಗಾಲಲ್ಲಿ ಕುಳಿತು ಕಪ್ಪೆಗಳಂತೆ ಕುಪ್ಪಳಿಸುತ್ತಾ ಒಬ್ಬರಿಗೊಬ್ಬರು ಕೋಲು ಕೊಡುವುದು, ಅದರಲ್ಲೂ ಎರಡು ಗುಂಪಾಗಿ ಎದುರುಬದುರು ನಿಂತು ಕೋಲು ಕೊಡುವುದು ಎರಡು ವೃತ್ತಗಳನ್ನು ರಚಿಸಿ ಒಳ ವೃತ್ತದವರು ಹೊರಗೂ ಹೊರವೃತ್ತದವರು ಒಳಗೂ ನುಗ್ಗಾಡುತ್ತಾ ಎಲ್ಲಿಯೂ ಆಯ ತಪ್ಪದಂತೆ ಹೆಜ್ಜೆ ತಪ್ಪದಂತೆ ಕೋಲು ಕೊಡುವುದು[೮೦] ಇತ್ಯಾದಿಯಾಗಿ ನಾನಾವಿಧವಾದ ಗತಿಗಳೆಲ್ಲ ಮತ್ತು ವಿನ್ಯಾಸಗಳಲ್ಲಿ ಕೋಲಾಟಗಳು ನಡೆಯುತ್ತನೆ. ಈ ಕೋಲಾಟದಲ್ಲಿ ಮುಖ್ಯವಾಗಿ ಕೋಲು ಮತ್ತು ಹಿತ್ತಾಳೆ ಗೆಜ್ಜೆಗಳ ಉಲ್ಲೇಖವಿದೆ. ಇವುಗಳನ್ನು ಪಾಂಚಾಳರು ತಯಾರಿಸಿ ಮತ್ತು ಅವುಗಳನ್ನು ನುಡಿಸಿದ್ದು ಇಲ್ಲಿ ವಿಶೇಷವಾಗಿದೆ.

**೪.೪.೭. ಮೊಹರಂ ಕುಣಿತ**

ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಮೊಹರಂ ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದಾರೆ. ಮೊಹರಂ ಹಾಡುಗಳನ್ನು ಹಾಡುವುದು ರೂಢಿಯಲ್ಲಿರುವುದರಿಂದ ಕುಣಿತಕ್ಕೆ ಹೆಚ್ಚು ಒತ್ತು ಮಾಡಿ ಆವೇಶಭರಿತದ್ದಾಗಿರುತ್ತದೆ. ಈ ಕಲೆ ಮುಸ್ಲಿಂ ಸಮುದಾಯಕ್ಕೆ ಸಂಬಂಧಿಸಿದ್ದರೂ ಹಿಂದುಗಳು ಇದರಲ್ಲಿ ಪಾಲ್ಗೊಳ್ಳುವುದೊಂದು ವಿಶೇಷವಾಗಿದೆ. ಅದರಲ್ಲಿ ಪಾಂಚಾಳರು ಪಾಲ್ಗೊಳ್ಳುವುದು ವಿಶೇಷ. ಬಾಗಲಕೋಟ ಜಿಲ್ಲೆಯ ಕೆಲವು ಭಾಗಗಳಲ್ಲಿ ಪ್ರಚಲಿತವಿರುವ ಮುಸ್ಲಿಂ ಸಂಪ್ರದಾಯದ ಮನರಂಜನಾ ಕಲೆಯಲ್ಲಿ ದಮ್ಮೂರ ಗ್ರಾಮದ ಸಿದ್ದಪ್ಪ ಬಡಿಗೇರ, ಮೌನೇಶ ಬಡಿಗೇರ ಮತ್ತು ಇಲಕಲ್ಲದ ವಿನೋದ ಬಡಿಗೇರ ಇವರು ಮೊಹರಂ ಕುಣಿತದಲ್ಲಿ ಪಾಲ್ಗೊಳ್ಳುತ್ತಾರೆ.

ಮೊಹರಂ ಆಚರಣೆ ಮತ್ತು ಮೊಹರಂ ಕುಣಿತ ಮುಸಲ್ಮಾನರಿಗೆ ಸೀಮಿತವಾಗಿದ್ದರೂ ಕಾಲಾಂತರದಲ್ಲಿ ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ಪ್ರಭಾವ ಅವುಗಳ ಮೇಲಾಗಿ ಹಿಂದೂಗಳು ಅವುಗಳಲ್ಲಿ ಪಾಲ್ಗೊಳ್ಳಲಾರಂಭಿಸಿದರು. ಇತರ ಹಿಂದು ಸಮುದಾಯದವರು ಪಾಂಚಾಳರ ಜಾತಿ, ಮತವೊಂದನ್ನು ಪರಿಗಣಿಸದೆ ಖ್ಯಾತ ರಚನೆಯತ್ತ ಕಲಾವಿದರನ್ನು ವೀಳ್ಯ ಕೊಟ್ಟು ಆಮಂತ್ರಿಸಿ ಹಾಡು ಕೇಳಿ ಕುಣಿದು ಕುಪ್ಪಳಿಸಿ ಸಂತೋಷಪಟ್ಟು ಪಾಂಚಾಳರನ್ನು ಸನ್ಮಾನಿಸುವ ಪರಂಪರೆ ಬಾಗಲಕೋಟೆ ಜಿಲ್ಲೆಯ ಗೊರಿಜಿನಾಳ, ದಮ್ಮೂರ, ಕಲ್ಲಗೊನಾಳ ಬಹುತೇಕ ಹಳ್ಳಿಗಳಲ್ಲಿ ಈಗಲೂ ಮುಂದುವರಿಸಿಕೊಂಡು ಬಂದಿರುವುದು ವಿಶೇಷವಾಗಿದೆ.

ಈ ಕುಣಿತದಲ್ಲಿ ಸುಮಾರು ೨೦ರಿಂದ ೩೦ ಜನ ಕಲಾವಿದರಿರುತ್ತಾರೆ. ಪಾಂಚಾಳರು ಸರಿಸಮಾನವಾಗಿ ಭಾಗವಹಿಸುವುದೊಂದು ವಿಶೇಷವಾಗಿದೆ. ಹಬ್ಬದ ದಿನ ಹಿಂದುಗಳು, ಮುಸ್ಲಿಮರು ಕೂಡಿ ಯಾವ ಭೇದಭಾವವಿಲ್ಲದೆ ಮೇಳಗಳನ್ನು ರಚಿಸಿಕೊಂಡು ಕನ್ನಡದ ಹಾಡುಗಳನ್ನು ಹಾಡುತ್ತಾ ಕುಣಿಯುತ್ತಾ ಮನೆಯಿಂದ ಮನೆಗೆ ಸಂಚರಿಸುವರು.

**ಒಂದು ಪದ**

"ಧರಮಕ ಸತ್ತವರಾ ಸಿಗತಾರ ಕೋಟಿಗೊಬ್ಬ ಜನರಾ
ಮುಸಲಮಾನ ಮಂದ್ಯಾಗ ದೊರೀತಾರ ಹುಸೀನ ಸಾಹೇಬರಾ
ಯಜೀದನವತಾರ ನಡೆಸಿತೊ ಅಧಿಕಾರ ಭರಪೂರಾ
ನೋಡಲಾಗದ ಎದುರಾಗಿ ನಿಂತರೂ ಹಜರತ ಹುಸೇನರಾ
ಲಡಾಯಿ ತಯ್ಯಾರ ಆದಾರ ಒಂಟಿಮ್ಯಾಲೆ ಸ್ವಾರ
ಹೊಂಟ ನಿಂತಾರೊ ಕರ್ಬಲಾ ಭೂಮಿಗೆ ಬಂಧುಬಳಗ ಪೂರಾ
ಅರಣ್ಯದಾಗುವರಾ ಕಾಣದ ಮೂರ ದಿವಸ ನೀರಾ
ಕುಡುದಾರೊ ತಣ್ಣೀರಾ ಮಕ್ಕಳು ಹುಡುಗರು ಹೆಂಗಸರಾ
ಜಂಗ ಎದರ–ಬದರಾ ವೈರಿಯ ಮೊಸಕ ಜಯಕಾರಾ
ಶರಣು ಹೋಗದವರಾ ಸ್ವರ್ಗಕ್ಕೆ ಹೋದಾರೊ ಹಜರತರಾ."[೧]

ಹೀಗೆ ಮುಂದುವರಿಯುತ್ತಾ ಕಲಾಮೇಳದವರು ಕುಣಿದು ಕುಪ್ಪಳಿಸುತ್ತಾರೆ. ಹಜರತ್ ಹಸನ್ ಮತ್ತು ಹುಸೇನರ ಪವಿತ್ರ ಜೀವನದ ಅಮರ ಸಂದೇಶವನ್ನು ಸಾರುವುದು ಮೊಹರಂ ಹಾಡುಗಳ ಕುಣಿತಪ್ರಧಾನ ಉದ್ದೇಶವಾಗಿದೆ.

ಪಾಂಚಾಳರಲ್ಲಿ ಪ್ರಚಲಿತವಿರುವ ಜನಪದ ಸಾಹಿತ್ಯದ ಮುಖ್ಯ ಪ್ರಕಾರಗಳಾದ ಗೀತೆ, ಕಲೆ, ವಾದ್ಯ ಪ್ರದರ್ಶನಗಳ ಸಮೀಕ್ಷೆಯನ್ನು ನಡೆಸುವ ಪ್ರಯತ್ನವನ್ನು ಈ ಅದ್ಯಯನದಲ್ಲಿ ಮಾಡಲಾಗಿದೆ. ಕನ್ನಡ ಮೌಖಿಕ ಸಾಹಿತ್ಯದಲ್ಲಿ ಸಹಜವಾಗಿಯೇ ಇತರ ಗ್ರಾಮೀಣ ಪ್ರದೇಶದ ಜನರಿಗೆ ಚಿರಪರಿಚಿತವನ್ನುವಂತಹ ಅಂಶಗಳು ಅಲ್ಲಲ್ಲಿ ಕಂಡುಬರುತ್ತವೆ. ಹಾಗೆ ಇತರ ಸಮುದಾಯಗಳು ಆಂತರ್ಯದಲ್ಲಿ ಭಿನ್ನವಾಗಿ ಗೋಚರಿಸಿದರೂ ಬಾಹ್ಯದಲ್ಲಿ ಒಂದೇ ಎನ್ನುವಂತೆ ಕಾಣುತ್ತೇವೆ.

ಪಾಂಚಾಳರು ಒಂದು ಸಮುದಾಯದಿಂದ ಇನ್ನೊಂದು ಸಮುದಾಯಕ್ಕೆ ಕೊಡುಕೊಳ್ಳುವಿಕೆ ಸಹಜವಾಗಿಯೇ ನಡೆದಿರುವ ಸಂಭವ ಹೆಚ್ಚಾಗಿರುತ್ತದೆ. ಇದರೊಂದಿಗೆ ಪಾಂಚಾಳರ ಜೀವನ ವಿಧಾನದ ವೈವಿಧ್ಯತೆಯ ಅಲ್ಪಮಟ್ಟದ ಮುಖವನ್ನಾದರೂ ವಿವರಿಸುವ ಮೌಖಿಕ ಸಾಹಿತ್ಯವು ಇಲ್ಲಿ ಇರುವುದನ್ನು ಗುರುತಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಹಾಡಿದವರು : ತಾರಾ ಬಡಿಗೇರ, ಊರು: ಇಲಕಲ್ಲ, ವಯಸ್ಸು. ೪೦
೨. ಹಾಡಿದವರು : ಲಕ್ಷ್ಮಿಬಾಯಿ ಪತ್ತಾರ, ಊರು : ಬೆಣ್ಣೂರು, ವ. ೮೦
೩. ಕಾಳವ್ವ ಬಡಿಗೇರ ಊರು: ಅಂಟರಠಾಣಿ, ವಯಸು. ೪೩
೪. ಹಾಡಿದವರು : ದೇವಮ್ಮ ಪತ್ತಾರ, ಊರು: ಬಿಸಲದಿನ್ನಿ, ವ. ೪೫
೫. ಕಾಶಮ್ಮ ಬಡಿಗೇರ; ಊರು: ಬದಾಮಿ; ವ. ೫೦
೬. ಕಾಶಮ್ಮ ಬಡಿಗೇರ; ಊರು: ಬದಾಮಿ; ವ. ೫೦
೭. ಹಾಡಿದವರು ಲಕ್ಷವ್ವ ಬಡಿಗೇರ, ಊರು: ಕಲ್ಲಗೋನಾಳ, ವ. ೪೦
೮. ಹಾಡಿದವರು : ದೇವಮ್ಮ ಪತ್ತಾರ, ಊರು: ಬಿಸಲದಿನ್ನಿ, ವ. ೪೫
೯. ಹಾಡಿದವರು : ರತ್ನವ್ವ ಬಡಿಗೇರ, ಊರು: ವಡಗೇರಿ, ವ. ೪೮
೧೦. ಕರಿಯವ್ವ ಗುಡೂರು, ಊರು: ವಡಗೇರಿ, ವ. ೫೦
ಕಳಕಮ್ಮ ಗೆಂಬೆಹಾಳ, ಊರು: ಗೂಡು, ವಯಸ್ಸು. ೮೦
೧೧. ಹಾಡಿದವರು : ಸುವರ್ಣ ಬಡಿಗೇರ ಊರು: ತೊಗುನಸಿ, ವ. ೫೫
೧೨. ಹಾಡಿದವರು : ಕಾಳಮ್ಮ ಬಡಿಗೇರ, ಊರು: ಅಂಟರ ರಾಣಿ, ವ. ೮೦
೧೩. ಹಾಡಿದವರು : ರತ್ನವ್ವ ಬಡಿಗೇರ, ಊರು: ವಡಗೇರಿ, ವ. ೪೮
ಲಕ್ಷ್ಮವ್ವ ಗೌಡರ, ಊರು: ವಡಗೇರಿ, ವ. ೪೮
೧೪. ಹಾಡಿದವರು : ಕಾಳಮ್ಮ ಬಡಿಗೇರ, ಊರು: ಅಂಬರಠಾಣಿ, ವ. ೮೦
ಗೌರಮ್ಮ ಬಡಿಗೇರ, ಊರು : ಅಂಟರಠಾಣಿ, ವ. ೬೦
೧೫. ಹಾಡಿದವರು : ಮಾನಪ್ಪ ಸಂ. ಬಡಿಗೇರ ಹಾಗೂ ಬೆಳ್ಳುಹುಬ್ಬ
ವ. ೫೨ ಹಾಗೂ ಸಂಗಡಿಗರು.
೧೬. ಹಾಡಿದವರು : ಮಾನಪ್ಪ ಬಡಿಗೇರ, ಊರು : ಬೆಳ್ಳುಹುಬ್ಬ, ವ. ೫೨
೧೭. ಕುಮಾರ್ ಆರ್.ಬಿ; ಮುದ್ದೆಕುಂಬಾರರು, ಪು. ೧೮೧, ೨೦೦೪
೧೮. ನಾಗರಾಜರಾವ್, ಎಂ.ವಿ. ಜಾನಪದ ಕಥೆಗಳು : ಪು.೨೨೨-೨೬, ೨೦೦೭.
೧೯. ಕುಮಾರ್ ಆರ್.ಬಿ. ಮುದ್ದೆಕಂಬಾರರು, ಪು.೧೭೭, ೨೦೦೪.
೨೦. ಕುಮಾರಸ್ವಾಮಿ, ಕೆ.ಎಸ್; ಶಿಲ್ಪಾಚಾರಿಯರ ಚರಿತೆ, ಪು.೩೭೪, ೨೦೧೩.
೨೧. ಕುಮಾರ. ಆರ್.ಬಿ; ಮುದ್ದೆಕಂಬಾರರು, ಪು.೧೨೯, ೨೦೦೪
೨೨. ನಾರಾಯಣಶರ್ಮ, ಕನ್ನಡ ನಾಡಿನ ಕಥೆಗಳು, ಪು.೨೫-೨೮, ೨೦೦೮.
೨೩. ಶುಭಕರಾಚಾರಿ; ಕಮ್ಮಾರರ ಬದುಕಿನ ಸ್ಥಿತ್ಯಂತರಗಳು, ಪು.೧೮೪, ೨೦೧೦
೨೪. ಕುಮಾರ ಆರ್.ಬಿ., ಮುದ್ದೆ ಕಂಬಾರರು, ಪು.೧೪೭, ೨೦೦೪

೨೫. ಮಾಹಿತಿ ನೀಡಿದವರು : ಮಲ್ಲಮ್ಮ ಬಡಿಗೇರ, ವ.೮೦, ಊರು. ನಮದಿಕೇಶ್ವರ

೨೬. ಕುಮಾರಸ್ವಾಮಿ ಕೆ.ಎಸ್; ಶಿಲ್ಪಾಚಾರಿಯರ ಚರಿತೆ, ಪು. ೩೬೬, ೨೦೧೨

೨೭. ಅದೇ, ಪುಟ. ೩೭೧, ೨೦೧೩

೨೮. ಅದೇ, ಪುಟ. ೩೨೩, ೨೦೧೩

೨೯. ಅದೇ, ಪುಟ. ೩೭೭, ೨೦೧೩

೩೦. ಅದೇ, ಪುಟ. ೩೭೬, ೨೦೧೩

೩೧. ಅದೇ, ಪುಟ. ಮಾಹಿತಿ ನೀಡಿದವರು : ಮೌನೇಶ ಬಡಿಗೇರ. ವಯಸ್ಸು.೫೦ ಊರು: ವಡಗೇರಿ

೩೨. ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಪು.೨೧೬, ೧೯೯೮

೩೩. ಅದೇ, ಪುಟ, ೧೧೬, ೧೯೯೮

೩೪. ಮಾಹಿತಿ ನೀಡಿದವರು: ಮಾನಪ್ಪ ಬಡಿಗೇರ, ವ.೫೩. ಊರು: ಬೆಳ್ಳುಹುಬ್ಬಿ

೩೫. ಮಾಹಿತಿ ನೀಡಿದವರು: ಕಲವೀರ ಮನ್ವಾಚಾರಿ, ಕನ್ನಡ. ವಿ.ವಿ. ಹಂಪಿ, ದಿನಾಂಕ. ೨೪.೭.೨೦೧೭

೩೬. ಮಾಹಿತಿ ನೀಡಿದವರು: ಈರಣ್ಣ ಬಡಿಗೇರ, ವ. ೪೮, ಊರು: ಹುನಗುಂದ

೩೭. ಮಾಹಿತಿ ನೀಡಿದವರು: ಈರಣ್ಣ ಬಡಿಗೇರ, ವ.೪೮, ಊರು: ಹುನಗುಂದ

೩೮. ಮಾಹಿತಿ ನೀಡಿದವರು: ಚಂದ್ರಪ್ಪ, ವ.೭೭, ಊರು: ವಡಗೇರಿ

೩೯. ಮಾಹಿತಿ ನೀಡಿದವರು: ಮಾನಪ್ಪ ಬಡಿಗೇರ, ವ.೫೨, ಊರು: ಬೆಳ್ಳುಹುಬ್ಬಿ

೪೦. ಮಾಹಿತಿ ನೀಡಿದವರು: ಮಾನಪ್ಪ ಬಡಿಗೇರ, ವ.೫೨, ಊರು: ಬೆಳ್ಳುಹುಬ್ಬ

೪೧. ಮಾಹಿತಿ ನೀಡಿದವರು: ಸಿದ್ದಪ್ಪ ಬಡಿಗೇರ, ವ.೫೦, ಊರು: ದಮ್ಮೂರ

ಅಧ್ಯಾಯ ಐದು

# ಪಾಂಚಾಳರ : ಜ್ಞಾನ ಮತ್ತು ಕ್ರಿಯೆಯ ಆಯಾಮಗಳು

ಕನ್ನಡ ಸಂಸ್ಕೃತಿ ಚಿಂತನೆಯನ್ನು ಸಾಮಾನ್ಯವಾಗಿ ಸಾಮಾಜಿಕವಾಗಿ, ಉಚ್ಚಜಾತಿಯ ಪರಿಕಲ್ಪನೆಯಾಗಿ, ಪರಿಭಾವಿಸಲಾಗಿದೆ. ಉನ್ನತ ಆದರ್ಶಗಳನ್ನು ಪ್ರೇರಿಸಬಲ್ಲ ಭೌತಿಕ ಸ್ವಚ್ಛತೆಯನ್ನು ಹೊಂದಿರಬಲ್ಲ ಸುಸಂಸ್ಕೃತವಾಗಿ ಮಾತನಾಡಲು ಒಂದು ನಿರ್ದಿಷ್ಟ ಧರ್ಮಕ್ಕೆ ಮೀಸಲಾದ ಚಹರೆಗಳನ್ನು ಇಟ್ಟುಕೊಂಡು ಒಂದು ಆದರ್ಶಕ ಸಾಂಸ್ಕೃತಿಕ ನೆಲೆಗಳನ್ನು ಪ್ರತಿಪಾದಿಸಲಾಗಿದೆ. ಮ್ಯಾಥ್ಯೂ ಆರ್ನಾಲ್ಡ್ ಪಶ್ಚಿಮದ ಸಂಸ್ಕೃತಿ ಚಿಂತಕರು ನೈತಿಕ ಆದರ್ಶನವಾದಿತನವನ್ನು ಸಂಸ್ಕೃತಿಯೆಂದು ವ್ಯಾಖ್ಯಾನಿಸುತ್ತಾರೆ. ಅವರ ಪ್ರಕಾರ ಸಂಸ್ಕೃತಿ ಎಂದರೆ ಜಗತ್ತಿನಲ್ಲಿ ಈವರೆಗಿನ ಅತ್ಯುತ್ತಮವಾದ ಆದರ್ಶಗಳ ಚಿಂತನೆ ಮತ್ತು ಬೋಧನೆ. ಅದು ಮಾನವರ ಅಂತಃರಂಗಕ್ಕೆ ಸಂಬಂಧಿಸಿದ್ದು ಮತ್ತು ಪರಿಪೂರ್ಣತತ್ವವನ್ನು ಸಾಧಿಸುತ್ತ ಕರೆದೊಯ್ಯುವಂತದ್ದು. ಈ ವ್ಯಾಖ್ಯಾನವನ್ನು ಕನ್ನಡದ ಪ್ರಸಿದ್ಧ ಚಿಂತಕರಾದ ಮಾಸ್ತಿ ಮತ್ತು ಡಿ.ವಿ.ಜಿ.ಯವರಂತಹ ಕನ್ನಡದ ಮೊದಲ ಘಟ್ಟದ ಭೌತಿಕ ಲೇಖಕರು ಅನುಸರಿಸಿದರು. ಎರಡನೇ ಹಂತದಲ್ಲಿ ಬಂದ ಟಿ.ಎಸ್.ಎಲಿಯಟ್ ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಸಮಗ್ರ ಜೀವನದ ವಿಧಾನವನ್ನು ಸಂಸ್ಕೃತಿ ಎಂದು ಹೇಳುತ್ತಾರೆ. ಅದರಲ್ಲಿ ಶ್ರೇಷ್ಠ ಮತ್ತು ಕನಿಷ್ಠ ಸ್ಥಾನಗಳಿವೆ ಎಂದು ಗುರುತಿಸುತ್ತಾರೆ. ಶಂಬಾಜೋಶಿ ಸಂಸ್ಕೃತಿಯನ್ನು ಧರ್ಮದ ಜೊತೆಗೆ ಶುಷ್ಕ ಆದರ್ಶ ನೈತಿಕದ ಆದರ್ಶದ ಜೊತೆಗೆ ಸಮೀಕರಣ ಮಾಡುವುದನ್ನು ಒಪ್ಪುವುದಿಲ್ಲ. ಅವರು ಸಂಸ್ಕೃತಿಯನ್ನು ಮಾನವ ಬದುಕಿನ ಎಲ್ಲ ಸಂಗತಿಗಳನ್ನು ಒಳಗೊಂಡ ಮಾನವನ ಧರ್ಮದ ಲಕ್ಷಣವನ್ನಾಗಿ ನೋಡುತ್ತಾರೆ.

ವಿಲಿಂಪ್ಸ್ ಎನ್ನುವ 'ಸಂಸ್ಕೃತಿ ಚಿಂತಕರು ಸಂಸ್ಕೃತಿ' ಎಂದರೆ ಆರ್ಥಿಕವಾದ ತಳಸ್ತರಕ್ಕೆ ಅಧೀನವಾದ ಮೇಲುಸ್ತರವು ಅಲ್ಲ, ನೈತಿಕ ಮೌಲ್ಯಗಳ ರಾಶಿಯಲ್ಲ, ಅದು ನಿತ್ಯ ಬದುಕಿಗೆ ಸಂಬಂಧಿಸಿದ ಒಂದು ಸಾಮಾನ್ಯ ಸಂಗತಿ ಎಂದು ವಿವರಿಸಿದರು. ಈ ತರದ ಬಹಳಷ್ಟು ಚಿಂತನೆಗಳು ಭಾರತಿ ಸಂಸ್ಕೃತಿಯ ಹಿರಿಮೆಯನ್ನು ವೈದಿಕ ಪರಂಪರೆಗೆ ಸೇರಿದ ಕುರುಹುಗಳಲ್ಲಿ ಮತ್ತು ರಾಜಕೀಯ ಪ್ರಭುತ್ವದ ಹಿನ್ನೆಲೆಯಲ್ಲಿ ಮತ್ತು ಧರ್ಮದ ಹಂಗಿನಲ್ಲಿ ಸಂಸ್ಕೃತಿಯನ್ನು ಆದರ್ಶೀಕರಿಸುತ್ತದೆ.

ವಿಶ್ವಕರ್ಮ ಸಂಸ್ಕೃತಿ ಈ ಗತವಾಗಿ ನೈತಿಕ ಮೌಲ್ಯವಾದಿ ಸಂಸ್ಕೃತಿ ಅಲ್ಲ. ಅದೊಂದು ಶ್ರಮಶೀಲ ಸಂಸ್ಕೃತಿ ಮತ್ತು ಸೃಷ್ಟಿಶೀಲ ಸಂಸ್ಕೃತಿ. ಅದು ನಿರ್ದಿಷ್ಟ ವ್ಯಕ್ತಿ ಸಿದ್ಧಾಂತ ತತ್ವಗಳಿಗೆ

ಸೀಮಿತವಾದದ್ದಲ್ಲ. ಸಕಲ ಚರಾಚರವನ್ನು ಮತ್ತು ಅದರ ಚಲನೆಯನ್ನು ಜೀವಂತ ಸಂಸ್ಕೃತಿಯಾಗಿ ಭಾವಿಸುತ್ತದೆ. ರೂಢಿಗತ ಆಕಾರ ಮತ್ತು ವ್ಯಾಖ್ಯಾನಗಳಿಗಿಂತ ಸಾಂಸ್ಕೃತಿಕ ಪರಿಕಲ್ಪನೆಯಾಗಿದೆ. ಮಾನವ ಸಮಾಜದ ಪ್ರಗತಿ ಮತ್ತು ಅಭಿವೃದ್ಧಿ ಕಂಡುಕೊಂಡು ವ್ಯವಸ್ಥೆಗಳು, ಸಂಬಂಧಗಳು ಜ್ಞಾನ, ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ, ಕಲೆ, ಸಂಗೀತ, ಭಾಷೆ, ಉಪಕರಣಗಳು, ರೀತಿ-ನೀತಿಗಳು, ಮನುಷ್ಯರ ಭಾವನೆಗಳು ಇವುಗಳನ್ನು ಪ್ರತಿಬಿಂಬಿಸುವ ಜನಜೀವನವನ್ನು ಸಂಸ್ಕೃತಿ ಎಂದು ಪರಿಭಾವಿಸುತ್ತದೆ. ಅಂದರೆ ಪಾಂಚಾಳ ಸಂಸ್ಕೃತಿ ಆರ್ಥಿಕ, ಸಾಮಾಜಿಕ, ರಾಜಕೀಯ, ಕಲೆ, ಜ್ಞಾನ ಎಲ್ಲವನ್ನು ಒಳಗೊಂಡಿರುವ ಸಮಷ್ಟಿರೂಪ ಅದಕ್ಕಿದೆ. ಇದು ಸಂಸ್ಕೃತಿಯನ್ನು ಕೆಲವು ವಿಶಿಷ್ಟ ವ್ಯಕ್ತಿಗಳ ವೈಯಕ್ತಿಕ ಸಾಧನೆ ಎಂಬ ಗ್ರಹಿಕೆಯನ್ನು ನಿರಾಕರಿಸಿ, ಅದು ಇಡೀ ಮನುಷ್ಯ ಸಮಾಜವು ಪಡೆದುಕೊಂಡು ಅನುಭವ ಜ್ಞಾನವನ್ನಾಗಿ ನೋಡುತ್ತದೆ.

ಕನ್ನಡ ಸಾಹಿತ್ಯ ಕೃತಿಗಳಲ್ಲಿ ಕಾಣುವ ಪಾಂಚಾಳರ ಕುರಿತು ಎರಡು ರೀತಿಯ ನೆಲೆಗಳನ್ನು ಗುರುತಿಸಬಹುದು. ೧. ಆದರ್ಶವಾದಿ ನೆಲೆ, ೨. ಶೂದ್ರವಾದಿ ನೆಲೆ.

ಆದರ್ಶವಾದಿ ನೆಲೆಯಲ್ಲಿ ಆರ್ಷೇಯ ಚಿಂತನೆಗಳು ಕಂಡುಬಂದರೆ ಶೂದ್ರವಾದಿ ನೆಲೆಯಲ್ಲಿ ವೃತ್ತಿಪ್ರಧಾನವಾಗಿ ಗುರುತಿಸಲಾಗುತ್ತದೆ. ಆರ್ಷೇಯ ಸಂಪ್ರದಾಯಗಳ ವಿಶ್ವಕರ್ಮ ಸಂಸ್ಕೃತಿಗಳು, ವೇದ, ಆಗಮ, ಪುರಾಣ, ಉಪನಿಷತ್ತು, ಇವುಗಳ ಮೂಲಕ ವೈದಿಕ ಪರವಾದಂತಹ ಚಿಂತನೆಗಳನ್ನು ಮಂಡಿಸಿದರೆ ಶೂದ್ರವಾದಿ ನೆಲೆ ಕಬ್ಬಿಣ, ಮರ, ತಾಮ್ರ, ಶಿಲೆ, ಬಂಗಾರ ಎನ್ನುವ ಪಂಚಕಸುಬುಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತವೆ.

ಕನ್ನಡ ನಾಡಿನ ಹಲವು ಶಾಸನಗಳು ಪಾಂಚಾಳ ಸಂಸ್ಕೃತಿಯನ್ನು ಸ್ವಾವಲಂಬಿ ಸಮುದಾಯ ಪ್ರಧಾನ ಹಾಗೂ ಉತ್ಪಾದನೆ ಮತ್ತು ವಿನಿಮಯ ಸಂಸ್ಕೃತಿಯನ್ನಾಗಿ ದಾಖಲೀಕರಿಸಿವೆ. ಪಾಂಚಾಳರನ್ನು ನಿರ್ಮಾತೃ ಸಂಸ್ಕೃತಿಯ ಪ್ರತೀಕವಾಗಿ ವಿವರಿಸುತ್ತವೆ. ಆದರೆ ಶಾಸನಗಳ ಮೇಲೆ ನಡೆದ ಹೆಚ್ಚಿನ ಅಧ್ಯಯನಗಳು ರಾಜನ ಯುದ್ಧ ವಿಶೇಷಗಳು ದೇವಾಲಯಗಳ ನಿರ್ಮಾಣ ಹಾಗೂ ಧನಕಾರ್ಯಗಳ ಶ್ರೇಷ್ಠತೆಯನ್ನೇ ಮೇಲು ಮಾಡಿ ಹೇಳಿದವು. ಕಸುಬುದಾರ, ಚರ್ಚೆ ಗೌಣವಾಯಿತು. ಇದಕ್ಕೆ ಆದರ್ಶವಾದಿ ಸಾಂಸ್ಕೃತಿಕ ಅಧ್ಯಯನಗಳ ಕಾರಣವಾದವು ಒಂದು ರಾಜ್ಯದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾದ ಸುಗಮ ನಡಿಗೆಗೆ ಪಾಂಚಾಳರು ಅತ್ಯವಶ್ಯ. ಸಾಮಾಜಿಕ, ಭೌತಿಕ, ಆಂತರಿಕ ನೀತಿ ನಿರ್ಧಾರಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಪಾಂಚಾಳರು ಪ್ರಮುಖರಾಗಿದ್ದರು.

ಕೌಟಿಲ್ಯ ಗುರುತಿಸುವಂತೆ ರಾಜ್ಯವ್ಯವಸ್ಥೆಯ ಗೂಢಾಚಾರ್ಯ ವಿಭಾಗದಲ್ಲಿ ಸನ್ಯಾಸಿ, ಜ್ಯೋತಿಷಿ, ಸೂಳೆಯರು, ಇರುವಂತೆ ಕಸುಬುದಾರರು ಹಾಗೂ ಅವರು ಇರುವ ಜಾಗಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು. ಬಡಗಿ, ಕಮ್ಮಾರರು ಮತ್ತು ಅಕ್ಕಸಾಲಿ ಈ ವಿಚಾರದಲ್ಲಿ ಸೂಕ್ಷ್ಮಗ್ರಾಹಿಗಳಾಗಿದ್ದು ಸಾರ್ವಜನಿಕರೊಂದಿಗೆ ಮುಕ್ತವಾಗಿ ಬೆರೆಯುತ್ತಿದ್ದರು. ಇದರಿಂದ ಶತ್ರುಗಳಿಂದ ರಾಜ್ಯಕ್ಕೆ ಬರುತ್ತಿದ್ದ ಆಪತ್ತು ನಿರ್ವಹಣೆಯಲ್ಲಿ ಇವರ ಪ್ರಮುಖ ಪಾಲು ಇರುತ್ತಿತ್ತು. ಈ ಅರ್ಥದಲ್ಲಿ ಪಾಂಚಾಳರು

ಕೇವಲ ಕಸುಬುದಾರರಲ್ಲದೆ ರಾಜ್ಯದ ಆರ್ಥಿಕ ಸಾಮಾಜಿಕ, ಸಾಂಸ್ಕೃತಿಕ ಹಿತವನ್ನು ಕಾಪಾಡುವಲ್ಲಿ ತಮ್ಮದೇ ಕೊಡುಗೆಯನ್ನು ನೀಡಿದ್ದಾರೆ.

ಶಾಸನಗಳಲ್ಲಿ ವಿಶ್ವಕರ್ಮ, ಸ್ಥಪತಿ, ಕಮ್ಮಾಲಾನ, ಪಂಚ ಕಸುಬಿನವರು ಪಾಂಚಾಳರ ಕುಲದವರು ಎಂಬ ಇತ್ಯಾದಿ ಉಲ್ಲೇಖಗಳು ಸಿಗುತ್ತವೆ. ಈ ಸಮುದಾಯದವರು ಹೇಮಕರ್ಮ, ಲೋಹಕರ್ಮ, ಶಿಲಾಕರ್ಮ, ರತ್ನಕರ್ಮ, ಕಾಷ್ಠಕರ್ಮ, ಚಿತ್ರಕರ್ಮ, ಪತ್ರಕರ್ಮ, ಪ್ರತಿಮಾಲಕ್ಷಣ ಮುಂತಾದ ವಿದ್ಯೆಗಳಲ್ಲಿ ಪರಿಣತರಾಗಿದ್ದರು. ನಾಗಮಂಗಲದ ಒಂದು ಶಾಸನದಲ್ಲಿ(ಕ್ರಿ.ಶ.೭೭೬-೭೭೭) 'ಸರ್ವಕಾಲಾದಾರ ಭೂತ ಚಿತ್ರಕಲಾಭಿಜ್ಞೆರ್ಯೇ ವಿಶ್ವಕರ್ಮಚಾರ್ಯನ ಎಂದು ವರ್ಣಿಸುತ್ತದೆ. ಇನ್ನು ಕೆಲವು ಶಾಸನಗಳಲ್ಲಿ ಪಾಂಚಾಳರನ್ನು ಸರಸ್ವತಿ ಗನದಾಸಿಗಳೆಂದು ಸರಸ್ವತಿ ಮಿತ್ರರೆಂದು ಕರೆಯುವುದಾಗಿದೆ.

ಕುತೂಹಲದ ವಿಷಯವೆಂದರೆ ಆಯಾ ರಾಜಕೀಯ ಸಂದರ್ಭ ಮತ್ತು ಪ್ರಾದೇಶಿಕ ಆದ್ಯತೆಗಳ ಹಿನ್ನೆಲೆಯಲ್ಲಿ ಪ್ರಾಶಸ್ತ್ಯ ದೊರೆಕಿದರೂ ಶಿಲ್ಪಾಚಾರ್ಯರಿಗೆ ಸಿಕ್ಕ ಪ್ರಧಾನತೆ ಉಳಿದ ನಾಲ್ಕು ಕಸುಬಿನವರಿಗೆ ಸಿಕ್ಕಿತು. ತಮ್ಮ ಕಲಾ ನೈಪುಣ್ಯತೆ ರಾಜ ಮನ್ನಣೆ ಪಡೆದ ವೃತ್ತಿ ಮತ್ತು ಆಯದ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದ ಪಾಂಚಾಳರು ಅಷ್ಟೇ ಪ್ರಮಾಣದ ಅವಮರ್ಯಾದಿದಿಗೂ ಉಪೇಕ್ಷೆಗೂ ಒಳಗಾಗಿದ್ದಾರೆ. ಮಹಾಕಾವ್ಯ, ಶಾಸ್ತ್ರಿ, ಪುರಾಣ ಮುಂತಾದ ಧರ್ಮಶಾಸ್ತ್ರ ಕೃತಿಗಳಲ್ಲಿ ಈ ಪಂಚಕಸುಬುದಾರ ಬಗ್ಗೆ ಹೇಳಿದರೂ ಸಾಮಾಜಿಕ ವಾಸ್ತವದಲ್ಲಿ ಇವರಿಗೆ ಸಿಕ್ಕ ಸ್ಥಾನಮಾನ ಅಂತಹ ಘನತೆಯುಳ್ಳವೇನಾಗಿರಲಿಲ್ಲ.

ಕಮ್ಮಾರ, ಬಡಗಿ, ಅಕ್ಕಸಾಲಿ, ಕಂಚುಗಾರ, ಶಿಲ್ಪಿಗಳು ಎಲ್ಲರೂ ಪಾಂಚಾಳ ಸಮುದಾಯಕ್ಕೆ ಸೇರಿದವರು. ಚಿನ್ನದ ಕೆಲಸ ಮಾಡುತ್ತಿದ್ದ ಅಕ್ಕಸಾಲಿಗರು ಅಪರೂಪಕ್ಕೆ ಶಾಸನ ಕೆತ್ತಿದ್ದುದ್ದು ಇದೆ. ರಾಜರ ಟಂಕಶಾಲೆಯಲ್ಲಿ ನಾಣ್ಯಗಳನ್ನು ಟಂಕಿಸುವ ಮತ್ತು ಚಲಾವಣೆಗೆ ತರುವ ಮುಖ್ಯ ಅಧಿಕಾರಿಗಳಾಗಿ ನೇಮಕಗೊಳ್ಳುತ್ತಿದ್ದರು. ಸ್ಥಪತಿಗಳಾಗಿ ಅರಮನೆ, ಗುರುಮನೆ, ಯುದ್ಧ ಮಂಟಪ ನಗರ ಗ್ರಾಮಗಳ ರಚನೆ ಯುದ್ಧಾಸ್ತ್ರಗಳ ತಯಾರಿಕೆ ಮುತ್ತು, ರತ್ನ ಮತ್ತು ವಜ್ರಗಳ ಬಳಕೆಯ ನೈಪುಣ್ಯತೆ ಆಭರಣ ತಯಾರಿಕೆಗಾಗಿ ರಾಜರು ಪಾಂಚಾಳರಿಗೆ ಗೌರವಾನ್ವಿತ ಉದ್ಯೋಗ ನೀಡಿ ತಮ್ಮ ಅರಮನೆಯಲ್ಲಿ ಇರಿಸಿಕೊಳ್ಳುತ್ತಿದ್ದರು.

೧೧೯೮ರ ಕುಡುತಿನಿ ಶಾಸನ ಒಂದರಲ್ಲಿ ಸಾವಿಯೋಜ ಮತ್ತು ಚಿಕ್ಕಮಾಯೋಜ ಇಬ್ಬರು ಟಂಕಸಾಲಿಗಳ ಅಧಿಕಾರಿಗಳ ಉಲ್ಲೇಖ ಬರುತ್ತದೆ. ಇವರು 'ಲೋಕ್ಕಿ ಪನ್ನನ್ನು ಆದ ತುಕದ ನವಿಲು ಪೊನ್ನಾಗಿ' ಬದಲಾಯಿಸುವ ನಿಪುಣತೆಯನ್ನು ಪಡೆದಿದ್ದರು. ಕ್ರಿಶ.೧೧೦೪ರಲ್ಲಿ ಲಕ್ಕುಂಡಿ ಶಾಸನದಲ್ಲಿ ನಾಣ್ಯವನ್ನು ಸಮಕಟ್ಟು ಮಾಡುವಲ್ಲಿ ಹನ್ನೆರಡು ಮಂದಿ ಅಕ್ಕಸಾಲಿಗಳ ಕಾರ್ಯ ಪ್ರವೃತ್ತರಾಗಿದ್ದರು ಎಂಬ ಉಲ್ಲೇಖ ಸಿಗುತ್ತದೆ. ಮತ್ತೊಂದು ಶಾಸನದಲ್ಲಿ 'ಉತ್ತೊಮ ಓಜ' ಎನ್ನುವನು ತ್ರಿಭುವಮಲ್ಲದೇವನಕ್ಕಸಾಲಿ ಉತ್ತಮ ಓಜ ಎಂದು ಉಲ್ಲೇಖಿಸುತ್ತದೆ. ಅಂದರೆ ಅಕ್ಕಸಾಲಿ ಉತ್ತಮ ಓಜನು. ರಾಜ ಪ್ರಭುವನ ಮಲ್ಲದೇವನು ಕಮ್ಮಕಾಟಾಧಿಕಾರಿಯಾಗಿದ್ದು(Mentmastar) ಚಿನ್ನದ ನಾಣ್ಯಗಳು ಉತ್ತಮೋಜ ಆದರ್ಶದ ಮೇರೆಗೆ ಟಂಕಿಸಲ್ಪಡುತ್ತಿದ್ದವು. ಈತನು ಚಿನ್ನದ ನಾಣ್ಯಗಳನ್ನು

ಮುದ್ರಿಸಲು ಬೇಕಾದ ಮಹಾರಾಜ ಮೊಹರನ್ನು ಒಳಗೊಂಡ ಕಮ್ಮಟದ ಹಣಿ(ಡೈ)ಯನ್ನು ತನ್ನ ಬಳಿ ಇಟ್ಟುಕೊಳ್ಳುತ್ತಿದ್ದುದು ವಿಶೇಷ. ಅಂದರೆ ಅಷ್ಟರಮಟ್ಟಿಗೆ ಪಾಂಚಾಳರು ರಾಜನ ಆರ್ಥಿಕ ಸ್ಥಿತಿ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಅದೇ ರೀತಿ ಕಬ್ಬಿಣ ಕೆಲಸ ಮಾಡುತ್ತಿದ್ದ ಕಮ್ಮಾರರ ಬಗ್ಗೆ, ಮರದ ಕೆಲಸ ಮಾಡುತ್ತಿದ್ದ ಬಡಗಿಗಳ ಬಗ್ಗೆ ಮತ್ತು ಅವರಿಗೆ ಸಿಗುತ್ತಿದ್ದ ವೇತನ ಗೌರವ ಮತ್ತು ಸಾಂಸ್ಕೃತಿಕ ಜವಾಬ್ದಾರಿಗಳನ್ನು ಕುರಿತು ಹಲವು ಶಾಸನಗಳು ವಿವರಿಸುತ್ತವೆ.

ಕನ್ನಡದ ಚಂಪೂ ಕೃತಿಗಳಲ್ಲಿ ಉಪಮೆ ಮತ್ತು ರೂಪಕಾತ್ಮಕವಾಗಿ ಪಾಂಚಾಳ ವೃತ್ತಿ ಮತ್ತು ಸಮುದಾಯವನ್ನು ಉಲ್ಲೇಖಿಸಿದ್ದು ಕಂಡುಬರುತ್ತದೆ. ವಡ್ಡಾರಾಧನೆ ವಿದ್ಯುಚ್ಚೋರನ ಋಷಿಯ ಕಥೆಯಲ್ಲಿ ಮನೆ ನಿರ್ಮಾಣದ ಸಂದರ್ಭದಲ್ಲಿ ಬಡಿಗೇರರನ್ನು ಉಲ್ಲೇಖಿಸಲಾಗಿದೆ. ಆದಿಪುರಾಣದಲ್ಲಿ ಕಮ್ಮಾರರನ್ನು ಓಜ, ಸಂಸ್ಕೃತಿಯ ಪ್ರತೀಕವಾಗಿ ಚಿತ್ರಿಸಲಾಗಿದೆ. ಅಂದರೆ ಅರಮನೆ ಯಾಗಶಾಲೆ ಯುದ್ಧಾಸ್ತ್ರಗಳು ಮತ್ತು ಅಧ್ಯಾಪಕ ವೃತ್ತಿಯ ಸಂಬಂಧದಲ್ಲಿ 'ಓಜ' ಅಂದರೆ ಜ್ಞಾನಿ, ತಿಳಿದವ, ಸಾಧಕ ಎನ್ನುವ ಅರ್ಥದಲ್ಲಿ ಬಳಸಲಾಗಿದೆ.

ವಿಕ್ರಮಾರ್ಜುನ ವಿಜಯದಲ್ಲಿ ಕಮ್ಮಾರ ಸಂಸ್ಕೃತಿಯ ಸಚಿತ್ರದರ್ಶನ ಕಾಣುತ್ತೇವೆ. ಕವಿಯು ಭೀಮನ ಆಕ್ರೋಶವನ್ನು ವರ್ಣಿಸುವಾಗ ಕಮ್ಮಾರ ಮತ್ತು ಕುಲುಮೆಯನ್ನು ಉಪಮೆಯನ್ನಾಗಿ ಬಳಸುತ್ತಾನೆ. ರನ್ನ ತನ್ನ ಗದಾಯುದ್ಧದಲ್ಲಿ ಕಮ್ಮರಯೋಜನ್ ಎನ್ನುವ ಪದವನ್ನು ಚಿನ್ನ, ಮರ, ಕಲ್ಲು, ಕಬ್ಬಿಣ ಕೆಲಸ ಮಾಡುವ ಪಾಂಚಾಳರೆಂಬ ವಿಶ್ವಕರ್ಮರು ಓಜರೆನಿಸಿಕೊಳ್ಳುತ್ತಾರೆ ಎಂದು ವಿವರಿಸುತ್ತಾನೆ. ನಯಸೇನನ ಧರ್ಮಾಮೃತದಲ್ಲಿ ಪಾಂಚಾಳರ ಸಾಂಸ್ಕೃತಿಕ ವಿನ್ಯಾಸವನ್ನು ನಿಚ್ಚಳವಾಗಿ ಕಾಣಬಹುದು. 'ಕಮ್ಮಟವಿಲ್ಲದೆ ಖಡ್ಗಾಗ್ರಿ ಶಸ್ತ್ರಂಗಳಾವುವು' ಮತ್ತೊಂದೆಡೆ 'ಕಮ್ಮರನಂತೆ ಕಾಸಿ ಬಡಿವರ್, ಬಡಿಗಿಯಂತೆ ಕೆತ್ತವರ್' ಎನ್ನುವ ಉಲ್ಲೇಖ ಸಿಗುತ್ತದೆ. ಅಂದರೆ ಯುದ್ಧಸಂಸ್ಕೃತಿಯ ಭಾಗವಾಗಿ, ಇಮಾರತಿ ಸಂಸ್ಕೃತಿಯ ಭಾಗವಾಗಿ ಬಡಗಿ ಕಮ್ಮಾರನನ್ನು ನಯಸೇನ ವರ್ಣಿಸುತ್ತಾನೆ.

ರಾಘವಾಂಕನ ಸಿದ್ಧರಾಮನ ಚರಿತೆಯಲ್ಲಿ ಶಿಲ್ಪಿಗಳು ಮತ್ತು ಶಿಲ್ಪ ಸಂಸ್ಕೃತಿಯ ಉಲ್ಲೇಖಗಳಿವೆ. ಸೊನ್ನಲಿಗಪುರದಲ್ಲಿ 'ನನ್ನ ಎಲ್ಲ ರೂಪವನ್ನು ಒಟ್ಟಾಗಿ ಸೇರಿಸಿ ನನ್ನ ಮೂಲ ಲಿಂಗದ ಹೆಸರಿನಿಂದ ಪ್ರತಿಷ್ಠಾಪನೆ ಮಾಡು' ಎಂದು ಶಿವನು ಸಿದ್ಧರಾಮನಿಗೆ ಹೇಳುತ್ತಾನೆ. ಆಗ ಸೊನ್ನಲಿಗಪುರದ ವಾಯವ್ಯ ದಿಕ್ಕಿನಲ್ಲಿದ್ದ ಉದ್ಭವ ಲಿಂಗವನ್ನು ಕರೆತರಲು ಶಿಲ್ಪಶಾಸ್ತ್ರ ಪಂಡಿತರನ್ನು ಸಿದ್ಧರಾಮ ಕರೆದುಕೊಂಡು ಹೋಗುತ್ತಾನೆ. ಉದ್ಭವಲಿಂಗಕ್ಕೆ ಶಾಸ್ತ್ರೋಕ್ತವಾಗಿ ಶಿಲ್ಪಿಗಳು ಆಕಾರ ಕೊಡುತ್ತಾರೆ. ಐದು ಮುಖಗಳನ್ನು ಒಂದೇ ಲಿಂಗದಲ್ಲಿ ಬಿಡಿಸಿ ತಮ್ಮ ನೈಪುಣ್ಯತೆಯನ್ನು ಮೆರೆಯುತ್ತಾರೆ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಒಂದು ಮಹತ್ವದ ಮಾತು ಬರುತ್ತದೆ. ಜನಪದರಲ್ಲಿ 'ಅಕ್ಕಸಾಲಿ ಅಕ್ಕನ ಬಂಗಾರವನ್ನು ಬಿಡಲಾರ' ಎನ್ನುವ ರೂಢಿಮಾತಿಗೆ ಪ್ರತಿಯಾಗಿ ಎನ್ನುವಂತೆ 'ದುರುಳೆ ನಿನ್ನ ಚಿನ್ನ ವ್ಯಾಪಾರ ಆಗದೇ ಹೋದರೆ ಅಕ್ಕಸಾಲಿಯನ್ನು ಬಯ್ದು ಏನು ಪ್ರಯೋಜನ' ಎನ್ನುವ ಮಾತು ಬರುತ್ತದೆ. ಅಂದರೆ ಮಾಯೆಯ ಹುಸಿ ಭಕ್ತಿಯನ್ನು ಟೀಕಿಸುವ ಮತ್ತು ತಿಳಿಸಿ ಹೇಳುವ ಸಂದರ್ಭದಲ್ಲಿ

ಅಕ್ಕಸಾಲಿಗರ ಸಾಂಸ್ಕೃತಿಕ ಜವಾಬ್ದಾರಿಯನ್ನು ಕಟ್ಟಿಕೊಡುತ್ತಾನೆ. ಕುಮಾರರಾಮ ಸಾಂಗತ್ಯದಲ್ಲಿ ಯುದ್ಧಾಸ್ತ್ರಗಳ ಭಾಗವಾಗಿ, ಕನಕದಾಸರ ಮೋಹನ ತರಂಗಿಣಿಯಲ್ಲಿ ದಿವ್ಯರತ್ನಗಳ ತಜ್ಞರನ್ನಾಗಿ ಪಾಂಚಾಳರನ್ನು ವಿಶ್ಲೇಷಿಸಲಾಗಿದೆ.

'ವಡ್ಡಾರಾಧನೆ'ಯಲ್ಲಿ ಬರುವ 'ಗಜಕುಮಾರನ ಕಥೆ'ಯಲ್ಲಿ ಸುವರ್ಣಕಾರನಿಗೆ ಏರಣಿಗನೆಂದು ಸಂಬೋಧಿಸಲಾಗಿದೆ. ಇದರಿಂದ ಏರಣಿಗನೆಂದರೆ ಅಕ್ಕಸಾಲಿಗನೆಂದಂತಾಯಿತು. ಮಾನ್ಯರಾದ ಡಿ.ಎಲ್.ನರಸಿಂಹಾಚಾರ್ಯರು 'ಏರಣಿಗೆ' ಶಬ್ದನಿಷ್ಪತ್ತಿಯನ್ನು ವಿವರಿಸುತ್ತ ಪಾಲಿಭಾಷೆಯಲ್ಲಿಯ ಹೇರಣಿಗವೇ ಕನ್ನಡದಲ್ಲಿ ಏರಣಿಗವಾಗಿದೆಯೆಂದು ತಿಳಿಸಿದ್ದಾರೆ. ಇದಕ್ಕೂ ಒಂದು ಹೆಜ್ಜೆ ಮುಂದುವರಿದು 'ಅಬ್ಬ ಸಂವಾಸಿ ಸಮೀರನೇರಣಿಗನಾಗೆ' ಎಂಬ ಪ್ರಯೋಗವನ್ನು ಎತ್ತಿ ಹೇಳಿದೆ.[೧]

ವಚನ ಸಾಹಿತ್ಯಕ್ಕೆ ಬಂದಾಗ ಕಾಯಕತತ್ವದ ಭಾಗವಾಗಿ ಕಮ್ಮಾರರನ್ನು ಉಲ್ಲೇಖಿಸಿರುವುದು ಕಾಣುತ್ತದೆ. ಬಸವಣ್ಣನವರ ವಚನ ಇಲ್ಲಿ ಕಾಣುವ ಕರ್ತಾರನ ಕಮ್ಮಟ ಕಾಸಿ ಕಮ್ಮಾರನಾದ, ಅಗ್ನಿ ಆಧಾರದಲ್ಲಿ ಕಬ್ಬುಣ ನೀರುಂಬದಯ್ಯ, ಕಮ್ಮಾರನ ಕೆಲಸದ ಇಕ್ಕಳ ಎನ್ನುವ ವಚನದ ಸಾಲುಗಳು ಕಂಬಾರ ಕುಲ ವೃತ್ತಿ ಹಾಗೂ ವೃತ್ತಿಸಂಬಂಧಿ ಪರಿಕರಗಳ ಸ್ವಭಾವ ಹಾಗೂ ಕ್ರಿಯಾರೂಪವನ್ನು ಹೇಳುತ್ತವೆ. 'ಲೋಕವೆಂಬುದು ಕರ್ತಾರನ ಕಮ್ಮಟ' ಎನ್ನುವ ಪದ ಬಡಗಿ, ಕಮ್ಮಾರರು, ಸೃಷ್ಟಿಗಧಿಕರ್ತರು ಎನ್ನುವ ಮೌನೇಶ್ವರನ ವಚನದಂತೆ ಈ ಸೃಷ್ಟಿಯ ನಿರ್ಮಾಣದಲ್ಲಿ ನಾಗರಿಕತೆಯ ಬೆಳವಣಿಗೆಯಲ್ಲಿ ಕಮ್ಮಾರ ಹಾಗೂ ಆತನ ಕುಲುಮೆಗಿದ್ದ ಸಾಂಸ್ಕೃತಿಕ ವಿಶಿಷ್ಟತೆಯನ್ನು ಹೇಳುತ್ತದೆ. ಚನ್ನಬಸವಣ್ಣನ ವಚನದಲ್ಲಿ 'ಕಬ್ಬುಣವ ಮಾಡುವವ ಕಮ್ಮಾರ' ಎನ್ನುವ ಮಾತುಗಳು ಬರುತ್ತವೆ. ಸಿದ್ಧರಾಮನಲ್ಲು ಕರ್ಬುಣ ನೀರನೊಳಕೊಂಬಂತೆ, ನಗೆಯ ಮಾರಿತಂದೆ ವಚನದಲ್ಲಿ ಉದಯದಲ್ಲಿ ಕಮ್ಮಾರನ ಮನೆಗೆ ಬಂದು ಬೇಸತ್ತೆ ಎನ್ನುವಲ್ಲಿ ಕಮ್ಮಾರ, ಕಬ್ಬಿಣ ಹಾಗೂ ಕಾಯಕ ಸಂಸ್ಕೃತಿಯ ಮೂಲಗಳನ್ನು ಕಾಣುತ್ತೇವೆ.

ಒಕ್ಕಲಿಗ ಮುದ್ದಣ್ಣ, ಬಾಚಿಕಾಯಕದ ಬಸವಯ್ಯ, ಕಾಮಾಟದ ಭೀಮಣ್ಣ ಇವರಲ್ಲಿ ಬಡಗಿ ಸಂಸ್ಕೃತಿ ಹಾಗೂ ಪರಿಕರಗಳು ತತ್ವಮೀಮಾಂಸೆಯ ಭಾಗಗಳಾಗಿ "ಅಕ್ಕಸಾಲಿಗರನ್ನು ಬಸವಣ್ಣ ಚಿನ್ನಗೆಯ್ಕೆಯವ ಎಂದು ಕರೆಯುತ್ತಾನೆ. 'ಕಲ್ಲೊಳಗೆ ಹೊನ್ನುಂಟು, ಮರದೊಳಗೆ ಅಗ್ನಿಯುಂಟು ಎಂದರೆ, ಚನ್ನಬಸವಣ್ಣ ಭೂಮಿಯ ಜಲವುಗರ್ಚಿ ಹೇಮನರಸುವಂತೆ ಎಂದು ಹೇಳುವ ಮೂಲಕ ಭೂಮಿಯಲ್ಲಿ ನಿಕ್ಷೇಪವಾಗಿದ್ದ ಹೇಮವನ್ನು ಅರಸಿಸೋಲಿಸಿ ಹೊರತೆಗೆದು ಚಿನ್ನವಾಗಿಸುವ ಪ್ರಕ್ರಿಯೆಯನ್ನು ಹೇಳುತ್ತವೆ. ಕಂಬಾರರು, ಅಕ್ಕಸಾಲಿಗರು ಭೂಮಿಯಿಂದ ಕಬ್ಬಿಣ ಹಾಗೂ ಚಿನ್ನ ಲೋಹಗಳನ್ನು ಹೊರತೆಗೆಯುವಲ್ಲಿ ನಿಷ್ಣಾತರಾಗಿದ್ದರೆಂದು ತಿಳಿಯುತ್ತದೆ. ಲೋಹಗಳನ್ನು ಶೋಧಿಸುವ ಕರಗಿಸುವ ಘನೀಕರಿಸುವ ಹಾಗೂ ಮಿಶ್ರ ಮಾಡುವ ಮೂಲಕ ಅವುಗಳನ್ನು ಲೋಕೋಪಯೋಗಿ ವಸ್ತುಗಳಾಗಿ ಪರಿವರ್ತಿಸುವ ಪಾಂಚಾಳರ ಕೌಶಲ್ಯತೆಯನ್ನು ವಚನಕಾರರು ತಿಳಿಸಿಕೊಡುತ್ತಾರೆ".[೨] ಅದೇ ರೀತಿ ಕಂಚುಗಾರರು ಮತ್ತು ಶಿಲ್ಪಗಾರರ ಉಲ್ಲೇಖಗಳು ವಚನದಲ್ಲಿ ಕಾಣುತ್ತೇವೆ.

ವಚನಕಾರರಲ್ಲಿ ಪಾಂಚಾಳ ಕುಲ ವೃತ್ತಿ ಹಾಗೂ ಸಲಕರಣಿಗಳಂತೆ ಮೂರ್ತ ಹಾಗೂ ಸ್ವಾನುಭವದ ನೆಲೆಗಳನ್ನು ಆಧ್ಯಾತ್ಮಿಕ ಎತ್ತರಕ್ಕೆ ಏರಿಸಿದ್ದನ್ನು ಕಾಣುತ್ತೇವೆ. ಉಳಿ, ಬಾಚಿ, ಇಕ್ಕಳ, ಕೊಡತಿ, ಚಿಮ್ಮಟಿಗೆ, ತಿದಿ, ಗರಗಸ, ಕುಲುಮೆ, ಸುತ್ತಿಗೆ, ಕೊಳವೆ, ಮೊಸಯಂತೆ ವೃತ್ತಿ ಉಪಕರಣಗಳೊಂದಿಗೆ ಕತ್ತು, ಬಿಡಿ, ಇಡಿ ಹೊಗಿಲುದೇಗಿ, ಕರಗು, ಮೇರಗು ಒರೆಗಚ್ಚು ಇತ್ಯಾದಿ ಕ್ರಿಯಾರೂಪಗಳ ಮೂಲಕ ಘನವನ್ನು ವಿವರಿಸಲು ಹಂಬಲಿಸಿದ್ದು ವಚನಕಾರರ ಹಿರಿಮೆಯಾಗಿದೆ. ಪರಂಪರೆಯಲ್ಲಿ ತನ್ನ ಕ್ರಿಯಾಮೂಲ ಕಾರಣದಿಂದಲೇ ಅಲಕ್ಷಿತವಾಗಿದ್ದ ಪಾಂಚಾಳರ ವೃತ್ತಿ ಹಾಗೂ ಅವರ ನುಡಿಬೆಡಗನ್ನು ಅನುಭವದ ಸಂವೇದನೆಗಳಾಗಿ ಬಳಸುವ ಮೂಲಕ ಪಾಂಚಾಳರ ವೃತ್ತಿ ಹಾಗೂ ವೃತ್ತಿಕಾರರ ಆತ್ಮಗೌರವವನ್ನು ಗಟ್ಟಿಯಾಗಿಸಿದ್ದು ವಚನಕಾರರ ವೈಶಿಷ್ಟ ಕ್ರಿಯೆ ಇಲ್ಲದೆ ಜ್ಞಾನ ಪ್ರಯೋಜನವಿಲ್ಲ ಎನ್ನುವ ಮೂಲಕ ಕ್ರಿಯೆ ಮತ್ತು ಅರಿವಿನ ಅಂತಃಸಂಬಂಧವನ್ನು ಒಳಗೊಳಿಸಿ ಆತ್ಮಜ್ಞಾನಕ್ಕೆ ಆಧ್ಯಾತ್ಮಿಕಕ್ಕೆ ಅನುಭೂತಿಗೆ ಸಾಧನವಾಗಿಸಿದರು.

ಪ್ರಾಚೀನ ದಾಖಲೆಗಳಾದ ಕೈಫಿಯತ್ತು, ಬಖೈರುಗಳು, ನಾಮೆಗಳು, ಶಿಲ್ಪಗಳಾಗಿ, ಪ್ರಜಾಪಾಲರಾಗಿ, ನ್ಯಾಯತತ್ವರಾಗಿ, ವಿದ್ಯಾದಾನಿಗಳಾಗಿ, ಕೆರೆಕುಂಟೆ, ಕವಲೆಗಳಂತಹ ಲೋಕೋಪಯೋಗಿ ತಂತ್ರಜ್ಞಾನರಾಗಿ, ಕರ್ನಾಟಕದ ಸಾಂಸ್ಕೃತಿಕ ಚಳುವಳಿಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

ಪಾಂಚಾಳ ಸಮುದಾಯದವರ ಮತ್ತೊಂದು ಮಹತ್ವದ ಸಾಂಸ್ಕೃತಿಕ ಕೊಡುಗೆ ಎಂದರೆ ಬರಹದ ಜಗತ್ತನ್ನು ರೂಪಿಸಿದ್ದು. ವಿಶೇಷವಾಗಿ ಪಾಂಚಾಳರು ಲಿಪಿ ಮತ್ತು ಲೇಖನ ಸಾಮಗ್ರಿಗಳ ತಯಾರಿಕೆಯಲ್ಲಿ ನೈಪುಣ್ಯತೆ ಪಡೆದಿದ್ದರು. ಡಾ. ಎಸ್. ಶೆಟ್ಟರ್ ಅವರು ತಮ್ಮ 'ಹಳಗನ್ನಡ ಲಿಪಿ ಮತ್ತು ಲಿಪಿಕಾರ' ಕೃತಿಯಲ್ಲಿ ಉಲ್ಲೇಖಿಸುತ್ತಾರೆ.

ಕ್ರಿ.ಶ. ೭ನೇ ಶತಮಾನದಿಂದಲೇ ನೂರಾರು ಶಾಸನ ಶಿಲ್ಪಗಳು ಸಿಗುತ್ತಾರೆ. ಶಿಲ್ಪವಿದ್ಯಾ ಪ್ರವೀಣರಾದ ಕಲ್ಲುಕುಟಿಗ, ಅಕ್ಕಸಾಲಿಗ, ಬಡಗಿ, ಕಮ್ಮಾರ, ಕಂಚುಗಾರ ಈ ಕಂಡರಣೆ ಕಾರ್ಯವನ್ನು ಮಾಡುತ್ತಿದ್ದರು. ಕರ್ನಾಟಕದ ಸುಮಾರು ೨೫,೦೦೦ ಶಾಸನಗಳು ಅಕ್ಷರ ಶಿಲ್ಪಗಳನ್ನು ಕೆತ್ತಿ ಕಂಡರಿಸಿದ್ದಾರೆ. ಇಷ್ಟೊಂದು ಸಲ ಶಾಸನಗಳನ್ನು ಇವರು ಕಂಡರಿಸಿದ್ದರೂ ಅವುಗಳಲ್ಲಿ ಕಂಡರಿಸಿದ ಶಿಲ್ಪಗಳ ಹೆಸರಿನ ಉಲ್ಲೇಖ ತೀರ ಕಡಿಮೆ ಪ್ರಮಾಣದಲ್ಲಿ ಸಿಗುತ್ತವೆ. ಸಾಮಾನ್ಯವಾಗಿ ಈ ಶಿಲ್ಪರೂವಾರಿಗಳ ಹೆಸರಿನ ಹಿಂದೆ ಕಲ್ಲುಕುಟಿಗ, ಕಲ್ಲಂಕಡಿದಾತ, ಕಂಡರಣಿಕಾರ, ಸರಸ್ವತಿಗಣ, ಶಾಸನಾಚಾರ್ಯ, ಸೂತ್ರಧಾರಿ, ವಿಶ್ವಕರ್ಮ, ಅಕ್ಕಸಾಲಿಗ, ಭಿನ್ನಾನಿ, ಬಡಗಿ, ಶಿಲ್ಪಿ, ಆಚಾರಿ, ಗೌಂಡ, ಕಮ್ಮಾರ, ಕಂಚುಗಾರ ಮತ್ತು ರೂವಾರಿಗಳೆಂಬ ವಿಶೇಷಗಳು ಬರುತ್ತವೆ. ಒಮ್ಮೊಮ್ಮೆ ಓಜ, ಆಚಾರಿ, ಶಿಲ್ಪವೆಂಬ ಉಪಸರ್ಗಗಳು ಇರುತ್ತವೆ.

ನಮಗೆ ದೊರೆತ ಲಭ್ಯ ಆಕಾರಗಳನ್ನು ಆದರ್ಶಿಸಿ ಹೇಳುವುದಾದರೆ ಅತ್ಯಂತ ಪ್ರಾಚೀನವಾದ ಮತ್ತು ಮೊಟ್ಟ ಮೊದಲನೇ ಶಿಲಾಶಾಸನದ ಕರ್ತೃ ಎಂದರೆ ಪಲವಚಾರ್ಯ್ಯ. ಇವನ ಕಾಲ ಕ್ರಿ.ಶ ೭ನೇ ಶತಮಾನ. ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಮೇಲೆ ಪಾರ್ಶ್ವನಾಥ ಬಸದಿಯ ಬಲಗಡೆ

ಬಂಡೆಯಲ್ಲಿರುವ ೨೩ನೇ ಶಾಸನದ ಆಗ್ನೇಯಕ್ಕೆ ಇರುವ ಶಾಸನ ಇವರ ಕೃತಿ ಜನಮುನಿ ಒಬ್ಬನು ಸಲ್ಲೇಕ ವ್ರತವನ್ನು ಕೈಗೊಂಡ ವಿಷಯವನ್ನುಳ್ಳ ನಿಸಿದಿಗಲ್ಲು.

ಈ ಶಾಸನ ಲಿಪಿಕಾರರು, ಅಕ್ಷರಸ್ಥರಾಗಿದ್ದರು. ಲಿಪಿಯಲ್ಲಿ ವಿವಿಧ ವಿನ್ಯಾಸಗಳನ್ನು ಸೃಷ್ಟಿಸುವಷ್ಟು ಚತುರರಾಗಿದ್ದರು. ದುಂಡಾದ ಅಕ್ಷರಗಳನ್ನು ಬರೆಯುವಲ್ಲಿ ನಿಷ್ಣಾತರಾಗಿದ್ದರು. ಸುರೋಜ(ಕ್ರಿ.ಶ ೧೨೪೮) ಎಂಬ ಲಿಪಿಕಾರ "ಸರಸರಿಯ ಕೊರಳ ಮತ್ತು ಒಲೆರೆ ವೃತಂ ಕೊಮಲಂ ಶುಭದ್ರವೆನಿಸಿದ ಕರೆ ಒಂದರ" ಅಂದರೆ ನಾನು ಸರಸ್ವತಿಯ ಕೊರಳ ಮುತ್ತಿನಹಾರದಂತೆ ದುಂಡಾಗಿಯೂ ಕೋಮಲವಾಗಿಯೂ ಅಕ್ಷರಗಳನ್ನು ಬರೆಯುವುದಾಗಿ ಹೇಳಿಕೊಳ್ಳುತ್ತಾನೆ. ಅದೇ ರೀತಿ ತಾಮ್ರಶಾಸನಗಳನ್ನು ಬರೆದ ಹಲವಾರು ಲಿಪಿಕಾರರು ಸಿಗುತ್ತಾರೆ. ತಾಮ್ರಪಟಗಳ ಮೇಲೆ ಶಾಸನಗಳನ್ನು ಕೊರೆಯುವರನ್ನು ಉತ್ತರ್ಕಿರ್ಣಕಾರನೆಂದು ಕರೆಯುತ್ತಿದ್ದರು. ಈ ಕೆಲಸಕ್ಕಾಗಿ ವಿಶ್ವಕರ್ಮಾಚಾರ್ಯರನ್ನು ಕಂಚುಗಾರ ಆಚಾರ್ಯರನ್ನು ರಾಜರು ನೇಮಿಸಿಕೊಳ್ಳುತ್ತಿದ್ದರು. ಇವರು ಲೋಹವಿದ್ಯೆಯನ್ನು ಬಲ್ಲವರು. ಸಂಸ್ಕೃತ, ಕನ್ನಡ, ತೆಲುಗು ಮೊದಲಾದ ಭಾಷೆಯಲ್ಲಿ ಪರಿಣತರಾಗಿದ್ದರು. ಶಾಸನಚಾರ್ಯರನ್ನು ಸೂತ್ರದಾರಿಗಳೆಂದು ಕರೆಯಲಾಗುತ್ತಿತ್ತು. ಹೊಯ್ಸಳರ ಕಾಲದಲ್ಲಿ ಬಡಗಿಗಳು ಮತ್ತು ಕಲ್ಲಿನ ಕೆಲಸ ಮಾಡುವವರ ಕುಲದಿಂದ ಶಾಸನಾಚಾರ್ಯರನ್ನು ನೇಮಿಸಿಕೊಳ್ಳುತ್ತಿದ್ದರು. ಇದೇ ಸಂಪ್ರದಾಯವನ್ನು ವಿಜಯನಗರ ಅರಸರು ಅನುಸರಿಸಿದರು. ಈ ತಾಮ್ರಶಾಸನದ ಶಿಲ್ಪಗಳನ್ನು ೪ನೇ ಶತಮಾನದಿಂದ ೧೭ನೇ ಶತಮಾನದವರಿಗೂ ಕಾಣಬಹುದು. ತಾಮ್ರಶಾಸನ ಶಿಲ್ಪಿಗಳು ತಮ್ಮನ್ನು ಸರ್ವಕಲಾಭೂತರು, ಚಿತ್ರಕಲಾಭಿಜ್ಞೆಯರು ಎಂದು ಹೇಳಿಕೊಳ್ಳುತ್ತಾರೆ. ಇದರಿಂದ ಪಾಂಚಾಳರ ಕಲಾಪ್ರಾವೀಣ್ಯತೆ ಅರಿವಿಗೆ ಬರುತ್ತದೆ.

ಶಾಸನ ಕರ್ತೃಗಳಂತೆ ಹಸ್ತಪ್ರತಿ ಲಿಪಿಕಾರರು ಪೋಷಕರಾಗಿ ಕಾರ್ಯ ನಿರ್ವಹಿಸಿದ ಉಲ್ಲೇಖಗಳು ಕನ್ನಡ ಹಸ್ತಪ್ರತಿಗಳಲ್ಲಿ ಹೇರಳವಾಗಿ ಸಿಗುತ್ತವೆ. ಇದುವರೆಗೂ ದೊರೆತ ಲಭ್ಯ ಆಕರಗಳಲ್ಲಿ ೨೦ ಮಂದಿ ಲಿಪಿಕಾರ ಉಲ್ಲೇಖಗಳು ಸಿಗುತ್ತವೆ. ವಿಶೇಷವಾಗಿ ಮಧ್ಯಕಾಲೀನ ಕನ್ನಡ ಸಾಹಿತ್ಯಕ್ಕೆ ಪಾಂಚಾಳ ಸಮುದಾಯದ ಹಸ್ತಪ್ರತಿ ಲಿಪಿಕಾರರು ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಹಸ್ತಪ್ರತಿಯಲ್ಲಿ ಮತ್ತು ಕನ್ನಡ ಸಾಹಿತ್ಯ ಸಾಂಸ್ಕೃತಿಕ ಅಧ್ಯಯನದಲ್ಲಿ ಇವರ ಉಲ್ಲೇಖಗಳು ತೀರ ವಿರಳವಾಗಿ ಸಿಗುತ್ತವೆ. ಪ್ರಭಾವಿಗುಣವುಳ್ಳ ಸಾಹಿತ್ಯ ಸಂಸ್ಕೃತಿಗಳಲ್ಲಿ ಒಡಲಿನಲ್ಲಿ ಸೇರಿ ಹೋಗಿದ್ದರೂ ತನ್ನದೇ ಆದ ಅನನ್ಯತೆಯನ್ನು ಉಳಿಸಿಕೊಂಡು ಬದುಕಿದ ಪಾಂಚಾಳ ಲಿಪಿಕಾರರು ಎನಗೊಂಡ ಕನ್ನಡ ಸಾಹಿತ್ಯದ ಭಾಗಕ್ಕೆ ಬಲವರ್ಧನ ಶಕ್ತಿಯುಳ್ಳವರಾಗಿದ್ದಾರೆ. ಅಂತಃಶಕ್ತಿಯುಳ್ಳ ಪಾಂಚಾಳ ಲಿಪಿಕಾರ, ಪೋಷಕರ ಗಂಭೀರ ಅಧ್ಯಯನ ಎಂದು ಅನಿವಾರ್ಯ ಕೂಡ ಆಗಿದೆ. ಇದರಿಂದ ಕಳೆದು ಹೋಗಿದ್ದ ಸಾಂಸ್ಕೃತಿಕ ಚರಿತ್ರೆ ಕೊಂಡಿಗಳನ್ನು ಬೆಸೆಯಬಹುದಾಗಿತ್ತು."[೩]

ಹಸ್ತಪ್ರತಿ ಲಿಪಿಕಾರರಲ್ಲಿ ಅಕ್ಕಸಾಲಿಗರು, ಬಡಗಿಗಳು ಇದ್ದಂತೆ ವಿಶ್ವಕರ್ಮ ಮಠಾಧೀಶರು ಇರುವುದು ವಿಶೇಷ. ಆನೆಗುಂದಿ ಸಂಪ್ರದಾಯದ ಯಾದಗಿರಿ ಮಠದ ಲಿಂಗನನೇಂದ್ರ

ಚಾರ್ಯಗುರುಸ್ವಾಮಿ(ಕ್ರಿ.ಶ. ೪೬೨) ಪ್ರಮುಖರಾಗಿದ್ದಾರೆ. ಹೀಗೆ ಕರ್ನಾಟಕ ಬರಹ ಪರಂಪರೆಯನ್ನು ಗುರ್ತಿಸುವಲ್ಲಿ ಪಾಂಚಾಳರು ಪ್ರಮುಖವಾಗಿ ಎದ್ದುಕಾಣುತ್ತಾರೆ.

**೫.೧. ದಾರ್ಶನಿಕ ಆಯಾಮಗಳು**

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ರೂಪಿಸುವಲ್ಲಿ ಪಾಂಚಾಳರ ದಾರ್ಶನಿಕ ಪಾತ್ರ ಅತಿ ಮಹತ್ವದ್ದು. ಆದರೆ ಕನ್ನಡದ ಅಕಾಡೆಮಿಕ್ ಚಿಂತನೆಗಳು ಪಾಂಚಾಳರ ದಾರ್ಶನಿಕ, ತಾತ್ವಿಕ ಚಿಂತನೆಗಳನ್ನು ಅಷ್ಟಾಗಿ ಗಂಭೀರ ಸ್ವರೂಪವಾಗಿ ಪರಿಗಣಿಸಿಲ್ಲ. ಪಾಂಚಾಳ ದಾರ್ಶನಿಕ ಚಿಂತಕರ ಅಧ್ಯಯನಗಳು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಹೊಸ ಪರಿಪ್ರೇಕ್ಷ ಎಂದರು ಕಟ್ಟಿಕೊಳ್ಳಲು ಸಹಕರಿಸುತ್ತಾರೆ.

ಪಾಂಚಾಳ ದಾರ್ಶನಿಕರಲ್ಲಿ ಅಥವಾ ತಾತ್ವಿಕ ಚಿಂತಕರಲ್ಲಿ ಪ್ರಮುಖವಾಗಿ ಗುರ್ತಿಸಬಹುದಾದ ಹೆಸರುಗಳೆಂದರೆ ಬಾಚಿಕಾಯಕದ ಬಸವಯ್ಯ, ಅವನ ಪುಣ್ಯಸ್ತ್ರೀ ಕಾಳವ್ವ, ಕಾಮಾಟದ ಭೀಮಣ್ಣ, ಹಾವಿನಹಾಳಕಲ್ಲಯ್ಯ, ಕಿನ್ನರಿ ಬೊಮ್ಮಯ್ಯ, ಕರಸ್ಥಲನಾಗಿದೇವ, ಅಜಾತ ನಾಗಲಿಂಗಸ್ವಾಮಿ, ತಿಂಥಿಣಿ ಮೌನೇಶ್ವರ ಮೊದಲಾದವರು ಪ್ರಮುಖರು.

ಇವರಲ್ಲಿರುವ ವೈಶಿಷ್ಟ್ಯವೆಂದರೆ ರೂಢಿಗತ ಜ್ಞಾನ ಮತ್ತು ಕರ್ಮಮಾರ್ಗಗಳ ನಿರಾಕರಣೆ 'ಆರುದರುಶನದ ಆಟತೀರಿಹೋದ ಮೇಲೆ ಮೀರಿ ಮಾಡುವುದೆಲ್ಲ ಮರುಳಾಟ ಬಸವಣ್ಣ' ಊರಾಟ ನೋಡಿ ಉಣಬೇಕು" ಹಿಂದಿನ ಹೋರಾಟವೆಲ್ಲ ಬಿಡಬೇಕು ಎನ್ನುವ ಮೌನೇಶ್ವರ ಮಾತುಗಳಲ್ಲಿ 'ಸದ್ಗುರುವೆ ನೀನು ಬನ್ನಿಸಿದ ವಿದ್ಯೆಗಳಲ್ಲಿ ಇಹಲೋಕದಲ್ಲಿ ಸೂಕ ಪ್ರಥ ಎಂಬ ತೋರಿದರು. ಪರಲೋಕದಲ್ಲಿ ನರಕಕ್ಕೆ ಬೀಳಿಸುತ್ತಿವೆ. ಆದ್ದರಿಂದ ಸ್ಥೂಲಕವಾದ ಈ ವಿದ್ಯೆಗಳನ್ನು ನಾನು ಧಿಕ್ಕರಿಸುತ್ತೇನೆ. ಅಕಾಮ್ಯ ಕರ್ಮಗಳನ್ನು ಆಚರಿಸುವ ವಿದ್ಯೆಗಳಿಂದ ಏನು ಉಪಕಾರವಾಗಿತ್ತು. ಈ ಗುರುನಾಥ ಲೌಕಿಕ ಉದ್ಯೋಗಗಳು ಸುರುದಾಯಕವಾದ ಭಾಸಿವಾದರು ಆ ವಿದ್ಯೆಗಳು ಮನ ನಮ್ಮನ್ನು ಜನನ ಮರಣ ಸುಳಿಯಲ್ಲಿಯೇ ಭಂಗಪಡಿಸುತ್ತವೆ. ಆದ್ದರಿಂದ ಪ್ರತಿ ವಿಹಿತವಾದರು ಆ ಕರ್ಮಕಾಂಡ ಎನ್ನಿಸುವ ವಿದ್ಯೆಯನ್ನು ನಾನು ಮೆಚ್ಚುವುದಿಲ್ಲ. ಗುರುವೆ' ಎಂದು ನಿಶ್ಚಿಯವಾಗಿ ಹೇಳುವ ಅಜಾತ ನಾಗಲಿಂಗಸ್ವಾಮಿ ಮಾತುಗಳಾಗಲಿ ಬಹುಮುಖ್ಯವಾಗಿ ಪ್ರಭುತ್ವ ಮತ್ತು ಪುರೋಹಿತಶಾಹಿ ಸಂಘಟಿತ ರೂಪಗಳಾಗಿ ಜ್ಞಾನ ವಲಯಗಳನ್ನು ಗುರುತಿಸಿಕೊಂಡಿದ್ದ ಭಾರತೀಯ ಭಾವನಾವಾದಿ ದಾರ್ಶನಿಕ ಚಿಂತನೆಗಳನ್ನು ನಿರಾಕರಿಸುತ್ತವೆ. ಪ್ರಾಚೀನ ಭಾರತದ ತತ್ವಶಾಸ್ತ್ರ, ಧರ್ಮಶಾಸ್ತ್ರ, ತರ್ಕಮೀಮಾಂಸೆ ಶಾಸ್ತ್ರ ಪುರಾಣಗಳನ್ನು ಅವು ಬೋಧಿಸುವ ಮಿತ್ಯವಾದವನ್ನು ಅಕ್ಷರ ಸಂಸ್ಕಾರಕ್ಕೆ ನಿಗದಿಗೊಳಿಸಿ ಯಜ್ಞೋಪವೀತದಂತೆ ಶಾಸ್ತ್ರಕರ್ಮಗಳ ಶುಷ್ಕತನಗಳು ತೀವ್ರವಾಗಿ ಒರೆಗೆ ಹಚ್ಚುತ್ತಾರೆ. ಅವುಗಳಲ್ಲಿ ಮನೆ ಮಾಡಿದ್ದ ಜಡತ್ವ ಹಾಗೂ ಅಸಮಾನತೆ ನೆಲೆಗಳನ್ನು ಖಂಡಿಸುತ್ತಾರೆ. ವೈದಿಕ ದರ್ಶನ ಹಾಗೂ ನಿರ್ಬಂಧದ ಆಚೆಗೂ ಒಂದು ಆಧ್ಯಾತ್ಮಿಕತೆ ಇದೆ ಎಂಬುದನ್ನು ಜಗತ್ತಿಗೆ ತೋರಿಸಿಕೊಟ್ಟರು. ಒಂದು ಜೀವನಪರಂಪರೆಯನ್ನು ಬೆಳೆಸುವ ಹಾಗೂ ಕಟ್ಟಿಕೊಳ್ಳಬಹುದಾದ ಹಲವು ಸಾಧ್ಯತೆಗಳನ್ನು ಸಾಮಾಜಿಕವಾಗಿ

ತೆರೆದು ತೋರಿದರು. ನಿಜವಾದ ಆಧ್ಯಾತ್ಮಿಕ ಪರಂಪರೆ ಎನ್ನುವುದು ಜನರ ಮಧ್ಯದಿಂದ ಮತ್ತು ದುಡಿಮೆಯ ನೆಲೆಯಿಂದ ಹುಟ್ಟುತ್ತದೆ ಎಂಬುದನ್ನು ಸ್ವತಃ ಸಾಧಿಸಿ ತೋರಿಸಿದರು.

ವಿಶ್ವವೆಲ್ಲ ಮಿಥ್ಯ ಮತ್ತು ಮಾಯೆ ಎಂದರು ಶ್ರೀ ಶಂಕರರು. ಶ್ರಮಿಕ ಹಾಗೂ ಕೃಷಿಕರಿಗೆ ವಿಶ್ವಸತ್ಯದ ಪ್ರತಿಯೊಂದು ಸತ್ಯವು ದುಡಿಮೆಯ ಸತ್ಯದಿಂದ ಹುಟ್ಟುತ್ತದೆ ಎಂದು ಹೇಳುವ ಮೂಲಕ ಯಜ್ಞಯಾಗಾದಿಗಳಿಂದ ಎಲ್ಲ ಫಲವು ದೊರೆಯುತ್ತದೆನ್ನುವ ದುಡಿಮೆರಹಿತ ತಾತ್ವಿಕ ದರ್ಶನವನ್ನು ಮೌನೇಶ್ವರರು ಸುಳ್ಳೆಂದು ತೋರಿಸಿದರು. ವಿಚಿತ್ರವೆಂದರೆ ಭಾರತೀಯ ಸಾಮಾಜಿಕ ಮೌಲ್ಯಗಳನ್ನು ದುಡಿಮೆರಹಿತ ಧರ್ಮಶಾಸ್ತ್ರಕಾರರು ನಿರ್ಧರಿಸಿದರೇ ಹೊರತು ಮೌನೇಶ್ವರರಂಥ ತತ್ವಜ್ಞಾನಿಗಳಲ್ಲ.[9]

ಭಾರತೀಯ ಭಾವನಾವಾದಿ ದರ್ಶನಗಳು ಮನುಷ್ಯನನ್ನು ಕರ್ಮ ಗ್ರಹಚಾರ, ಹಣೆಬರಹಗಳ ಬಂಧನದಲ್ಲಿ ಇರಿಸಿ ಅವನ ಸ್ವತಂತ್ರ ವ್ಯಕ್ತಿತ್ವ ಆಲೋಚನಾಕ್ರಮಗಳನ್ನು ನಾಶಪಡಿಸಿದ್ದವು. ಇದರಿಂದ ಈ ಜಗತ್ತನ್ನು ಅರ್ಥ ಮಾಡಿಕೊಂಡು ಸಂಕಷ್ಟಗಳಿಂದ ಪಾರಾಗಿ ಮನುಷ್ಯ ಸಾತ್ವಿಕ ಮಾರ್ಗದಲ್ಲಿ ನಡೆಯಬೇಕಾದ ದಾರಿಯನ್ನು ಅವು ಬಹುಮಂದಿಗೆ ತೆರೆದು ತೋರಲಿಲ್ಲ. ಬದಲಾಗಿ ಆ ಎಲ್ಲ ವಲಯಗಳಿಂದ ಮನುಷ್ಯನನ್ನು ವಂಚಿತವಾಗಿಸಿದವು. ವಿಶ್ವಕರ್ಮ ದಾರ್ಶನಿಕರು ಹೀಗೆ ಉಪೇಕ್ಷಿತಗೊಂಡ ಜನವರ್ಗಕ್ಕೆ ಅವರು ಇರುವ ಸ್ಥಿತಿಯಿಂದಲೇ ಉನ್ನತವಾದ ಚಿಂತನೆಗಳನ್ನು ತಿಳಿಯಲು ಮತ್ತು ಅರಿಯಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟವರು.

ಪಾಶ್ಚಾತ್ಯ ಚಿಂತಕನಾದ ಬೆಂಜಾಬಪ್ಯಾರಿಂಟನ್ ಹೇಳುವಂತೆ "ಕರಕುಶಲಕಾರನೊಬ್ಬ ಅನುಭವದಿಂದ ವಿಷಯಗಳನ್ನು ಸೈದ್ಧಾಂತಿಕವಾಗಿ ರೂಪಿಸಿದರೆ, ಚಿಂತಕ ಕೇವಲ ತನ್ನ ಮನಬಂದಂತೆ ರೂಪಿಸಿ ತೃಪ್ತಿ ಪಡೆಯಬಹುದು." ಅಂದರೆ ಕ್ರಿಯೆ ಮತ್ತು ಅರಿವಿನ ವಿಚ್ಛೇಧನೆಯನ್ನು ಇಂತಹ ಸಿದ್ಧಾಂತದಲ್ಲಿ ಕಾಣುತ್ತೇವೆ. ಪಾಂಚಾಳ ದಾರ್ಶನಿಕರು ಸಿದ್ಧಾಂತಕ್ಕಿಂತ ಕ್ರಿಯೆ ಮತ್ತು ಜ್ಞಾನಕ್ಕೆ ಒತ್ತು ನೀಡುತ್ತಾರೆ. ವಿದ್ಯೆಯೆನ್ನುವುದು ಕಲಿಕೆಗಿಂತ ಬುದ್ಧಿ ಮತ್ತು ಸಿದ್ಧಿಯಿಂದ ಸ್ವಯಂವೇದ್ಯವಾಗುವಂತದ್ದು ಅದಕ್ಕೆ ಕ್ರಿಯೆ ಮುಖ್ಯ ಎಂದು ಪ್ರತಿಪಾದಿಸಿದರು.

ವಿಶ್ವಕರ್ಮ ದಾರ್ಶನಿಕರು ಪರಂಪರೆಯ ಒಳಗಿದ್ದರು. ಪೂರ್ಣಭಿನ್ನ ರೀತಿಯಿಂದಲೇ ತಮ್ಮ ವ್ಯಕ್ತಿತ್ವ ಮತ್ತು ವಿಚಾರಗಳನ್ನು ರೂಪಿಸಿಕೊಂಡವರು. ಕಥನಾತ್ಮಕವಾಗಿ ರೂಪಕಾತ್ಮಕವಾಗಿ ವೃತ್ತಿ ಸಹಜಲಯಗಳನ್ನು ತತ್ವೀಕರಿಣಕ್ಕೆ ಒಳಪಡಿಸುವ ರೀತಿ, ದಾರ್ಶನಿಕ ಪರಿಕಲ್ಪನೆಗಳನ್ನೆಲ್ಲ ಚಾರಿತ್ರಿಕ ವಿಕಾಸದ ಪ್ರಕ್ರಿಯೆಯಲ್ಲಿಟ್ಟು ದೇಹ ಮನಸ್ಸು ಮಾನ ಪರಿವಾರ ಇತ್ಯಾದಿ ನೋಡುವ ರೀತಿ ವಿಶಿಷ್ಟವಾದದ್ದು. ಸನಾತನ ಸಾಮಾಜಿಕ ಮೌಲ್ಯಗಳ ದೃಷ್ಟಿಕೋನಗಳನ್ನು ಮುಕ್ತವಾಗಿ ವಿಮರ್ಶಿಸುವ ರೀತಿ, ಅಧಿಕಾರ ಅಥವಾ ವ್ಯವಸ್ಥೆಯೊಂದಿಗಿನ ಆತನ ಆವಜ್ಞತೆಯ ಪ್ರಜ್ಞೆ ಒಂದು ಹೊಸ ತಾತ್ವಿಕ ಭಿತ್ತಿಯನ್ನು ವಿನ್ಯಾಸಗೊಳಿಸುತ್ತದೆ.

ಸಾಂಪ್ರದಾಯಿಕವಾಗಿ ಸನಾತನ ಮೌಲ್ಯಗಳನ್ನಿಟ್ಟುಕೊಂಡೇ ಬದಕಲು ಹಂಬಲಿಸುವ ವಿಶ್ವಕರ್ಮ ಕುಲದಲ್ಲಿ ಹುಟ್ಟಿದ ಬಸವಯ್ಯ ಜಡಪರಿಕಲ್ಪನೆಗಳಿಗೆ ವಿಮುಖನಾಗುವುದಲ್ಲದೆ ಅವುಗಳೊಡಲಲ್ಲಿ

ಅಡಗಿರುವ ಜೀವವಿರೋಧಿ ನೆಲೆಗಳನ್ನು ಉಗ್ರವಾಗಿ ಖಂಡಿಸುತ್ತಾನೆ. ಹೀಗೆ ಅಕ್ಕಸಾಲಿಗನಾದ ಹಾವಿನಹಾಳ ಕಲ್ಲಯ್ಯ, ಕಿನ್ನರಿ ಬೊಮ್ಮಯ್ಯ, ಮನೆಕಾಯಕವ ಕಾಮಾಟದ ಭೀಮಣ್ಣ ಹಾಗೂ ನಂತರದಲ್ಲಿ ಬಂದ ತಿಂಥಿಣಿ ಮೋನಪ್ಪ ಪರಂಪರೆಯ ಜಡತ್ವದ ವಿರುದ್ಧ ಬಂಡಾಯ ಸಾರಿದ ಪ್ರಮುಖರು. ಹೀಗೆ ಏಕಕಾಲಕ್ಕೆ ಕುಲಮದದಿಂದ ದೂರ ಉಳಿಯುವ ಪ್ರಯತ್ನ ಒಂದೆಡೆಯಾದರೆ ಇನ್ನೊಂದೆಡೆ ಇತರ ಶರಣರೊಂದಿಗೆ ವೈಚಾರಿಕ ನಿಲುವಿನಲ್ಲಿ ಭಿನ್ನವಾಗಿ ಬದುಕಿದ್ದು ಇವರ ವಿಶೇಷವಾಗಿದೆ. ಬ್ರಾಹ್ಮಣೀಕರಣದ ನೆಲೆಯಲ್ಲಿ ಸಮಾಜವೊಂದು ತನ್ನ ಆಚಾರಾಧಿಕಾರ ಮತ್ತು ಸಾಮಾಜಿಕಾಧಿಕಾರಗಳ ಆಸ್ತಿತ್ವವನ್ನು ಪ್ರತಿಪಾದಿಸಿದ ರೀತಿಗೆ ತೀಕ್ಷ್ಣ ಪ್ರತಿಕ್ರಿಯೆಯಾಗಿ ಪರಂಪರೆಯ ಒಳಗಿನಿಂದಲೇ ಮೂಡಿಬಂದ ಈ ಕಸುಬುದಾರರು ವಿಶ್ವಕರ್ಮನ ಮೂಲ ತತ್ವವಾದ ಕ್ರಿಯಾತ್ಮಕತೆಯನ್ನು ಎತ್ತಿ ಹಿಡಿದರು.[೬]

**೫.೨. ಸಾಮಾಜಿಕ ಆಯಾಮಗಳು**

ಸಾಮಾಜಿಕ ಅಥವಾ ಸಾಹಿತ್ಯಿಕ ಆಯಾಮಗಳಲ್ಲಿ ಪಾಂಚಾಳರ ಸಾಂಸ್ಕೃತಿಕ ಪ್ರತಿನಿಧೀಕರಣವನ್ನು ಎರಡು ನೆಲೆಯಲ್ಲಿ ಗುರ್ತಿಸಬಹುದು. ೧. ಕಲಾತ್ಮಕ ನೆಲೆ, ೨. ಸೇವಾ ನೆಲೆ.

ಪಾಂಚಾಳರಿಗೂ ಮತ್ತು ಜಾನಪದ ಜಗತ್ತಿಗೂ ನಿಕಟ ಸಂಬಂಧವಿದೆ. ಜನಪದ ಗೀತ ಪ್ರಧಾನ, ವಾದ್ಯಪ್ರಧಾನ, ಪ್ರದರ್ಶನಪ್ರಧಾನ, ಕುಣಿತಪ್ರಧಾನ ಕಲೆಗಳಲ್ಲಿ ಪಾಂಚಾಳರ ಪ್ರಾತಿನಿಧ್ಯ ಪ್ರಮುಖವಾಗಿದೆ. ಇದರಲ್ಲಿ ಪಾಂಚಾಳ ಹೆಂಗಸರು ಮತ್ತು ಮಕ್ಕಳ ಪ್ರಮುಖ ಪಾತ್ರವಿದೆ. ಗೀತ ಪ್ರಧಾನ ಹಾಡುಗಳಲ್ಲಿ ಪಾಂಚಾಳರು ಹಾಡಿದ ಮತ್ತು ಪಾಂಚಾಳರನ್ನು, ಅವರ ಸಂಸ್ಕೃತಿಯನ್ನು ಕುರಿತು ಇತರೆ ಸಮುದಾಯದವರು ಹಾಡಿದ ಹಾಡುಗಳನ್ನು ಕೂಡ ಪಾಂಚಾಳರ ಸಾಂಸ್ಕೃತಿಕ ವಿನ್ಯಾಸವನ್ನು ಅರಿಯಲು ಮಹತ್ವದ ಆಕರಗಳಾಗಿವೆ.

> ಕುಟ್ಟುವ ಬೀಸುವ ಹಾಡು ಯಾವ್ಯಾಕಿ ಕೇಳಿಸ್ಯಾಳ
> ಬಡಿಗಿ ಬಸಣ್ಣ ತಂಗಿ ಸುಭದ್ರಿ । ಕೇಳಿಸ್ಯಾಳ
> ಬಿಳಿ ಮುತ್ತಿನಂತ ಪದಗೊಳ[೭]

> ಬಡಿಗೇರ ಓಣ್ಯಾಗ ಕಿಡಿಗೇಡಿ ದ್ಯಾಮವ್ವ
> ಆಡು ಮಕ್ಕಳನ್ನ ಅಳಿಸ್ಯಾಳ । ದ್ಯಾಮವ್ವ
> ಜೋಡ ತೆಂಗಿನ ಕಾಯಿ ಒಡಿಸೇನ.[೮]

ಈ ಹಾಡುಗಳಲ್ಲಿ ಪಾಂಚಾಳ ಸಂಸ್ಕೃತಿಯ ಪ್ರಮುಖ ವಿನ್ಯಾಸಗಳನ್ನು ಕಾಣುತ್ತೇವೆ. ಪಾಂಚಾಳರಾದ ಬಡಗಿ, ಕಮ್ಮಾರ, ಅಕ್ಕಸಾಲಿಗ ಕಂಚುಗಾರ, ಶಿಲ್ಪಿ ಇವರ ಆರಾಧ್ಯ ದೈವಗಳು ವೃತ್ತಿ ಪರಿಕರಗಳಾದ ಉಳಿ, ಬಾಚಿ, ಕೊಡತಿ, ಗರಗಸ, ತಿಧಿ, ಇಕ್ಕಳ, ಕುಲುಮೆ, ಅಗ್ಗಿಷ್ಟಿಕೆ ಇವುಗಳೆಲ್ಲ ಸಾಂಸ್ಕೃತಿಕ ಆಯಾಮಗಳಾಗಿ ಸಮೃದ್ಧಿ ಸಾಮಾಜಿಕ ಪ್ರತೀಕವಾಗಿ ಜನಪದ ಹಾಡುಗಳಲ್ಲಿ ಮೈಪಡೆದಿವೆ.

ಅಸಮಾನತೆಯನ್ನು ಮೀರಿದ ಸಶಸ್ತ್ರ ಸಹ ಸಮ ಸಮಾಜದ ಪಾಂಚಾಳರು ಮತ್ತು ಗುರುಗಳ ನಿರ್ವಚನಗೊಂಡಿವೆ.

ಅದೇ ರೀತಿ ವಾದ್ಯಪ್ರಧಾನ ಕಲೆಗಳಾದ ಕರಡಿಮಜಲು, ಹಲಗಿಮಜಲು, ಭಜನೆ ಮುಂತಾದ ಕಲಾಪ್ರಕಾರಗಳಲ್ಲಿ ಪಾಂಚಾಳ ಕಲಾವಿದರ ಪ್ರಮುಖ ಪ್ರಾತಿನಿಧ್ಯವನ್ನು ಕಾಣುತ್ತೇವೆ. ಕರಡಿ ಮತ್ತು ಹಲಗಿ ಮಜಲುಗಳು ಮಂಗಳ ವಾಧ್ಯವಾಗಿದ್ದು, ಗ್ರಾಮಾಂತರ ಪ್ರದೇಶದಲ್ಲಿ ಪ್ರತಿಯೊಂದು ಮಂಗಳಕಾರ್ಯದಲ್ಲಿ ಅವುಗಳ ಅಗತ್ಯಿದ್ದೆ ಇರುತ್ತದೆ. ಕರಡಿಮಜಲು ಮತ್ತು ಹಲಗಿಮಜಲು ಪಾಂಚಾಳ ಸಮುದಾಯದವುಗಳೇ ಎನ್ನುವಷ್ಟು ಪಾಂಚಾಳ ಪತಿನಿಧ್ಯವನ್ನು ಪಡೆದುಕೊಂಡಿವೆ. ವಾದ್ಯಪ್ರಧಾನ ಕಲೆಯಲ್ಲಿ ಕಲಾವಿದರು ಆಗಿರದೆ ಅವುಗಳನ್ನು ತಯಾರಿಸುವ ತಾಂತ್ರಿಕತೆಯನ್ನು, ನುಡಿಸುವ ನೈಪುಣ್ಯತೆಯನ್ನು ಪಡೆದಿರುತ್ತಾರೆ.

ಪಾಂಚಾಳ ಕಲಾವಿದರು ಸಣ್ಣಾಟ, ಪಾರಿಜಾತ, ಬಯಲಾಟದಂತಹ ರಂಗಭೂಮಿಯಲ್ಲಿ ಕೋಲಾಟ ಹೆಜ್ಜೆ ಮೇಳಗಳಂತೆ ಕುಣಿತದಲ್ಲಿ ತಮ್ಮದೇ ಆದ ಕೌಶಲ್ಯಪೂರ್ಣ ಸ್ಥಾನಮಾನಗಳನ್ನು ಹೊಂದಿದ್ದಾರೆ. ನಟರಾಗಿ, ನಿರ್ದೆಶಕರಾಗಿ, ಕವಿಗಳಾಗಿ, ಹಾರ್ಮೋನಿಯಂರಾಗಿ, ತಬಲವಾದಕರಾಗಿ, ಹಿಮ್ಮೇಳ ಗಾಯಕರಾಗಿ, ನಿರ್ದೇಶಕರಾಗಿ, ಮಾಲೀಕರಾಗಿ, ಹಲವು ಹತ್ತು ಜವಾಬ್ದಾರಿಗಳನ್ನು ನಿರ್ವಹಿಸುವ ಮೂಲಕ ಜನಪದ ರಂಗಭೂಮಿಯ ಬೆಳವಣಿಗೆಯಲ್ಲಿ ಕಾದ್ರೋಳಿಯ ನೀಲಕಂಠಪ್ಪ ಪತ್ತಾರರಂತ ಹಿರಿಯ ಕಲಾವಿದರು ಮಾಡಿದ ಸಾಧನೆ ಗಣನೀಯವಾದುದು. ಹವ್ಯಾಸಿ ರಂಗಭೂಮಿಯಲ್ಲಿ ಪಾಂಚಾಳ ಕಲಾವಿದರ ಕೊಡುಗೆಯನ್ನು ಮರೆಯುವಂತಿಲ್ಲ. ಹೀಗೆ ಜನಪದ ಕಲಾಪ್ರಪಂಚವು ಸಾಂಸ್ಕೃತಿಕವಾಗಿ ವಿಕಾಸ ಹೊಂದುವಲ್ಲಿ ಪಾಂಚಾಳರ 'ಶ್ರಮ ಮತ್ತು ಶ್ರದ್ಧೆ ಅನುಪಮವಾದದ್ದು.

ಪಾಂಚಾಳರ ಸಾಮಾಜಿಕ ಆಯಾಮಗಳನ್ನು ಗಣನೆಗೆ ತೆಗೆದುಕೊಳ್ಳುವುದಾದರೆ ಸೃಷ್ಟಿಶೀಲ ಸ್ವಾವಲಂಬಿ ಸಮಾಜದ ನಿರ್ಮಾಣದಲ್ಲಿ ಅವರು ಮಾಡಿದ ಸೇವೆಯನ್ನು ಮರೆಯುವಂತಿಲ್ಲ. ಗ್ರಾಮಾಂತರ ಪ್ರದೇಶದಲ್ಲಿ ಕೃಷಿಕೆಲಸಗಳು ಹಬ್ಬ ಆಚರಣೆ, ಜಾತ್ರೆ, ಉತ್ಸವ ಇವುಗಳಲ್ಲಿ ಪಾಂಚಾಳರು ಪ್ರಮುಖವಾದವರು. ವಿಶೇಷ ಹಬ್ಬಗಳಾದ ಗಣೇಶ ಚತುರ್ಥಿ, ಚೆಂಗಳವ್ವ, ಸೀಗಿ ಗೌರವ ಹೋಳಿ ಹುಣ್ಣಿಮೆ, ಈ ಸಂದರ್ಭದಲ್ಲಿ ಊರ ಜನರ ಆಚರಣೆಗೆ ಬೇಕಾದ ಮೂರ್ತಿಗಳನ್ನು ಕಟ್ಟಿಗೆ, ಮಣ್ಣು, ಕಾಗದದಲ್ಲಿ ಮಾಡಿಕೊಡುತ್ತಾರೆ. ಇಂತಹ ಪ್ರತಿಯೊಂದು ಕ್ರಿಯೆಗಳ ಹಿಂದೆ ಪಾಂಚಾಳರ ಸಾಂಸ್ಕೃತಿಕ ಅನನ್ಯತೆ ಎದ್ದುಕಾಣುತ್ತದೆ. ಊರ ದೇವಸ್ಥಾನದ ಶಿಖರದ ಮೇಲಿರುವ ಕಳಸಗಳನ್ನು ಮಾಡಿಕೊಡುವುದಲ್ಲದೆ ಪ್ರತಿವರ್ಷ ಜಾತ್ರೆ ಸಂದರ್ಭದಲ್ಲಿ ಅವುಗಳನ್ನು ತಿಕ್ಕಿ ತೊಳೆದುಕೊಡುವುದು ಪಾಂಚಾಳರಾದ ಅಕ್ಕಸಾಲಿಗರ ಕರ್ತವ್ಯ ಆಗಿರುತ್ತದೆ. ಈ ಕರ್ತವ್ಯವು ಪಾಂಚಾಳರನ್ನು ಬಹುದೊಡ್ಡ ಸಾಂಸ್ಕೃತಿಕ ಪ್ರತಿನಿಧಿಯನ್ನಾಗಿ ಮಾಡುತ್ತವೆ. ಇಂತಹ ಪ್ರತಿ ಆಚರಣೆಗಳು ಪಾಂಚಾಳರ ಮನೆಯಿಂದ ಹೊರಟು ಪಾಂಚಾಳರ ಮನೆಯಲ್ಲಿ ಮುಗಿಯುವ ಒಂದು ಸಾಂಸ್ಕೃತಿಕ ಹಕ್ಕನ್ನು ಕೊಡುತ್ತವೆ. ಊರಿನ ನ್ಯಾಯ ಪಂಚಾಯಿತಿಯಲ್ಲಿ ಪ್ರಮುಖ ಸ್ಥಾನಗಳು ಈ ಕಾರಣಕ್ಕಾಗಿ ಅವರಿಗೆ ಲಭ್ಯವಾಗುತ್ತದೆ. ಇಲ್ಲಿ ಅವನೊಬ್ಬ ಜಾತಿ

ಸಮುದಾಯದ ವ್ಯಕ್ತಿಯಾಗಿ ಕಾಣದೆ ಸಮಷ್ಟಿಪ್ರಜ್ಞೆಯನ್ನು ಒಳಗೊಂಡ ಪರಿಪೂರ್ಣ ಮನುಷ್ಯನ್ನಾಗಿ ಕಂಗೊಳಿಸುತ್ತಾನೆ.

ಕೃಷಿ ಸಂಸ್ಕೃತಿಯು ಪಾಂಚಾಳರನ್ನು ಮತ್ತೊಂದು ಭಿನ್ನ ಆಯಾಮದಲ್ಲಿ ತನ್ನನ್ನು ಒಳಗು ಮಾಡಿಕೊಂಡಿದೆ.

ಬಡಿಗೇರ ಮನೆಮುಂದ ಅದೆನೋ ಶಡಗರ
ಬಂಗಾರ ಶೆಟ್ಟಿ ಬೆಳ್ಳಿಯಹಗ್ಗ । ಶ್ಯಾಷಣ್ಣ
ಬಂಡಿ ಬಿಗಿದಾನ ಮನೆತುಂಬಿ?[೯]

ಕರಿಯ ಕಂಬಳಿಯ ಮುರಿದು ಟೊಪ್ಪಿಗೆ ಮಾಡಿ
ಹೊತ್ತಾನ ವಕ್ಕಲಿಯ ಹೆಗಲಿಗೆ । ಕುರಿಗಿದಿಂಡ
ಇಟ್ಯಾನ ತನ್ನ ಮನೆಯ ಮುಂದ.[೧೦]

ಈ ಎರಡು ಹಾಡುಗಳು ಕೃಷಿ ಸಂಸ್ಕೃತಿಯ ವಿಶಿಷ್ಟ ಆಯಾಮವನ್ನು ಹೇಳುತ್ತದೆ. ಜೊತೆಗೆ ಸಮೃದ್ಧಿಯ ಪರಿಕಲ್ಪನೆಯನ್ನು ಮುಂದೂಡುತ್ತದೆ. ಸಕಾಲಕ್ಕೆ ಮಳೆಗಳಾಗಿ ಭೂಮಿ ಹದವಾದರೆ ಕೃಷಿ ಚಟುವಟಿಕೆಗಳು ಶುರುವಾಗುವುದೇ ಕಮ್ಮಾರರ ಕುಲುಮೆ ಮತ್ತು ಬಡಿಗೇರರ ಅಡಿಗೊಟ್ಟಿ ಸಮುದಾಯದ ಬದುಕನ್ನು ಬಡಗಿ–ಕಮ್ಮಾರ ಅನ್ಯನತೆಯನ್ನು ಹೇಳುವ ಅವರಿಲ್ಲದೆ ಯಾವ ಕಾರ್ಯಗಳು ನಡೆಯದು. ಹುಟ್ಟು ಸಾವು ನೋವು ನಲಿವು ಇತ್ಯಾದಿ ಸಂಗತಿಗಳಿಗೆ ಪರಿಹಾರ ಕರ್ತರು ಹುಣ್ಣಿಮೆ ಪಾಂಚಾಳರ ಪ್ರತೀಕ, ಅಡಿಕಟ್ಟಿ, ಬಾಚಿ, ಉಳಿ, ಪಾಂಚಾಳ ಪ್ರತೀಕ ಸೃಷ್ಟಿ ಮತ್ತು ಸಮೃದ್ಧಿ ಬಲವಂತಿಕೆಯ ಪ್ರತೀಕವಾಗಿ ಪೂಜೆಗೊಳುತ್ತವೆ. ಕೃಷಿ ಸಂಸ್ಥೆಯಲ್ಲಿ ಪಾಂಚಾಳ ಸೇವಾವೃತ್ತಿಯಲ್ಲಿ ಆಯಗಾರರಾಗಿ ಪರಿವರ್ತನೆ ಹೊಂದಿದರೂ ಅವರ ಸಾಂಸ್ಕೃತಿಕ ಸ್ಥಾನಮಾನಗಳಲ್ಲಿ ಬದಲಾವಣೆಯಾಗಿಲ್ಲ. ಘನತೆಯ ಬಾಳಿನ ಪ್ರತೀಕವಾಗಿ ಪಾಂಚಾಳರು ಮತ್ತು ಅವರ ಕಸುಬುಗಳು ನೆಲೆಗೊಂಡಿರುವುದನ್ನು ನೋಡುತ್ತೇವೆ.

ಹೀಗೆ ವೇದ ಕಾಲದಿಂದ ಹಿಡಿದು ಸದ್ಯದ ಪರಿಸ್ಥಿತಿಯಲ್ಲಿ ಇವತ್ತಿನವರಿಗೂ ಪಾಂಚಾಳರು ಧಾರ್ಮಿಕವಾಗಿ, ರಾಜ್ಯಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಹಲವು ಸ್ಥಿತ್ಯಂತ್ಯರ ನಡುವೆ ತಮ್ಮ ಸಾಂಸ್ಕೃತಿಕ ಪ್ರಾಧಾನ್ಯತೆಯನ್ನು ಪಡೆದಿದ್ದನ್ನು ಗಮನಿಸಲಾಯಿತ್ತು. ಒಂದು ರಚನಾತ್ಮಕ ಸಾಮಾಜಿಕ ನಿರ್ಮಾಣದ ನಿರ್ಮಿತಿಯಲ್ಲಿ ಪಾಂಚಾಳರು ಮುಂಚೂಣಿಯಲ್ಲಿದ್ದಾರೆ. ಕಲಾ ಜಗತ್ತಿನ, ಶಿಲ್ಪ ಜಗತ್ತಿನ, ಚಿತ್ರ ಮತ್ತು ಸಂಗೀತ ಜಗತ್ತಿನ ನಿರ್ಮಾಣದಲ್ಲಿ ಅವರ ಕ್ರಿಯಾಶೀಲತೆಯನ್ನು ಉಪೇಕ್ಷಿಸಲು ಸಾಧ್ಯವಿಲ್ಲ. ಆದರೆ ಕನ್ನಡದ ಶೈಕ್ಷಣಿಕ ಚಿಂತನೆಗಳು ಇಂತಹ ಬಹುದೊಡ್ಡ ಸಂಸ್ಕೃತಿ ನಿರ್ಮಾತೃಗಳನ್ನು ಗಂಭೀರವಾಗಿ ಪರಿಗಣಿಸದೆ ಇರುವುದು ಕನ್ನಡ ಚಿಂತನೆಯ ಅಪೂರ್ಣತೆಗೆ ಸಾಕ್ಷಿಯಾಗಿದೆ.

**ಅಡಿಟಿಪ್ಪಣಿಗಳು**

೧. ಡಿ.ಎಲ್.ನರಸಿಂಹಾಚಾರ್ಯ(ಸಂ.), ವಡ್ಡಾರಾಧನೆ, ಆರನೆಯ ಮುದ್ರಣ, ಪು.೨೧೪, ೧೯೭೮.

೨. ಡಾ. ವೀರೇಶ ಬಡಿಗೇರ, ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು, ಲೋಚನ, ಜುಲೈ-ಡಿಸೆಂಬರ್, ಪು.೧೦೦, ೨೦೧೭

೩. ಡಾ. ವೀರೇಶ ಬಡಿಗೇರ, ಹಸ್ತಪ್ರತಿ ಸಂಕಥನ, ಪು.೩೪. ೨೦೧೪.

೪. ಡಾ.ಕೆ. ಅನಂತರಾಮು, ಅಜಾತ ನಾಗಲಿಂಗಸ್ವಾಮಿ, ಜೀವನ ಚರಿತ್ರೆ, ಪು.೨೭, ೨೮, ೨೦೧೮.

೫. ಡಾ. ವೀರೇಶ ಬಡಿಗೇರ, ತಿಂಥಿಣಿ ಮೌನೇಶ್ವರರ ವಚನಗಳು, ಪು.೨೩.

೬. ಡಾ. ವೀರೇಶ ಬಡಿಗೇರ, ಬಾಚಿಕಾಯಕದ ಬಸವಯ್ಯ: ವೃತ್ತಿ ಹಾಗೂ ತತ್ತ್ವ ಮೀಮಾಂಸೆ, ಪು..೩೪, ೨೦೦೭.

೭. ಹಾಡಿದವರು: ತುಳಸಾಬಾಯಿ ಬಡಿಗೇರ, ಊರು: ಬೆಣ್ಣೂರು, ವ.೬೫.

೮. ಹಾಡಿದವರು: ತುಳಸಾಬಾಯಿ ಬಡಿಗೇರ, ಊರು: ಬೆಣ್ಣೂರು, ವ.೬೫.

೯. ಡಾ. ವೀರೇಶ ಬಡಿಗೇರ, ಅಡಿಗಲ್ಲು, ಪು.೧೦, ೧೯೯೭.

೧೦. ಅದೇ, ಪು.೧೧, ೧೯೯೭.

## ಅಧ್ಯಾಯ ಆರು

# ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ಪಾಂಚಾಳರ ಪ್ರತಿನಿಧೀಕರಣ ಎಂಬ ಈ ಅಧ್ಯಯನ ಪ್ರಬಂಧವು ಪಾಂಚಾಳ ಸಮುದಾಯದ ಸಂಸ್ಕೃತಿ ವೃತ್ತಿ ಹಿನ್ನೆಲೆಯಲ್ಲಿಯೇ ಬೆಳೆದು ಬಂದಿರುವ ಆಚರಣೆ, ಸಾಮಾಜಿಕ, ಧಾರ್ಮಿಕ ನಡವಳಿಕೆಯಂತಹ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವ ಒಂದು ಪ್ರಯತ್ನವಾಗಿದೆ.

ಪಾಂಚಾಳರು ತಮ್ಮ ಸುತ್ತಲಿನ ಸಮುದಾಯಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿರುತ್ತಾರೆ. ಪಾಂಚಾಳರ ವೃತ್ತಿಯ ಬಗೆಗೆ ಪ್ರಾಚೀನ ಸಾಹಿತ್ಯ ಶಾಸನ, ಐತಿಹ್ಯ, ಪುರಾಣ ಹಾಗೂ ಜಾನಪದದಲ್ಲಿ ಬಂದಂತಹ ಸಂಗತಿಗಳನ್ನು ಗುರುತಿಸಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವರ ಬದುಕಿನ ಮಹತ್ವವನ್ನು ಅರಿಯುವುದಾಗಿದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಇವರು ಸ್ಥಾನಮಾನವನ್ನು ಪಡೆದುಕೊಂಡರು ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಪಾಂಚಾಳರು ಊರಿನ ಯಾವುದೇ ಮುಖ್ಯ ಆಚರಣೆಗಳು ಮತ್ತು ಘಟನೆಗಳಲ್ಲಿ ಪಾಂಚಾಳರ ಉಪಸ್ಥಿತಿ ಇದ್ದೇ ಇರುತ್ತದೆ. ಹಿಂದಿನಿಂದಲೂ ಪಾಂಚಾಳರು ಯಾವುದೇ ಬಗೆಯ ಉನ್ನತ ಸ್ಥಾನಮಾನಗಳನ್ನು ಅನುಭವಿಸುತ್ತ ಬಂದಿದ್ದರೂ ಅವು ಸಮಾಜದ ಜೊತೆಗಿರುವ ನಿಕಟ ಸಂಬಂಧವನ್ನು ತಿಳಿಸುವಂತವಾಗಿದೆ. ತಲೆ ತಲಾಂತರದಿಂದ ವಂಶಪಾರಂಪರಿಕವಾಗಿ ಬಂದ ಈ ಪಾಂಚಾಳರ ವೃತ್ತಿ ಇಂದು ಕಣ್ಮರೆಯಾಗುತ್ತಿದೆ. ಇದಕ್ಕೆ ಆಧುನಿಕ ಶಿಕ್ಷಣ ವ್ಯವಸ್ಥೆ, ಆಡಳಿತ ವ್ಯವಸ್ಥೆ ಮತ್ತು ಆಧುನಿಕ ತಂತ್ರಜ್ಞಾನ ಕಾರಣವಾಗಿರಬಹುದು. ಕಾಲದಿಂದ ಕಾಲಕ್ಕೆ ವೃತ್ತಿಗಳು ಬದಲಾಗಿ ಬದಲಾದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳುವ ಅನಿವಾರ್ಯತೆ ಸಹಜವಾಗಿ ಎದುರಾಗುತ್ತದೆ. ಹಾಗಾಗಿ ಪಾಂಚಾಳರು ಸಹಜವಾಗಿ ಬೇರೆ ವೃತ್ತಿಯನ್ನು ಮಾಡುವ ಅನಿವಾರ್ಯತೆ ಸೃಷ್ಟಿಯಾಗಿದೆ. ಪಾಂಚಾಳರ ಆಯಾ ವೃತ್ತಿ ಸಮುದಾಯದ ಹಿನ್ನೆಲೆ ಮತ್ತು ಅವರ ಒಟ್ಟಾರೆ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಒಂದು ಪ್ರಯತ್ನವಾಗಿದೆ.

ಪಾಂಚಾಳ ಸಮುದಾಯದವರು ಒಂದು ಕುಟುಂಬದಲ್ಲಿ ಕನಿಷ್ಠ ಮೂರು ವೃತ್ತಿಗಳನ್ನು ನಿರ್ವಹಿಸುತ್ತಿರುತ್ತಾರೆ. ಅದರ ಜೊತೆಗೆ ಅನೇಕ ಸಾಮಾಜಿಕ ಹಾಗೂ ಧಾರ್ಮಿಕ ಸ್ಥಾನಮಾನಗಳನ್ನು ಹೊಂದಿರುವುದನ್ನು ಕಾಣಬಹುದು. ಈ ವೃತ್ತಿಗಳನ್ನು ನೋಡಿದರೆ ಅವರ ಪರಿಶ್ರಮದ ಸ್ವರೂಪ

ತಿಳಿದುಬರುತ್ತದೆ. ಈ ಬಗೆಯ ವೃತ್ತಿಯ ಕೌಶಲ್ಯ ತಿಳುವಳಿಕೆಗಳು ಕೇವಲ ವ್ಯಕ್ತಿ ಕೇಂದ್ರಿತವಲಯ ಸಮುದಾಯ ಪಾರಂಪರಿಕವಾಗಿ ಜ್ಞಾನ ಕೌಶಲ್ಯಗಳನ್ನು ದಾಟಿಸಿರುತ್ತಾರೆ. ಇಂತಹ ಸಮಾಜದಲ್ಲಿ ಬಾಳಿ ಬದುಕಿ ಇತರೆ ಸಮುದಾಯದೊಂದಿಗೆ ಬೆರೆತುಕೊಂಡು ಅವರ ಜೀವನೋಪಾಯಕ್ಕೆ ಬೇಕಾದ ಎಲ್ಲಾ ಉಪಕರಣಗಳನ್ನು ತಯಾರಿಸಿಕೊಟ್ಟು ಈ ಸಮುದಾಯದ ಬದುಕು ರೂಪಿಸಿಕೊಂಡಿರುವುದನ್ನು ಸಾಹಿತ್ಯಿಕ, ಮೌಖಿಕ ಹಾಗೂ ಶಾಸನಗಳಲ್ಲಿ ಬಂದಿರುವ ಸಂಗತಿಗಳನ್ನು ಕ್ರೋಢಿಕರಿಸಿಕೊಂಡು ಒಂದೆಡೆ ಸೇರಿಸುವ ಪ್ರಯತ್ನವನ್ನು ಮಾಡುವುದರ ಮೂಲಕ ವಿಶ್ಲೇಷಿಸಲಾಗಿದೆ.

ಕಮ್ಮಾರಿಕೆ ಬಡಗಿತನ ವೃತ್ತಿಗಳು ಅತಿ ಹೆಚ್ಚಾಗಿ ಜನಸಾಮಾನ್ಯರನ್ನೊಳಗೊಂಡ ವೃತ್ತಿ. ಆದರೆ ಕಂಚುಗಾರಿಕೆ, ಅಕ್ಕಸಾಲಿಕೆ ಹಾಗೂ ಶಿಲ್ಪ ಈ ವೃತ್ತಿಗಳು ಸಾಮಾನ್ಯ ಜನರಿಂದ ದೂರವಿರುವ ವೃತ್ತಿಗಳಾಗಿವೆ. ಜನರಿಗಾಗಿಯೇ ಮಾಡಿದರೂ, ನಿರ್ಮಾಣದ ಹಂತದಲ್ಲಿ ಜನರಿಂದ ದೂರ ಉಳಿಯುತ್ತವೆ. ಆದರೆ ಬಡಗಿತನ ಕಮ್ಮಾರಿಕೆ ವೃತ್ತಿಯು ಜನರೊಡನೆ ಬೆರೆತುಕೊಂಡು ಕೆಲಸವನ್ನು ನಿರ್ವಹಿಸಬೇಕಾಗುತ್ತದೆ. ಇಂತಹ ಸಂದರ್ಭಗಳಿದ್ದರು. ಈ ಸಮುದಾಯವು ತಮ್ಮದೇ ಆದ ಆಚರಣೆ, ಸಂಪ್ರದಾಯ, ನಂಬಿಕೆ ಇತ್ಯಾದಿಗಳನ್ನು ರೂಢಿಸಿಕೊಂಡು ಕೆಲಸವನ್ನು ನಿರ್ವಹಿಸಲಾಗಿರುವುದನ್ನು ಸಾಹಿತ್ಯ ಕೃತಿಗಳಲ್ಲಿ ಹೇಗೆ ಕಟ್ಟಿಕೊಡಲಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

ಪಾಂಚಾಳರು ಪ್ರಸ್ತುತ ಸಂದರ್ಭದಲ್ಲಿ ಆಧುನಿಕತೆಯ ಪ್ರಭಾವದಿಂದ ವೃತ್ತಿಗಳ ಸ್ಥಿರತೆಯನ್ನು ಕಾಣಲಾಗುತ್ತಿಲ್ಲ. ಇಂತಹ ಸಂದರ್ಭದಲ್ಲಿ ಪಾಂಚಾಳರ ಜೀವನ ಕ್ರಮದಲ್ಲಿ ಅಡ್ಡಿ ಆತಂಕಗಳಿಂದ ವೃತ್ತಿಯಿಂದ ದೂರ ಉಳಿಯುತ್ತಿದ್ದಾರೆ. ಉದಾಹರಣೆ; ವೃತ್ತಿಗಾಗಿ ವಲಸೆ ಹೋಗಿ ಆಧುನೀಕರಣಕ್ಕೆ ಜಾಗತೀಕರಣಕ್ಕೆ ಮಾರು ಹೋಗುವುದನ್ನು ನೋಡಬಹುದು.

**ಒಟ್ಟಾರೆಯಾಗಿ ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳು**

ಒಟ್ಟು ಕನ್ನಡ ಸಾಹಿತ್ಯ ಸಂಸ್ಕೃತಿಯ ಆಯಾಮಗಳನ್ನು ಸ್ಥೂಲವಾಗಿ ಅಭ್ಯಸಿಸಿದಾಗ ಪಾಂಚಾಳರ ಪ್ರಾತಿನಿಧ್ಯ ಬಹುರೂಪಗಳಲ್ಲಿ ಕಾಣುತ್ತದೆ. ನಾನಿಲ್ಲಿ ಅವರ ವಿಚಾರ ರೂಪಗಳನ್ನು ಪ್ರಮುಖವಾಗಿ ಗುರುತಿಸಲು ಪ್ರಯತ್ನಿಸಿದ್ದೇನೆ.

೧. ಚಂಪು ಷಟ್ಪದಿಯಂತಹ ಶಿಷ್ಟ ಮಹಾಕಾವ್ಯಕಾರರಲ್ಲಿ ಓಜರಾಗಿ, ಸ್ಥಪತಿಗಳಾಗಿ, ಶಿಲ್ಪಿಗಳಾಗಿ, ಟಂಕಸಾಲೆ ಅಧಿಕಾರಿಗಳಾಗಿ, ರೂವಾರಿಗಳಾಗಿ, ಸೇನೆ ಮತ್ತು ಆಡಳಿತದ ವಿವಿಧ ಭಾಗಗಳ ಅಧಿಕಾರಿಗಳಾಗಿ, ಒಂದು ವ್ಯವಸ್ಥಾಪಕ ಹಾಗೂ ಉನ್ನತ ಮಟ್ಟದ ಜೀವನ ನಡೆಸುವ ಸ್ಥಿತಿಗತಿ ಒಂದು ಬಗೆಯದು. ವಚನಸಾಹಿತ್ಯ, ದಾಸಸಾಹಿತ್ಯ ಮತ್ತು ತತ್ವಪದಸಾಹಿತ್ಯದಲ್ಲಿ ದುಡಿಮೆ ಹಾಗೂ ಉತ್ಪಾದಕ ವಿನಿಮಯ ವರ್ಗಗಳಾಗಿ ಕಾಣುತ್ತಾರೆ. ಬೇಕಾದ ವಸ್ತು ಮತ್ತು ಕರಡುಶಿಲ್ಪ ವಸ್ತುಗಳನ್ನು ತಯಾರಿಸಿ ಅದನ್ನು ಮಾರುಕಟ್ಟೆಗಳಲ್ಲಿ ಮಾರುವ, ಕೊಂಡುತರುವ ಸಂಗತಿಗಳು ಕೃಷಿ ಮತ್ತು ಮಾರುಕಟ್ಟೆಯೊಂದಿಗಿನ ಪಾಂಚಾಳರ ಆರ್ಥಿಕ ಸಮೀಕರಣವನ್ನು ತಿಳಿಸುತ್ತವೆ.

೨. ಶಾಸನಗಳಲ್ಲಿ ಕಾಣುವ, ಕಂಚುಗೊತ್ತಳಿ, ಕಮ್ಮಗೊತ್ತಳಿಯಂಥ ಪಾಂಚಾಳ ಸಂಘಗಳ ಉಲ್ಲೇಖ ಪಾಂಚಾಳರು ಸಂಘಟಿತ ಉತ್ಪಾದನ ಮತ್ತು ವಿನಿಮಯ ಸಾಮರ್ಥ್ಯವನ್ನು ಹೇಳುತ್ತವೆ. ಪಾಂಚಾಳರ ಸ್ವತಂತ್ರ ಮತ್ತು ಸ್ವಾವಲಂಬಿ ಆರ್ಥಿಕ ಹಾಗೂ ಸಾಮಾಜಿಕ ಸ್ವರೂಪವನ್ನು ಇಲ್ಲಿ ಕಾಣಬಹುದು.

೩. ಜಾನಪದದ ಸಾಹಿತ್ಯದಂತಹ ಶ್ರಮ ಮತ್ತು ಮೌಖಿಕ ಲೋಕದಲ್ಲಿ ಸಮರ್ಥ ಉತ್ಪಾದನಾ ಹಾಗೂ ಕೌಶಲ್ಯಶೀಲ ಸಮುದಾಯವಾಗಿದ್ದರೂ ಸೇವಾ ವರ್ಗವಾಗಿ ಕಾಣುತ್ತಾರೆ. ಕೃಷಿ ಅವಲಂಬಿತ ಆಯಗಾರ ವರ್ಗವಾಗಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳಲ್ಲಿ ಪರಾವಲಂಬಿಗಳೂ ಅಲ್ಪಸಂಖ್ಯಾತರೂ ಆಗಿ ಕಂಡುಬರುತ್ತಾರೆ. ಆದರೂ ಗ್ರಾಮ ಬದುಕಿನಲ್ಲಿ ಅವರವರ ಬೌದ್ಧಿಕ ಹಾಗೂ ವೃತ್ತಿ ಪರಿಣಿತ ಹಿನ್ನೆಲೆಯಲ್ಲಿ ಗೌರವದ ಸ್ಥಾನ ಹೊಂದಿರುವುದನ್ನು ಕಡೆಗಣಿಸುವಂತಿಲ್ಲ.

೪. ಸುಡು ಗುಣದ ಬೆಂಕಿ ಕಂಬಾರರು, ಕಂಚಗಾರರು ಅಕ್ಕಸಾಲಿಗರಲ್ಲಿ ಉತ್ಪಾದಕ ಶಕ್ತಿಯಾಗಿದೆ. ಹೊರತು ಆರ್ಯರಂತೆ ಅಗ್ನಿ ಆರಾಧನೆಯಾಗಿ ದೈವೀ ರೂಪ ಪಡೆದಿಲ್ಲ. ಅದು ಅವರ ಸಂಗಾತಿ. ಕನ್ನಡ ಕಾವ್ಯಗಳು ಕೂಡ ಕಮ್ಮಾರಿಕೆ, ಕಂಚುಗಾರಿಕೆಯನ್ನು ಆಹಾರ ತಯಾರಿಕೆ ಮತ್ತು ಉತ್ಪಾದಕ ಶಕ್ತಿಯಾಗಿ ಚಿತ್ರಿಸಿರುವುದು ವಿಶೇಷ.

೫. ಕನ್ನಡ ಸಾಹಿತ್ಯದ ಪಂಚಾಳರ ಪ್ರಾತಿನಿಧ್ಯವು ಕೇವಲ ಸಾಮುದಾಯಿಕ ಚಹರೆಯಾಗಿ ಉಳಿದಿಲ್ಲ. ಬದಲಾಗಿ ದುಡಿಮೆ, ಕುಶಲ ಕಸುಬುದಾರಿಕೆ, ಕೌಶಲ್ಯ, ಅದರ ಜೊತೆಗೆ ಅಕ್ಷರ ಹಾಗೂ ಮೌಖಿಕ ರೂಪಗಳು ಅದಕ್ಕೆ ಹೊಂದಿಕೊಂಡಂತಿರುವ ಹಾಡು, ಕುಣಿತ, ಸಂಗೀತ, ರಂಗಭೂಮಿ ವಾದ್ಯಗಾರಿಕೆ, ಹೆಣ್ಣು, ಧರ್ಮ, ಕಲೆ ಮುಂತಾದವನ್ನು ಒಳಗೊಂಡ ಒಂದು ವಿಶಾಲ ಸೃಜನಶೀಲ ಲೋಕವಾಗಿ ಮೂಡಿಬಂದಿದೆ.

೬. ಪಾಂಚಾಳ ಸಮುದಾಯದ ಬಹುಮುಖ್ಯ ಗುಣವೇ ಹೆಚ್ಚು ಸೃಜನಶೀಲತೆಯನ್ನು ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯನ್ನು, ಚಲನಶೀಲತೆಯನ್ನು ಹೊಂದಿರುವುದು ವಿಶಾಲ ಲೋಕದೃಷ್ಟಿ ಈ ಸಮುದಾಯಕ್ಕಿದೆ. ಈ ಲೋಕದೃಷ್ಟಿ ಪ್ರಭುತ್ವ ಮತ್ತು ಜನರ ಆಲೋಚನ ದೃಷ್ಟಿಯನ್ನು ಪ್ರಭಾವಿಸಿದೆ. ದೇವಾಲಯ, ಅರಮನೆ, ಶಾಸ್ತ್ರಗಾರ, ನಾಣ್ಯ ಮುದ್ರಣದಂತಹ ವಾಸ್ತು ತಾಂತ್ರಿಕತೆಯಿಂದ ಹಿಡಿದು ಗ್ರಾಮದೇವತೆಗಳ ನಿರ್ಮಾಣ, ಪೂಜೆ, ಮಂತ್ರ ತಂತ್ರ, ಶಕುನ, ಜ್ಯೋತಿಷ್ಯ ಮುಂತಾದ ತಾಂತ್ರಿಕ ಹಾಗೂ ದಾರ್ಶನಿಕ ಲೋಕದ ನಂಟುಗಳನ್ನು ಹೊಂದಿದ್ದ ವಿಶೇಷ.

೭. ಮೇಲಿನ ಸಂಗತಿಗಳು ಗಂಡುಕೇಂದ್ರಿತ ಚಿಂತನೆಯ ಮಾದರಿಗಳಾದರೆ ಹೆಣ್ಣು ಕೇಂದ್ರಿತ ಚಿಂತನೆಯ ಬಗೆಗಳು. ಮತ್ತೊಂದು ರೂಪದವೂ ನೆಲ, ನೀರು, ಸಸ್ಯ, ಮನುಷ್ಯ,

ಲೋಕದೊಂದಿಗಿದ ಸಾವಯವ ಸಂಬಂಧ ಇಲ್ಲಿ ಕಾಣುತ್ತದೆ. ಗುಳ್ಳವ್ವ, ಗೌರಿ, ಸೀಗಿ, ಗಣಪ, ಚಂಗಳವ್ವ ಮುಂತಾದ ಹಸಿ ಮಣ್ಣಿನ ಮೂರ್ತಿಗಳ ತಯಾರಿಸುವ ಕೆಲಸ ಹೆಚ್ಚಾಗಿ ಪಾಂಚಾಳ ಹೆಣ್ಣು ಮಕ್ಕಳದು. ಇವೆಲ್ಲವೂ ಗುಡಿಯ ಹೊರಗಿನ ಆರಾಧನೆಗಳಾಗಿದ್ದರೂ ನೆಲ, ನೀರು, ಸಸ್ಯ, ಲೋಕದೊಂದಿಗೆ ನಿಕಟ ಸಂಬಂಧ ಹೊಂದಿದೆ. ಹಬ್ಬದ ಅಗತ್ಯಕ್ಕೆ ಹುಟ್ಟಿ ವಿಸರ್ಜನೆಗೊಳ್ಳುವ ಈ ಮೂರ್ತಿಗಳು ಹೆಣ್ಣಿನ ಆಚರಣಾತ್ಮಕ ಹಾಗೂ ಭಾಗಶಃ ಆರ್ಥಿಕ ಸ್ವಾವಲಂಬನೆಯನ್ನು ಪೈರು, ನಿಸರ್ಗ ಮತ್ತು ಆಹಾರ ಕ್ರಮಕ್ಕೆ ಇರುವ ಜೈವಿಕ ಸ್ವರೂಪವನ್ನು ಹೇಳುತ್ತವೆ. ಪಾಂಚಾಳರಲ್ಲಿ ಹೆಣ್ಣಿನದು ಯಾವತ್ತು ಪೋಷಕ ಸ್ವರೂಪ ಹೊರತು ಶೋಷಿತ ಸ್ವರೂಪ ಅಲ್ಲ ಎನ್ನುವುದನ್ನು ಈ ಸಂಗತಿಗಳು ಹರವುತ್ತವೆ.

೮. ಇದಕ್ಕೆ ಪೂರಕ ಎನ್ನುವಂತೆ ಪಾಂಚಾಳರು ತಮ್ಮ ಶ್ರಮ ಮತ್ತು ಕರ್ಮಜ್ಞಾನದ ಹಿಂದೆ ಕಾಳಿಯ ಕೃಪೆಯಿರುವುದನ್ನು ನಿದರ್ಶನನ್ನಾಗಿ ನೀಡಬಹುದು. ಸಮಾಜೋಪಯೋಗಿಯಾದ ಉತ್ಪಾದಿಸುವ ಸರಕು ಮತ್ತು ಸೇವಾ ಪ್ರಕ್ರಿಯೆಯಲ್ಲಿ ಹುಟ್ಟುವ ಜ್ಞಾನಕ್ಕೆ ಪಾಂಚಾಳರಲ್ಲಿ ದೇವಿ ಸ್ವರೂಪವಿದೆ. ಅದೇ ಕಾಳೀರೂಪ, ವಿದ್ಯೆ, ಜ್ಞಾನ, ಅಥವಾ ಕೌಶಲ್ಯ ಅನ್ನುವುದು ಇಂಥಲ್ಲಿ ಕೇವಲ ಸೇವೆಯಾಗದೆ ವೃತ್ತಿ ಮತ್ತು ಅದರ ಪ್ರಾಯೋಗಿಕ ಅನುಭವವನ್ನು ದೈವದ ಜೊತೆಗೆ ವಕ್ರೀಭವಿಸಲಾಗುತ್ತದೆ. ಪಾಂಚಾಳರ ಯಾವ ಕೆಲಸಗಳು ಸ್ತ್ರೀಯರ ನೆರವಿಲ್ಲದ ಪೂರ್ಣವಾಗುವುದಿಲ್ಲ. ಪಾಂಚಾಳರ ವರ್ಗಗಳು ದೇಹ ಶ್ರಮವಿಲ್ಲದೆ ಸರಸ್ವತಿಯಲ್ಲಿ ವಿದ್ಯೆಯನ್ನು ಕಾಣದೆ ದೈಹಿಕ ಮತ್ತು ಬೌದ್ಧಿಕ ಶ್ರಮದ ಜೊತೆಗೆ ಅಗತ್ತುಳ್ಳ ಕಾಳಿಯಲ್ಲಿ ಕಾಣುತ್ತಾರೆ.

೯. ವೃತ್ತಿ ಸಂಸ್ಕೃತಿಯ ಭಾಗವಾಗಿ ಕಾಳಮ್ಮನಿಗೆ ನಡೆದುಕೊಳ್ಳುವಾಗ ಪ್ರಕಟವಾಗುವ ಸಾಂಸ್ಕೃತಿಕ ಅಶಿತ್ವ ಬೇರೆ ಊರೊಟ್ಟಿನ ಕಡ್ಡಾಯ ಸೇವೆಯ ಭಾಗವಾಗಿ ದುಡಿಯುವಾಗ ಪ್ರಕಟವಾಗುವ ಬಾಬುದಾರಿಕೆ ಬೇರೆ ಬಾಬುದಾರಿಕೆ ಹಕ್ಕಿನಲ್ಲಿ ಸಮುದಾಯದ ಅಸ್ಮಿತೆಯ ಊರಿಗೆ ಸಲ್ಲಿಸಬೇಕಾದ ಹೊಣೆಗಾರಿಕೆಯ ಇರುತ್ತದೆ. ಈ ಎರಡು ಆಯಾಮಗಳು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಬಿಂಬಿತವಾದ ನೆಲೆಗಳನ್ನು ಶೋಧಿಸಲಾಗಿದೆ.

೧೦. ಒಟ್ಟು ಕನ್ನಡ ಪಠ್ಯ ಮತ್ತು ಮೌಖಿಕ ಆಕರಗಳಲ್ಲಿ ಪಾಂಚಾಳ ಸಮುದಾಯವು ಉಪಕರಣ ಸಂಸ್ಕೃತಿಯಾಗಿ ಕಚ್ಚಾ ಸಾಮಗ್ರಿಗಳ ಜೊತೆಗೆ ಸಂಬಂಧ ಪಡೆದ ಮತ್ತು ಕಚ್ಚಾ ಸಾಮಗ್ರಿಗಳನ್ನು ಅಗತ್ಯ ವಸ್ತುಗಳಾಗಿ ಪರಿವರ್ತಿಸುವ ಸೃಜನಶೀಲ ಹಾಗೂ ಪರಿಣಿತ ಸಮುದಾಯವನ್ನಾಗಿ ಚಿತ್ರಿಸಲಾಗಿದೆ. ಬೇಸಾಯವು ನೆಲ, ನೀರುಗಳ ಜೊತೆ ಹೇಗೆ ಸಂಬಂಧ ಹೊಂದಿದೆಯೋ, ಪಾಂಚಾಳ ವೃತ್ತಿಗರೂ ಹೀಗೆ ಉಪಕರಣ ಸಂಸ್ಕೃತಿಯೊಂದಿಗೆ ಪರಸ್ಪರ ಪೂರಕ ಸಂಬಂಧ ಹೊಂದಿದ್ದಾರೆ. ಅಂದರೆ ವಿಜ್ಞಾನ ಮತ್ತು ತಂತ್ರಜ್ಞಾನ ವಾಸ್ತು, ಶಿಲ್ಪ ಹರಿಕಾರರನ್ನಾಗಿ ಪರಿಭಾವಿಸಲಾಗಿದೆ.

೧೧. ಋಗ್ವೇದದ ಹತ್ತನೆಯ ಮಂಡಲದಲ್ಲಿ ಶಿಲ್ಪವನ್ನು ತಂತ್ರಜ್ಞಾನವೆಂದು ವರ್ಣಿಸಲಾಗಿದೆ. ತಿಂಥಿಣಿ ಮೌನೇಶ್ವರರು 'ಬಡಿಗ ಕಮ್ಮಾರರು ಸೃಷ್ಟಿಗಧಿಕರ್ತರು ಬಡಿದು ಬತ್ತೀಸ ಆಯುಧವ ಮಾಡಿ ಕೊಡುವರು ಬಸವಣ್ಣ' ಎನ್ನುವಲ್ಲಿ ಉಪಕರಣ ಸಂಸ್ಕೃತಿಯ ಖಚಿತ ಬೆಳವಣಿಗೆಗೆ ಪಾಂಚಾಳರು ಕಾರಣ ಎನ್ನುವುದನ್ನು ಕಾಣಬಹುದು. ಆ ಮೂಲಕ ಉಪಕರಣ ಮತ್ತು ಉದ್ಯೋಗ ಸೃಷ್ಟಿಯ ಮೂಲ ಪುರುಷರು ಪಾಂಚಾಳರು ಎಂಬುದನ್ನು ತಿಳಿಯಬಹುದು.

೧೨. ವಿಶ್ವಕರ್ಮ ಪುರಾಣ ಸಂಸ್ಕೃತಿಯಲ್ಲಿ ಸೃಷ್ಟಿ, ಸ್ಥಿತಿ, ಚಲನೆ, ಲಯಗಳಿಗೆ ವಿಶ್ವಕರ್ಮನೇ ಕಾರಣ ಸಕಲ ದೇವಾದೀದೇವತೆಗಳ ಸೃಷ್ಟಿ ಮತ್ತು ಹೊಣೆಗಾರಿಕೆಯನ್ನು ವಹಿಸಿದವನು ವಿಶ್ವಕರ್ಮನೇ ಆಗಿದ್ದಾನೆ. ಕಬ್ಬಿಣ, ಕಟ್ಟಿಗೆ, ಕಂಚು, ಚಿನ್ನ, ಬೆಳ್ಳಿ, ಕಲ್ಲು ಹೀಗೆ ಪಂಚ ವೃತ್ತಿಯ ಹರಿಕಾರರಾದ ಕಮ್ಮಾರ, ಬಡಿಗ, ಕಂಚುಗಾರ, ಪತ್ತಾರ ಹಾಗೂ ಶಿಲ್ಪಿಗಳು ಕೇವಲ ಜಾತಿ ಸಮುದಾಯವಾಗಿ, ಸೇವಾ ವರ್ಗಗಳಾಗಿ, ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಪ್ರಾತಿನಿಧ್ಯವನ್ನು ಪಡೆಯದೇ ಒಂದು ಬಹುದೊಡ್ಡ ಸ್ವಾವಲಂಬಿ ನಾಗರಿಕ ಸಮಾಜದ ನಿರ್ಮಾಣ ಹಾಗೂ ಅದರ ಚಲನೆಯ ಹೊಣೆಗಾರಿಕೆಯನ್ನು ವಹಿಸಿಕೊಂಡ ಒಂದು ಜವಾಬ್ದಾರಿ ಸಮುದಾಯವಾಗಿ ಪ್ರಾತಿನಿಧ್ಯ ಪಡೆದಿದ್ದ ಸಂಗತಿಗಳನ್ನು ನನ್ನ ಈ ಅಧ್ಯಯನದಲ್ಲಿ ಖಚಿತವಾಗಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ.

# ಅನುಬಂಧ–೧
# ವೃತ್ತಿ ಪದಕೋಶಗಳು

## ಕಮ್ಮಾರ ವೃತ್ತಿ ಪದಕೋಶ

ಅಡಿಗಲ್ಲು = ಕಮ್ಮಾರರು ಲೋಹದ ವಸ್ತುಗಳನ್ನು ಇಟ್ಟು ಬಡಿಯಲು ಆಸರೆಯಾಗಿ ಉಪಯೋಗಿಸುವ ಕಬ್ಬಿಣದ ಗಟ್ಟಿ

ಅರ = ಕಬ್ಬಿಣದ ವಸ್ತುಗಳನ್ನು ಹರಿತ ಮಾಡಿಕೊಳ್ಳುವ ಉಪಕರಣ

ಇಕ್ಕಳ = ಕಾದ ಕಬ್ಬಿಣ ಹಿಡಿದುಕೊಳ್ಳಲು ಬೇಕಾದ ಉಪಕರಣ

ಕಾನಾಸ್ = ಕುಡುಗೋಲುಗಳನ್ನು ತಿಕ್ಕಿ ಚೂಪು ಮಾಡಲು ಬೇಕಾದ ಉಪಕರಣ

ಕುಲುಮೆ = ಕಮ್ಮಾರರು ಕಬ್ಬಿಣ ಕೆಲಸ ಮಾಡಲು ಬೆಂಕಿ ಮಾಡಿಕೊಳ್ಳುವ ಒಲೆ

ಕೈವಾರ = ಬಂಡಿ ವಸ್ತುಗಳ ಅಳತೆಗಾಗಿ ಕಮ್ಮಾರರು ಬಳಸುವ ಉಪಕರಣ

ಚಾಣ = ಕಬ್ಬಿಣ ಕತ್ತರಿಸಲು ಬೇಕಾದ ಉಪಕರಣ

ಡೋಣಿ = ಕಾದ ಕಬ್ಬಿಣ ಆರಿಸಲು ನೀರು ತುಂಬಿಕೊಳ್ಳುವ ವಸ್ತು

ತಂಡಸ = ಕುಲುಮೆಗೆ ಬೆಂಕಿ ತಳ್ಳುವ ಇಕ್ಕಳದಂತಹ ಉಪಕರಣ

ತಿದಿ = ಕುಲುಮೆಗೆ ಗಾಳಿ ಒದಗಿಸುವ ಚರ್ಮದ ಯಂತ್ರ

ನಾಯಿ = ಬಂಡಿಯ ಹಳಿ ಮಿಳಿದು ಕೂರಿಸಲು ಬೇಕಾದ ಉಪಕರಣ

ಬಾರ = ಕುಲುಮೆಗೆ ಗಾಳಿ ಒದಗಿಸುವ ಯಂತ್ರ

ಬೆಚ್ನೆ = ಬಂಡಿ ಇಸುರ್ ಮಾಡಲು ಬಳಸುವ ಉಪಕರಣ

ಮಚ್ಚಾಲಗಿ = ಅಳತೆಗಾಗಿ ಬಳಸುವ ಉಪಕರಣ

ರಿಗ್ಗಿ = ಕಬ್ಬಿಣ ಮಣಿಸಲು ಹಿಡಿಯಲು ಬೇಕಾದ ವಸ್ತು

ಸುತ್ತಿಗೆ = ಕಬ್ಬಿಣವನ್ನು ಬಡಿಯಲು ಬೇಕಾದ ಉಪಕರಣ

**ಬಡಗಿ ವೃತ್ತಿಪದಕೋಶ**

ಅಡಿಗೊಟ್ಟಿ /ಅಡಿಬಟ್ಟಿ = ಬಡಿಗೇರು ಉಪಕರಣಗಳನ್ನು ಮಾಡುವಾಗ ಈ ಅಡಿಬಡ್ಡಿ ಕೆಳಗಡೆಗೆ ಆಧಾರವಾಗಿಡುವ ಕಟ್ಟಿಗೆಯ ತುಂಡು.

ಅಡಿಕಟ್ಟಿ = ಅಳತೆಯ ಉಪಕರಣ

ಅರ = ಗರಗಸದ ಹಲ್ಲು ಹರಿತಗೊಳ್ಳಿಸಿಕೊಳ್ಳಲು ಬೇಕಾದ ಉಪಕರಣ

ಆಗ್ರ = ಮರದಲ್ಲಿ ರಂಧ್ರಮಾಡಲು ಬೇಕಾದ ಉಪಕರಣ

ಈಚ್ಚಕಟ್ಟಿ = ಮರದ ಮೇಲೆ ಅಳತೆಯ ಗೆರೆ ಗುರುತು ಮಾಡಿಕೊಳ್ಳುವ ಉಪಕರಣ

ಉಳಿ = ಮರದಲ್ಲಿ, ವಿನ್ಯಾಸ ಮಾಡಲು, ಬೇಕಾದ ಆಕಾರಕ್ಕೆ ಕತ್ತರಿಸಲು ರಂಧ್ರ ಮಾಡಲು ಬೇಕಾದ ಉಪಕರಣ

ಉಗುರುಳಿ = ಹೆಬ್ಬೆರಳಿನ ಆಕಾರದ ಉಳಿ

ಕತ್ತೂಸಿ = ಮರದಲ್ಲಿ ಮೊಳೆ ಹೊಡೆಯಲು ರಂಧ್ರ ಮಾಡಿಕೊಳ್ಳಲು ಉಳಿ ರೀತಿ ಇರುವ ಉಪಕರಣ

ಕರಸಾಣಿ = ಉಪಕರಣ ಹರಿತ ಮಾಡಿಕೊಳ್ಳಲು ಬೇಕಾದ ಕಲ್ಲು

ಕೈವಾರ = ಮರದಲ್ಲಿ ಕೆಲಸ ಮಾಡುವಾಗ ವರ್ತುಲಾಕಾರದ ಅಳತೆ ವಿನ್ಯಾಸಗಳನ್ನು ಮಾಡಿಕೊಳ್ಳಲು ಬೇಕಾದ ಉಪಕರಣ

ಕೊಡ್ತಿ = ಮರದ ಸುತ್ತಿಗೆ, ಕಟ್ಟಿಗೆಯ ಉಪಕರಣ ಬಡಗಿ ಕೆಲಸ ಮಾಡುವಾಗ ಉಳಿಯ ಮೇಲೆ ಏಟು ಹಾಕುವ ಉಪಕರಣ

ಕೊಡ್ಲಿ = ಮರ ಸೀಳಿಕೊಳ್ಳಲು ಬೇಕಾದ ಉಪಕರಣ

ಗರಗಸ = ಮರ ಕೊಯ್ಯಲು ಬೇಕಾದ ಹಲ್ಲುಗಳಿರುವ ಉಪಕರಣ

| | | |
|---|---|---|
| ಕೈಗರಗಸ | = | ಒಬ್ಬ ವ್ಯಕ್ತಿಯ ಬಳಸಬಹುದಾದ ಸಣ್ಣ ಗರಗಸ |
| ಗಿರ್ಮಿಟ್ಟು | = | ಮರದಲ್ಲಿ ರಂಧ್ರ ಕೊರೆಯಲು ಬೇಕಾದ ಉಪಕರಣ |
| ಗುನಿ | = | ಮರದ ಮೇಲೆ ಗೆರೆ ಹಾಕಿಕೊಂಡು ಗುರುತು ಮಾಡಿಕೊಳ್ಳಲು ಬೇಕಾದ ವಸ್ತು |
| ಗೋಲಗೊಡ್ಡ | = | ಮರದ ಮೇಲೆ ನಕ್ಷೆ ಹಾಕಿಕೊಳ್ಳಲು ಬೇಕಾದ ಸಾಧನ |
| ಚಾಣ | = | ಚಿಕ್ಕ ಉಳಿ |
| ಜಂತ್ರ | = | ವಿನ್ಯಾಸದ ಕೆಲಸಗಳನ್ನು ಮಾಡಲು ಬಳಸುವ ಉಪಕರಣ |
| ಟೇಪು | = | ಮರ ಅಳತೆಯ ಸಾಧನ |
| ಟೋಸಿಗೆ | = | ಕವಲಾದ ಕಟ್ಟಿಗೆ ಗಾಡಿ ಚಕ್ರದ ಹಲ್ಲುಗಳನ್ನು ಕೂರಿಸಲು ಬೇಕಾದ ಸಾಧನ |
| ಡ್ರಿಲ್ | = | ಮರಕ್ಕೆ ರಂಧ್ರ ಮಾಡುವ ಯಂತ್ರ |
| ಪೆನ್ಸಿಲ್ | = | ಗುರುತು ಹಾಕಿಕೊಳ್ಳುವ ಸೀಸದ ಕಡ್ಡಿ |
| ಬಾಚಿ | = | ಮರದ ತುಂಡು ಕೆತ್ತುವ ಉಪಕರಣ |
| ಮಟ್ಟಲಿಗೆ | = | ಮರ ಮೂಲೆ ಅಳತೆಯ ಉಪಕರಣ |
| ಮೂಲೆಮಟ್ಟ | = | ಮಟ್ಟಲಿಗೆ ಅಳತೆಯ ಉಪಕರಣ |
| ಮಸಗಲ್ಲು | = | ಉಪಕರಣಗಳನ್ನು ಹರಿತ ಮಾಡಿಕೊಳ್ಳಲು ಬೇಕಾದ ಕಲ್ಲು |
| ಮೊಳೆ | = | ಕಟ್ಟಿಗೆ ಕೂಡಿಸಲು ಬೇಕಾದ ಮೊಳೆ |
| ರಿಗ್ಗಿ | = | ಕಬ್ಬಿಣದ ರಾಡು, ಚಾಕು, ಮರಕೆಲಸದಲ್ಲಿ ಬೇಕಾಗುತ್ತದೆ |
| ಸುತ್ತಿಗೆ | = | ಮರದ ಮೇಲೆ ಉಳಿಯಿಂದ ಕೆಲಸ ಮಾಡುವಾಗ ಉಳಿಗೆ ಮೇಲಿನಿಂದ ಬಡಿಯಲು ಬೇಕಾದ ಉಪಕರಣ |

| | | |
|---|---|---|
| ಸ್ಕ್ರೂಡ್ರೈವರ್ | = | ಮೊಳೆಗಳನ್ನು ಹಾಕಿ ತಿರುವಲು ಬೇಕಾದ ಉಪಕರಣ |
| ಹಿಡಿಸ್ಯಾಳ | = | ಸಣ್ಣ, ಸಣ್ಣ ರಂಧ್ರ ಮಾಡಲು ಬೇಕಾದ ಉಪಕರಣ |

**ಅಕ್ಕಸಾಲಿ ವೃತ್ತಿ ಪದಕೋಶ**

| | | |
|---|---|---|
| ಅಗ್ಗಿಷ್ಟಿಕೆ | = | ಬಂಗಾರ ಕಾಯಿಸುವ ಒಲೆ |
| ಅರ | = | ಆಭರಣಗಳನ್ನು ಉಜ್ಜಿ ನಯಗೊಳಿಸುವ ಉಪಕರಣ |
| ಇಕ್ಕಳ | = | ಕಾಯ್ದ ಆಭರಣ ಎತ್ತಿಕೊಳ್ಳಲು ಹಿಡಿದುಕೊಳ್ಳಲು ಬೇಕಾದ ಉಪಕರಣ |
| ಕಂಚಿನ್ನಕಟ್ಟಿ | = | ತಾಳಿಯಲ್ಲಿ ತಗ್ಗು ಮಾಡಲು ಬೇಕಾದ ಉಪಕರಣ |
| ಕಾಟ | = | ಬೆಳ್ಳಿ ಬಂಗಾರ ತೂಕ ಮಾಡುವುದು |
| ಕೊಕ್ಕಡ | = | ದೀಪ ಬೆಸುಗೆ ಹಾಕುವಾಗ ಕಾಯಿಸಲು ಬೇಕಾಗುತ್ತದೆ(ಚಿಮ್ಲಿ) |
| ಕೊಳವೆ | = | ಬಂಗಾರ ಕಾಯಿಸುವ ಅಗ್ಗಿಷ್ಟಿಕೆಗೆ ಗಾಳಿ ಊದಲು ಬೇಕಾದ ಉಪಕರಣ |
| ಗರಗಸ | = | ಲೋಹ ಕೊಯ್ಯುವ ಉಪಕರಣ(ರಂಪ) |
| ಗಾಳಿಚಕ್ರ | = | ಅಗ್ಗಿಷ್ಟಿಕೆಗೆ ಗಾಳಿ ಒದಗಿಸುವ ಯಂತ್ರ (ಪಂಕ) |
| ಗುಂಚಿ | = | ಗುಲಗಂಚಿಯ ಬೀಜ ಬಂಗಾರ ಅಳೆಯಲು ತೂಕ ಮಾಡಲು ಬಳಸುವ ವಸ್ತು |
| ತಂತಿ | = | ಆಭರಣಗಳ ಸುತ್ತಳತೆ ಅಳೆಯಲು ಬೇಕಾಗುವ ಲೋಹದ ತಂತಿ |
| ದೋಣಿ | = | ಲೋಹ ಕರಗಿಸಿ ಸುರಿಯಲು ಹಿಂದೆ ಬಳಸುತ್ತಿದ್ದ ಬಳಪದ ಕಲ್ಲಿನ ಪಾತ್ರೆ |
| ಮಿಂಚಿಕಲ್ | = | ಲೋಹಕ್ಕೆ ಹೊಳಪು ಬರಿಸಲು ಬೇಕಾದ ವಸ್ತು |
| ರವಕಡ್ಡಿ | = | ಗುಂಡುಗಳನ್ನು ಪೋಣಿಸುವ ಸಣ್ಣ ತಂತಿಯ ಕಡ್ಡಿ |
| ಸುತ್ತಿಗೆ | = | ಆಭರಣಗಳ ತಯಾರಿಕೆಯಲ್ಲಿ ಬಡಿಯಲು ಬಗ್ಗಿಸಲು ಬೇಕಾದ ಉಪಕರಣ |
| ಹಾರಿ | = | ಉಂಗುರ ತಯಾರಿಕೆಯಲ್ಲಿ ಬಳಸುವ ಉಪಕರಣ |

## ಶಿಲ್ಪಿ ವೃತ್ತಿ ಪದಕೋಶ

ಅಗ್ಗಿಷ್ಟಿಕೆ = ಉಳಿ ಮತ್ತಿತ್ತರ ಉಪಕರಣಗಳು ಕಾಯಿಸಿ ಹದ ಮಾಡಿಕೊಳ್ಳಲು ಬೇಕಾದ ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಒಲೆ

ಅರ = ಶಿಲ್ಪದ ಒರಟಾದ ಭಾಗಗಳನ್ನು ಉಜ್ಜಿ ನಯಗೊಳಿಸಲು ಬೇಕಾದ ವಸ್ತು

ದುಂಡರ = ಮೂರ್ತಿಯ ಸಂದು ಗೊಂದುಗಳಲ್ಲಿ ಉಜ್ಜಿ ನಯಗೊಳಿಸಲು ಬೇಕಾದ ಅರ

ಪಟ್ಟ ಅರ = ಮೂರ್ತಿಯ ಮೇಲ್ಭಾಗದ ಅಂಗಾಗಗಳನ್ನು ಹಸನುಗೊಳಿಸುವ ಸಾಧನ

ಉಳಿ = ಕಲ್ಲಿನ ಕೆಲಸದಲ್ಲಿ ಕೆತ್ತಲು ರೂಪಕೊಡಲು ಬಳಸುವ ವಸ್ತು

ಉಪ್ಪಿನ ಕಾಗದ = ಉಸುಕಿನ ಕಾಗದ ಶಿಲಾಮೂರ್ತಿಯ ಒರಟು ಭಾಗಗಳನ್ನು ಉಜ್ಜಿ ನಯಗೊಳಿಸಲು ಬೇಕಾದ ವಸ್ತು

ಕಡ್ಡಿ = ಕಲ್ಲಿನ ಅಳತೆಗಾಗಿ ಬಳಸುವ ಕಡ್ಡಿ

ಕಲ್ಲು = ಮೂರ್ತಿಗಳನ್ನು ಉಜ್ಜಿ ನಯಗೊಳಿಸಲು ಹಿಂದೆ ಬಳಸುತ್ತಿದ್ದ ಸಾಧನ

ಕುಂಚ = ಮೂರ್ತಿಗೆ ಬಣ್ಣ ಬಳಿಯಲು ಬಳಸುವ ಕುಂಚ

ಕೈವಾರ = ವರ್ತುಲಾಕಾರದ ಅಳತೆಗೆ ಬೇಕಾದ ಉಪಕರಣ

ಕೊಡ್ತಿ = ಹುಣಿಸೆಮರದ ಕೆಚ್ಚಿನ ಭಾಗದಿಂದ ತಯಾರಿಸಿದ ಮರದ ಸುತ್ತಿಗೆ

ಗನ್ನು = ದೊಡ್ಡ ಕಲ್ಲನ್ನು ಸೀಳಲು ಬಳಸುವ ದೊಡ್ಡ ಸುತ್ತಿಗೆ

ಗೆರೆಪಟ್ಟಿ = ಶಿಲೆಯ ಮೇಲೆ ಗೆರೆ ಹಾಕಿಕೊಳ್ಳಲು ಬಳಸುವ ಪಟ್ಟಿ

ಚಾಣ = ಕಲ್ಲನ್ನು ನಯವಾಗಿ ಕೆತ್ತಲು ಬಳಸುವ ಉಪಕರಣ

ಚೇರ್ಣಿ = ಕಲ್ಲಿನಲ್ಲಿ ವಿನ್ಯಾಸ ಆಲಂಕಾರಿಕ ಕೆತ್ತನೆಗೆ ಬೇಕಾದ ವಸ್ತು

ಡ್ರಿಲ್ = ತೂತು ಕೊರೆಯುವ ಯಂತ್ರ

ತಾಳೆಗರಿ = ಪೂರ್ವದಲ್ಲಿ ತಾಳೆಗರಿಯನ್ನು ೧೨೦ ಭಾಗ ಮಾಡಿ ಅಳತೆಗಾಗಿ ಉಪಯೋಗಿಸುತ್ತಿದ್ದರು.

ತೂಕದ ಗುಂಡು = ಕಲ್ಲಿನ ಮಟ್ಟ ನೋಡಲು ಬಳಸುವ ಉಪಕರಣ

ದಾರ = ಅಳತೆಗಾಗಿ ಬಳಸುವ ವಸ್ತು

ಪಟ್ಟೆ = ಗರಗಸದ ಆಕಾರದಲ್ಲಿದ್ದು ಕಲ್ಲಿನ ಮೇಲೆ ಗೆರೆ ಹಾಕಲು ಬಳಕೆಯಾಗುವ ಉಪಕರಣ

ಪ್ಲೇನರ್ = ಮೂರ್ತಿಯನ್ನು ನುಣುಪುಗೊಳಿಸಲು ಬೇಕಾದ ವಸ್ತು

ಬೋರಿಂಗ್ ಟೂಲ್ = ಕಲ್ಲು ಸೀಳಲು ಬೇಕಾದ ಉಪಕರಣ

ರಸಮಟ್ಟ = ಕಲ್ಲಿನ ಮಟ್ಟ ನೋಡಲು ಬಳಸುವ ಉಪಕರಣ

ಲೆವೆಲ್ ಬಾಟಲಿ = ಕಲ್ಲಿನ ಸಮತಟ್ಟನ್ನು ಅಳೆಯುವ ಆಧುನಿಕ ಉಪಕರಣ

ಸಾಣಿ = ತಿರುಗುಚಕ್ರ ಮೊಂಡಾದ ಆಯುಧಗಳನ್ನು ಹರಿತಗೊಳಿಸಲು ಬೇಕಾದ ಉಪಕರಣ

ಸುತ್ತಿಗೆ = ಮೂರ್ತಿ ತಯಾರಿಸುವಾಗ ಚಾನ, ಮೊಳೆ, ಉಳಿಗಳನ್ನು ಕಲ್ಲಿನ ಮೇಲೆ ಬಡಿಯಲು ಬಳಸುವ ಉಪಕರಣ

**ಕಂಚುಗಾರಿಕೆ ವೃತ್ತಿ ಪದಕೋಶ**

ಅಡಿಗಲ್ಲು = ಕಂಚುಗಾರರು ಕೆಲಸ ಮಾಡುವಾಗ ಬಡಿಯಲು ಚಚ್ಚಲು ಉಪಯೋಗವಾಗುವಂತೆ ನೆಲದಲ್ಲಿ ಇರುವ ದಪ್ಪ ಕಬ್ಬಿಣದ ವಸ್ತು

ಅರ = ವಸ್ತುವಿನ ವಿವಿಧ ಭಾಗಗಳನ್ನು ಉಜ್ಜಿ ನಯಗೊಳಿಸಲು ಸಣ್ಣ ಸಣ್ಣ ಮುಳ್ಳುಗಳನ್ನು ಹೊಂದಿರುವ ಉಕ್ಕಿನ ಉಪಕರಣ

ಇಂಚ್‌ಪಟ್ಟಿ = ವಸ್ತು, ವಿಗ್ರಹದ ಅಳತೆಗಾಗಿ ಬಳಸುವ ಉಪಕರಣ

ಕಣ್ಣಾಲಕೆ = ಲೋಹಕ್ಕೆ ಹೊಳಪು ಬರುವಂತೆ ಉಜ್ಜಲು ಬಳಸುವ ವಸ್ತು

ಕತ್ರಿ = ಲೋಹದ ತಗಡು ಕತ್ತರಿಸಿಕೊಳ್ಳಲು ಬಳಸುವ ವಸ್ತು

| | | |
|---|---|---|
| ಕೀಚುಳಿ | = | ಲೋಹದ ಕೆಲಸದಲ್ಲಿ, ಯಾವುದೇ ವಸ್ತು ವಿಗ್ರಹ ಕೆತ್ತಲು, ಕೆರೆಯಲು ಬೇಕಾದ ಉಪಕರಣ |
| ಕೈವಾರ | = | ಲೋಹದ ಕೆಲಸದಲ್ಲಿ, ಅಳತೆ, ಆಕಾರ, ವಿನ್ಯಾಸಕ್ಕಾಗಿ ವರ್ತುಲ ಹಾಕಿಕೊಳ್ಳಲು ಬೇಕಾದ ಉಪಕರಣ |
| ಕೊಡ್ತಿ | = | ಮೇಣ ಕುಟ್ಟಲು ಬೇಕಾದ ಮರದ ವಸ್ತು |
| ಕೋವೆ | = | ಲೋಹ ಕರಗಿಸುವ ಪಾತ್ರೆ |
| ಗರಗಸ | = | ಲೋಹ ಕುಯ್ಯಲು ಬೇಕಾದ ಉಪಕರಣ |
| ಚಾಣ | = | ಕಂಚಿನ ಕೆಲಸದಲ್ಲಿ ಲೋಹ ತಗಡು ಕತ್ತರಿಸಲು, ಕಚ್ಚು(ಗುರುತು) ಹಾಕಿಕೊಳ್ಳಲು ಬೇಕಾದ ಉಪಕರಣ |
| ತಂತಿ | = | ತಾಮ್ರ ಮುಂತಾದ ಲೋಹಗಳ ತಂತಿ ಎರಕ ಒಡೆಯದಿರಲಿ ಎಂದು ಇದರಿಂದ ಕಟ್ಟುತ್ತಾರೆ. |
| ತಣ್ಣ | = | ವಸ್ತುಗಳನ್ನು ಹಿಡಿಯುವ ಚಿಮುಟದಂತಹ ದೊಡ್ಡ ಉಪಕರಣ |
| ತಿದಿ | = | ಕುಲುಮೆಯಲ್ಲಿ ಬೆಂಕಿಗೆ ಗಾಳಿ ಒದಗಿಸುವ ಚರ್ಮದ ಯಂತ್ರ |
| ತಿದ್ದುಗುಂಡು | = | ಕೊಡದ ಇತರೆ ಪಾತ್ರೆಗಳ ತಗ್ಗೆತ್ತಲು ಬೇಕಾದ ಉಪಕರಣ |
| ದಟ್ಟಾಣಿ | = | ವಸ್ತುವಿನ ಏಣು ಮುರಿಯಲು ಬೇಕಾದ ವಸ್ತು |
| ನಕಾಶೆ ಮಣಿ | = | ತಯಾರಿಸಬೇಕಾದ ವಸ್ತುವಿನ ಪೂರ್ವನಕ್ಷೆ ಹಾಕಿಕೊಳ್ಳಲು ತಗಡನ್ನು ಇಟ್ಟುಕೊಳ್ಳುವ ಮಣಿ |
| ಪಂಕ | = | ಕುಲುಮೆಗೆ ಗಾಳಿ ಒದಗಿಸುವ ಆಧುನಿಕ ಯಂತ್ರ |
| ಪಡ್ಡಿಲ್ | = | ವಿಗ್ರಹ ನಯಗೊಳಿಸಲು ಬೇಕಾದ ವಸ್ತು |
| ಬಕ್ಕಸ್ಕೋಲು | = | ಬೆಸುಗೆ ಹಾಕುವಾಗ ಬೆಸುಗೆ ತಿದ್ದಿಕೊಳ್ಳಲು ಬೇಕಾದ ವಸ್ತು |
| ಬೈರಿಗೆ | = | ತೂತು ಕೊರೆಯುವ ಉಪಕರಣ |

| | | |
|---|---|---|
| ಬ್ರಶ್ | = | ವಿಗ್ರಹ, ವಸ್ತು ತೊಳೆಯಲು ಹೊಳಪಿನ, ಬಣ್ಣ ಹಚ್ಚಲು ಬೇಕಾದ ಕುಂಚ |
| ಮೇಣದ ಕಡ್ಡಿ | = | ಗಂಧದ ಮರದಿಂದ ತಯಾರಿಸಿದ ಮೇಣದ ಕೆಲಸದಲ್ಲಿ ಬಳಸುವ ವಸ್ತು |
| ರಾವ್ಗೋಲು | = | ಕುಲುಮೆ ಬೆಂಕಿ ಸರಿ ಮಾಡುವ ಉಪಕರಣ |
| ವತ್ತಡಮಣಿ | = | ತೊಡೆಗೆ, ವಿಗ್ರಹಕ್ಕೆ ಆಧಾರವಾಗಿಟ್ಟುಕೊಂಡು ಕೆಲಸ ಮಾಡುವ ಮಣಿ |
| ವಳುಕಂಪಾಸ್ | = | ಕೈವಾರದಲ್ಲಿನ ಒಂದು ವಿಧ |
| ಸುತ್ತಿಗೆ | = | ಕಂಚಿನ ಕೆಲಸ ಮಾಡುವಾಗ ಬಡಿಯಲು ಬೇಕಾದ ಉಪಕರಣ |
| ಸಾಣಿಕಲ್ಲು | = | ಉಪಕರಣಗಳನ್ನು ಹರಿತ ಮಾಡಿಕೊಳ್ಳಲು ಬಳಸುವ ಉಪಕರಣ |

## ವಕ್ತೃಗಳ ವಿವರ

೧. ಈರಣ್ಣ ಬಡಿಗೇರ, ವಯಸ್ಸು ೪೯, ಸಾ॥ ಹುನಗುಂದ, ತಾ॥ ಹುನಗುಂದ, ಜಿ॥ ಬಾಗಲಕೋಟ

೨. ಈಶ್ವರಪ್ಪ ಲಾಳಕಿ, ವಯಸ್ಸು ೭೦, ಸಾ॥ ಹನಗಂಡಿ, ತಾ॥ ಜಮಖಂಡಿ, ಜಿ॥ ಬಾಗಲಕೋಟ

೩. ಕಮಲಾಬಾಯಿ ಪತ್ತಾರ, ವ ೮೧, ಸಾ॥ ಬೆಣ್ಣೂರ, ತಾ॥ ಬಾಗಲಕೋಟ, ಜಿ॥ ಬಾಗಲಕೋಟ

೪. ಡಾ. ಕಲವೀರ ಮನ್ವಾಚಾರ, ಪ್ರಾಧ್ಯಾಪಕರು, ವ ೪೯, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ತಾ॥ ಹೊಸಪೇಟೆ.

೫. ಕಸ್ತೂರಮ್ಮ ಬಡಿಗೇರ, ವ ೭೦, ಸಾ॥ ವೀರಾಪುರ, ತಾ॥ ಹುನಗುಂದ, ಜಿ॥ ಬಾಗಲಕೋಟ

೬. ಕಾಮಾಕ್ಷಿ ಬಡಿಗೇರ, ವ ೪೫, ಸಾ॥ ರಕ್ಕಸಗಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೭. ಕಾಳವ್ವ ಬಡಿಗೇರ, ವ ೫೩, ಸಾ॥ ಅಂಟರಠಾಣಿ, ತಾ॥ ಕುಷ್ಟಗಿ, ಜಿ॥ ಬಾಗಲಕೋಟ

೮. ಕಾಳಪ್ಪ ಬಡಿಗೇರ, ವ ೬೭, ಸಾ॥ ಅಂಟರಠಾಣಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೯. ಕಾಳಮ್ಮ ಬಡಿಗೇರ, ವ ೭೨, ಸಾ॥ ಅಂಟರಠಾಣಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೧೦. ಕಾಶಪ್ಪ ಬಡಿಗೇರ, ವ ೯೭, ಸಾ॥ ಜಂತಾಪುರ, ತಾ॥ ಲಿಂಗಸೂರು, ಜಿ॥ ರಾಯಚೂರು

೧೧. ಕುಶಲಬಾಯಿ ಪತ್ತಾರ, ವ ೬೦, ಸಾ॥ ಬೆಣ್ಣೂರ, ತಾ॥ ಬಾಗಲಕೋಟ, ಜಿ॥ ಬಾಗಲಕೋಟ

೧೨. ಗಂಗಮ್ಮ ಕಮ್ಮಾರ, ವ ೮೦, ಸಾ॥ ಗುಡೂರ, ತಾ॥ ಹುನಗುಂದ, ಜಿ॥ ಬಾಗಲಕೋಟ

೧೩. ಗಿರಿಯಪ್ಪ ಬಡಿಗೇರ, ವ ೮೦ ಸಾ॥ ವೀರಾಪುರ, ತಾ॥ ಹುನಗುಂದ, ಜಿ॥ ಬಾಗಲಕೋಟ

೧೪. ಚಂದಪ್ಪ ಕಾ. ಬಡಿಗೇರ, ವ ೭೪, ಸಾ॥ ವಡಗೇರಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೧೫. ಡಾ. ಜಿ. ಜ್ಞಾನಾನಂದ, ವ ೮೫, ಸಾ॥ ಬೆಂಗಳೂರು, ತಾ॥ ಬೆಂಗಳೂರು, ಜಿ॥ ಬೆಂಗಳೂರು

೧೬. ನಾಗಪ್ಪ ವಿಶ್ವಕರ್ಮ, ವ ೭೦, ಸಾ॥ ತಾವರಗೇರಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೧೭. ತಾರಾ ಬಡಿಗೇರ, ವ ೪೫, ಸಾ॥ ಇಲ್ಲಕಲ್, ತಾ॥ ಹುನಗುಂದ, ಜಿ॥ ಬಾಗಲಕೋಟ

೧೮. ತುಳಸಾಬಾಯಿ ಬಡಿಗೇರ, ವ ೬೦, ಸಾ॥ ಬೆಣ್ಣೂರ, ತಾ॥ ಬಾಗಲಕೋಟ, ಜಿ॥ ಬಾಗಲಕೋಟ

೧೯. ದ್ಯಾಮಣ್ಣ ಬಡಿಗೇರ, ವ ೭೦, ಸಾ॥ ಚಳ್ಳಗೇರಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೨೦. ದೇವಮ್ಮ ಪತ್ತಾರ, ವ ೫೪, ಸಾ॥ ಇಲಕಲ್, ತಾ॥ ಹುನಗುಂದ, ಜಿ॥ ಬಾಗಲಕೋಟ

೨೧. ಪದ್ಮಾ ಪತ್ತಾರ, ವ ೪೫, ಸಾ॥ ಇಲಕಲ್, ತಾ॥ ಹುನಗುಂದ, ಜಿ॥ ಬಾಗಲಕೋಟ

೨೨. ಭೀಮಪ್ಪ ಬಡಿಗೇರ, ವ ೫೯, ಸಾ॥ ಅಂಟರಠಾಣಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೨೩. ಮಲ್ಲಮ್ಮ ಬಡಿಗೇರ, ವ ೭೫, ಸಾ॥ ಕಟಾಪುರ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೨೪. ಮಲ್ಲಮ್ಮ ಬಡಿಗೇರ, ವ ೮೦, ಸಾ॥ ನಂದಿಕೇಶ್ವರ, ತಾ॥ ಬಾದಾಮಿ, ಜಿ॥ ಬಾಗಲಕೋಟ

೨೫. ಮಾನಪ್ಪ ಬಡಿಗೇರ, ವ ೫೬, ಸಾ॥ ಬೆಳ್ಳುಹುಬ್ಬಿ, ತಾ॥ ಇಂಡಿ, ಜಿ॥ ಬಿಜಾಪುರ

೨೬. ಮೌನೇಶ ಬಡಿಗೇರ, ವ ೪೫, ಸಾ॥ ವಡಗೇರಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೨೭. ಯಚರಪ್ಪ ಬಡಿಗೇರ, ವ ೫೦, ಸಾ॥ ವಡಗೇರಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೨೮. ರತ್ನವ್ವ ಚಂ. ಬಡಿಗೇರ, ವ ೫೦, ಸಾ॥ ವಡಗೇರಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೨೯. ಲಕ್ಷ್ಮಣ್ಣ ಬಡಿಗೇರ, ವ ೭೫, ಸಾ॥ ಇಲಕಲ್, ತಾ॥ ಹುನಗುಂದ, ಜಿ॥ ಬಾಗಲಕೋಟ

೩೦. ಲಕ್ಷ್ಮೀಬಾಯಿ ಪತ್ತಾರ, ವ ೮೦, ಸಾ॥ ಬೆಣ್ಣೂರ, ತಾ॥ ಬಾಗಲಕೋಟ, ಜಿ॥ ಬಾಗಲಕೋಟ

೩೧. ಲಕ್ಷ್ಮೀಬಾಯಿ ಬಡಿಗೇರ, ವ ೪೦, ಸಾ॥ ಕಲ್ಲಗೋನಾಳ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೩೨. ವೀರಪ್ಪ ಲಾಳಕಿ, ವ ೪೦, ಸಾ॥ ಹನಗಂಡಿ, ತಾ॥ ಜಮಖಂಡಿ, ಜಿ॥ ಬಾಗಲಕೋಟ

೩೩. ಸಂಗಪ್ಪ ಕಮ್ಮಾರ, ವ ೮೪, ಸಾ॥ ಗುಡೂರು, ತಾ॥ ಹುನಗುಂದ, ಜಿ॥ ಬಾಗಲಕೋಟ

೩೪. ಸಂಗಮ್ಮ ಬನ್ನಿಹಟ್ಟಿ, ವ ೭೦, ಸಾ॥ ಬನ್ನಿಹಟ್ಟಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೩೫. ಸಿದ್ದಪ್ಪ ಬಡಿಗೇರ, ವ ೬೨, ಸಾ॥ ದಮ್ಮೂರ, ತಾ॥ ಹುನಗುಂದ, ಜಿ॥ ಬಾಗಲಕೋಟ

೩೬. ಸಿರಸವ್ವ ಬಡಿಗೇರ, ವ ೫೦, ಸಾ॥ ದಮ್ಮೂರ, ತಾ॥ ಹುನಗುಂದ, ಜಿ॥ ಬಾಗಲಕೋಟ

೩೭. ಸಿರಸವ್ವ ಬಡಿಗೇರ, ವ ೩೯, ಸಾ॥ ಅಂಟರಠಾಣಿ, ತಾ॥ ಕುಷ್ಟಗಿ, ಜಿ॥ ಕೊಪ್ಪಳ

೩೮. ಸುಂದರವ್ವ ಬಡಿಗೇರ, ವ ೪೫, ಸಾ॥ ವಡಗೇರಿ, ತಾ॥ ಹುನಗುಂದ, ಜಿ॥ ಬಾಗಲಕೋಟ

೩೯. ಶಂಕ್ರಪ್ಪ ಬಡಿಗೇರ, ವ ೫೮, ಸಾ॥ ದಮ್ಮೂರ, ತಾ॥ ಹುನಗುಂದ, ಜಿ॥ ಬಾಗಲಕೋಟ

೪೦. ಶಂಕ್ರಮ್ಮ ಸಂ. ಕಮ್ಮಾರ, ವ ೮೦, ಸಾ॥ ಗುಡೂರು, ತಾ॥ ಹುನಗುಂದ, ಜಿ॥ ಬಾಗಲಕೋಟ

೪೧. ಶೇಷಪ್ಪ ಬಡಿಗೇರ, ವ ೮೦, ಸಾ॥ ಬೆಣ್ಣೂರ, ತಾ॥ ಬಾಗಲಕೋಟ, ಜಿ॥ ಬಾಗಲಕೋಟ

೪೨. ಷಣ್ಮುಖಪ್ಪ ಎರಕದ, ವ ೮೦, ಸಾ॥ ಇಲಕಲ್, ತಾ॥ ಹುನಗುಂದ, ಜಿ॥ ಬಾಗಲಕೋಟ

## ಪರಾಮರ್ಶನ ಗ್ರಂಥಗಳು


೧. ಅಂಗಡಿ ಎಸ್.ಎಸ್., ಬಡಿಗ ವೃತ್ತಿ ಪದಮಂಜರಿ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೯.

೨. ಅನಂತರಾಮು ಕೆ; ಅಜಾತ ನಾಗಲಿಂಗಸ್ವಾಮಿ, ಜೀವನ ಚರಿತ್ರೆ, ೨೦೧೮.

೩. ಅನಂತರಂಗಾಚಾರ್ ಎನ್., ಪಂಪಭಾರತಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩.

೪. ಅನಂತರಾಮು ಕೆ., ವಿಶ್ವಕರ್ಮ ವಂಶವಿಕಾಸ, ವಿಶ್ವಮಯ ಸಾಹಿತ್ಯ ಪ್ರಚಾರ ಸಮಿತಿ, ಹುಬ್ಬಳ್ಳಿ, ೨೦೧೭.

೫. ಅಣ್ಣಿಗೇರಿ ಎ.ಎಂ., ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೧೩.

೬. ಅರಿಕೇರಿ ಪಾ.ವಿ., ಜನಿವಾರ, ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆ, ತಿಂಥಿಣಿ, ಜಿಲ್ಲಾ ಯಾದಗಿರಿ, ೨೦೧೫.

೭. ಆಚಾರ್ಯ ಎನ್.ಎಂ., ಮಹಾವಿಶ್ವಕರ್ಮ ಪುರಾಣ, ಗುರುಕುಲ ಪ್ರಕಾಶನ, ಬೆಂಗಳೂರು, ೨೦೧೨.

೮. ಆಚಾರ್ಯ ಎನ್.ಎಂ., ಕಾಳಿಕಾ ಪುರಾಣ, ಗುರುಕುಲ ಪ್ರಕಾಶನ, ಬೆಂಗಳೂರು, ೨೦೧೨.

೯. ಆರಾಧ್ಯಮಠ ವಿ.ಎಸ್., ಶಬ್ದಮಣಿ ದರ್ಪಣ, ಅನುರಾಧ ಪ್ರಕಾಶನ, ಧಾರವಾಡ, ೨೦೦೮.

೧೦. ಕನ್ನಡ ನಿಘಂಟು ಸಂಪುಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೬, ೧೯೯೦.

೧೧. ಕನ್ನಡ ವಿಷಯ ವಿಶ್ವಕೋಶ ಸಂಪುಟ.೧-೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೫.

೧೨. ಕನ್ನಡ ಜನಪದ ವಿಶ್ವಕೋಶ; ಚಂದ್ರಶೇಖರ ಕಂಬಾರ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೩. ಕರೀಗೌಡ ಬೀಚನಹಳ್ಳಿ, ಕಥೆ ಮತ್ತು ಹಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೧೪. ಕರೀಗೌಡ ಬೀಚನಹಳ್ಳಿ, ಕರಕುಶಲಕಲೆಗಳು, ವಿಶ್ವಕೋಶ ಸಂಪುಟ.೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೫. ಕಲಬುರ್ಗಿ ಎಂ.ಎಂ., ಕರ್ನಾಟಕ ಕೈಫಿಯತ್ತುಗಳು, ೧೯೯೪

೧೬. ಕೃಷ್ಣಮೂರ್ತಿ ಕೆ.ವಿ., ದಕ್ಷಿಣ ಭಾರತದ ಪಾರಂಪರಿಕ ಕುಶಲಕರ್ಮಿಗಳು, ವಿಶ್ವಶ್ರೀ ಪಬ್ಲಿಷರ್ಸ್, ತುಮಕೂರು, ೨೦೧೨.

೧೭. ಕುಮಾರಸ್ವಾಮಿ ಕೆ.ಎಸ್, ಬೃಹತ್ ಕರ್ನಾಟಕ ಶಿಲ್ಪಾಚಾರಿಯರ ಚರಿತೆ, ಕಣ್ವ ಪ್ರಕಾಶನ, ಬೆಂಗಳೂರು, ೨೦೧೩.

೧೮. ಕುಲಕರ್ಣಿ ಆರ್.ವಿ., ಗದಾಯುದ್ಧಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩.

೧೯. ಕುಲಕರ್ಣಿ ಆರ್.ವಿ, ನೇಮಿನಾಥ ಪುರಾಣಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧.

೨೦. ಕೋತಿನ ಎಸ್.ಎಸ್., ಮೋಹನ ತರಂಗಿಣಿ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೮೪.

೨೧. ಗಂಗಾಧರ ದೈವಜ್ಞ; ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ, ಶ್ವೇತಾ ಭಾಗೀರಥಿ ಪ್ರಕಾಶನ, ಹೊಸಪೇಟೆ, ೨೦೦೨.

೨೨. ಗಂಗಾಧರ ದೈವಜ್ಞ; ಸಣ್ಣಾಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೩. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಹಳ್ಳಿಯ ಹಾಡುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.

೨೪. ಗೋಪಾಲಕೃಷ್ಣ ಭಟ್ಟ, ಯಶೋಧರ ಚರಿತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩.

೨೫. ಚನ್ನಕ್ಕ ಪಾವಟೆ, ಶಾಸನ ಸಂಜೀವಿನಿ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೨೦೦೩.

೨೬. ಚನ್ನಬಸಪ್ಪ ಗೊ.ರು., ಕರ್ನಾಟಕ ಜನಪದ ಕಲೆಗಳು, ೧೯೭೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ಚನ್ನಪ್ಪ ಉತ್ತಂಗಿಯವರು ಸಂಪಾದಿಸಿದ ಸರ್ವಜ್ಞನ ವಚನಗಳು, ಪ್ರಕಾಶ ಸಾಹಿತ್ಯ, ೨೭ ಅರಳೇಪೇಟೆ ಮುಖ್ಯರಸ್ತೆ, ಬೆಂಗಳೂರು, ೧೯೯೯.

೨೮. ಚಿತ್ತಯ್ಯ ಪೂಜಾರ್, ಕನ್ನಡ ಶಾಸನಾಧ್ಯಯನದ ಬಹುಮುಖಿ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೯. ಜಗನ್ನಾಥ ಹೆಬ್ಬಾಳ, ಹೈದರಾಬಾದ್ ಕರ್ನಾಟಕದ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೩೦. ಜ್ಞಾನಾನಂದ ಜಿ., ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು, ೨೦೦೮

೩೧. ಜ್ಞಾನಾನಂದ ಜಿ., ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ೨೦೦೬

೩೨. ಜ್ಞಾನಾನಂದ ಜಿ., ವಿಶ್ವಕರ್ಮ ಪುರಾಣ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೧೨

೩೩. ಜ್ಞಾನಾನಂದ ಜಿ., ನಿರಂಜನ ಕವಿವಿರಚಿತ ಕಂಚಿ ಪುರಾಣ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೩೪. ಜ್ಞಾನಾನಂದ ಜಿ., ಶಿಲ್ಪದರ್ಶನ, ಸಂ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೫. ಜ್ಞಾನಾನಂದ ಜಿ., ಭಾರತೀಯ ಸಂಸ್ಕೃತಿಗೆ ವಿಶ್ವಬ್ರಾಹ್ಮಣರ ಕೊಡುಗೆ, ಜ್ಞಾನ ಭಂಡಾರ ಬಿ.ಇ.ಎಂ.ಎಲ್., ನಗರ ಕೆ.ಜಿ.ಎಫ್., ಬೆಂಗಳೂರು, ೧೯೭೬

೩೬. ಜ್ಞಾನಾನಂದ ಜಿ, ಕನ್ನಡ ಮಹಾಭಾರತಗಳಲ್ಲಿ ಶಿಲ್ಪ ಮತ್ತು ಶಿಲ್ಪಿ, ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ, ರಾಜರಾಜೇಶ್ವರಿ ನಗರ, ಬೆಂಗಳೂರು, ೧೯೯೫.

೩೭. ಜ್ಞಾನಾನಂದ ಜಿ., ವಿಶ್ವಕರ್ಮ ದರ್ಶನ ಸಂ-೧/೭, ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು, ೨೦೧೦.

೩೮. ಜ್ಞಾನಾನಂದ ಜಿ., ವಿಶ್ವಕರ್ಮ ಸೂಕ್ತ ಒಂದು ಅಧ್ಯಯನ, ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ ಜ್ಞಾನ ಭಂಡಾರ, ಭಾರತ ನಗರ, ಬೆಂಗಳೂರು, ೧೯೮೯.

೩೯. ಜೀವಣ್ಣ ಮಸಳಿ, ಮಹಾಮನು, ವಿಶ್ವಕರ್ಮ ಫೌಂಡೇಷನ್ ಬೆಂಗಳೂರು, ೨೦೧೫.

೪೦. ಜೀವಣ್ಣ ಮಸಳಿ, ಶ್ರೀ ಮೌನೇಶ್ವರ ತ್ರಿಪದಿಗಳು, ಶ್ರೀ ವಿಶ್ವಮಯ ಸಾಹಿತ್ಯ ಪ್ರಚಾರ ಸಮಿತಿ, ಹುಬ್ಬಳ್ಳಿ, ೨೦೦೪.

೪೧. ಜೋಶಿ ಎಸ್.ಕೆ., ಚಂದ್ರಪ್ರಭಾ, ಶ್ರೀ ಚಂದ್ರಕಾಂತ ಸುಳ್ಳದ ಅಭಿನಂದನಾ ಸಮಿತಿ, ಶಿರಸಂಗಿ, ೨೦೦೫.

೪೨. ತಿಪ್ಪೇಸ್ವಾಮಿ ಜಿ.ಆರ್., ಮೌಖಿಕ ಕಥನ, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು, ೨೦೦೫.

೪೩. ನರಸಿಂಹನ್ ಅ.ಲ., ಶಿಲ್ಪಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪.

೪೪. ನರಸಿಂಹಶಾಸ್ತ್ರಿ ಕೆ.ಎಲ್., ಆದಿಪುರಾಣಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧.

೪೫. ನರಸಿಂಹಾಚಾರ್ಯ ಡಿ.ಎಲ್., ವಡ್ಡಾರಾಧನೆ, ೬ನೇ ಮುದ್ರಣ, ೧೯೭೮.

೪೬. ನಾಗಯ್ಯ ಜೆ.ಎಂ., ೬ನೆಯ ವಿಕ್ರಮಾದಿತ್ಯನ ಶಾಸನಗಳು, ಒಂದು ಅಧ್ಯಯನ(ಆಡಳಿತಕ್ಕೆ ಸಂಬಂಧಿಸಿದಂತೆ), ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೨.

೪೭. ನಾಗಭೂಷಣಸ್ವಾಮಿ ಓ.ಎಲ್., ವಚನ ಸಾವಿರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೪೮. ನಾರಾಯಣ ಪಿ.ವಿ., ನಯಸೇನನ ಧರ್ಮಾಮೃತ ಕಾಮಧೇನು ಪುಸ್ತಕ ಶಾಸಕರ ಭವನ, ಬೆಂಗಳೂರು, ೨೦೧೩.

೪೯. ನಾರಾಯಣ್‌ರಾವ್ ಕೈ., ಮಹಾಭಾರತ, ಶ್ರೀನಿಧಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೩.
೫೦. ನಾವಲಗಿ ಸಿ.ಕೆ., ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು: ಒಂದು ಅಧ್ಯಯನ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ೨೦೦೦.
೫೧. ಪಡಶೆಟ್ಟಿ ಎಂ.ಎಂ., ತಿಂಥಿಣಿ ಮೋನಪ್ಪಯ್ಯನ ಒಂದು ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ, ೧೯೯೨.
೫೨. ಪ್ರಕಾಶ ಗ.ಖಾಡೆ, ಆರೂಢ ಸಂಪದ, ಆರೂಢ ನಿಕೇತನ ವಿದ್ಯಾಸಂಸ್ಥೆ, ಶ್ರೀ ಸದ್ಗುರು ಸಿದ್ಧಾರೂಢ ಬ್ರಹ್ಮಮಠ, ಮಂಟೂರು, ೨೦೧೦.
೫೩. ಪಾಲ್ತಾಡಿ ರಾಮಕೃಷ್ಣ ಆಚಾರ್, ತುಳು ನಾಡಿನ ಜನಪದ ಕತೆಗಳು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೩.
೫೪. ಪಾಂಡುರಂಗಬಾಬು ಡಿ., ಪಾಂಚಾಳ ವೃತ್ತಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.
೫೫. ದೇವೇಂದ್ರಕುಮಾರ ಹಕಾರಿ, ಗ್ರಾಮೀಣ ವೃತ್ತಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.
೫೬. ಬಸವನಾಳ ಸಿ.ಸಿ., ಚಾಮರಸ ವಿರಚಿತ ಪ್ರಭುಲಿಂಗಲೀಲೆ, ೧೯೫೬, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.
೫೭. ಬಸವರಾಜ ಮಲಶೆಟ್ಟಿ, ಉತ್ತರ ಕರ್ನಾಟಕದ ಬಯಲಾಟಗಳು, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, ೨೦೦೮.
೫೮. ಬಸವರಾಜು ಎಲ್., ಬಸವಣ್ಣನವರ ವಚನಗಳು, ಗೀತಾ ಬುಕ್‌ಹೌಸ್, ಪ್ರಕಾಶಕರು, ಮೈಸೂರು, ೧೯೯೦.
೫೯. ಬಸವರಾಜ ಕಲ್ಗುಡಿ, ಕಂಬಾರರ ಸಾಹಿತ್ಯದ ನೆಲೆ ಬೆಲೆ, ಅಂಕಿತ ಪುಸ್ತಕ, ಬೆಂಗಳೂರು, ೨೦೧೨.
೬೦. ಬಸವರಾಜ ಸಬರದ, ಜನಪದ ದೈವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
೬೧. ಭೀಮಸೇನ ಬಡಿಗೇರ, ಶ್ರೀ ನಾ.ಭಾ.ಕೃತಿ, ಸಂಪುಟ.೧-೨, ಶ್ರೀ ವಿಶ್ವಮಯ ಸಾಹಿತ್ಯ ಪ್ರಸಾರ ಸಮಿತಿ, ಹುಬ್ಬಳ್ಳಿ, ೨೦೦೨.
೬೨. ಬೋರಲಿಂಗಯ್ಯ ಹಿ.ಚಿ., ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩.
೬೩. ಮಲ್ಲೇಪುರಂ ಜಿ. ವೆಂಕಟೇಶ, ಶಿವತತ್ವ ರತ್ನಾಕರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೬೪. ಮಹಾಂತೇಶ ಎಚ್.ಟಿ, ಮೌನೇಶ್ವರ ಮಹಿಮಾ ಚರಿತ್ರೆ, ಪಿ.ಸಿ. ಶಾಬಾದಿಮಠ ಬುಕ್ ಡಿಪೋ, ಗದಗ, ೨೦೧೨.

೬೫. ಮೌನೇಶ್ವರ ಆಚಾರ್ಯ; ವಿಶ್ವಕರ್ಮನ ಸ್ವರೂಪ ವಿಶ್ವಮಯ ಸಾಹಿತ್ಯ ಪ್ರಚಾರ ಸಮಿತಿ, ಹುಬ್ಬಳ್ಳಿ, ೨೦೧೭.

೬೬. ಮೌನೇಶ ಆಚಾರ್ಯ, ವಿಶ್ವರಥ, ಶ್ರೀ ವಿಶ್ವಮಯ ಸಾಹಿತ್ಯ ಪ್ರಚಾರ ಸಮಿತಿ, ಹುಬ್ಬಳ್ಳಿ, ೨೦೧೨.

೬೭. ಮೌನೇಶ್ವರ ಆಚಾರ್ಯ, ಸ್ವಯಂಭು ವಿಶ್ವಕರ್ಮ, ದೇವಶಿಲ್ಪಿ ವಿಶ್ವಕರ್ಮ, ಶ್ರೀ ವಿಶ್ವಮಯ ಸಾಹಿತ್ಯ ಪ್ರಚಾರ ಸಮಿತಿ, ಹುಬ್ಬಳ್ಳಿ, ೨೦೧೭.

೬೮. ಮೌನೇಶ್ವರ ಆಚಾರ್ಯ; ವಿಶ್ವರೂಪ, ಶ್ರೀ ವಿಶ್ವಮಯ ಪ್ರಕಾಶನ, ಹುಬ್ಬಳ್ಳಿ, ೨೦೧೭.

೬೯. ಯಶೋಧರಶಾಸ್ತ್ರಿ, ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಜ್ಯೋತಿರ್ಮಯಿ ಪ್ರಕಾಶನ, ಗುಲಬರ್ಗಾ, ೧೯೯೯.

೭೦. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೭೧. ರಾಜಪ್ಪ ಡಿ.ಸಿ., ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೨೦೦೭.

೭೨. ರಾಜೇಂದ್ರ ಡಿ.ಕೆ., ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦.

೭೩. ರಾಜಶೇಖರ ಬಡಿಗೇರ, ಸತ್ಯ ಸಂಚಯ, ಪ್ರಭಾಸ ಪ್ರಕಟಣೆ, ಅಕ್ಕಲಕೋಟೆ, ೧೯೯೯.

೭೪. ರಾ.ಗೌ. ಸರ್ವಜ್ಞನ ಸಮಗ್ರ ತ್ರಿಪದಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೭೫. ರಾಮರಾವ್ ಆರ್.ಎಸ್., ರಾಘವಾಂಕ ವಿರಚಿತ ಸಿದ್ಧರಾಮ ಚಾರಿತ್ರ್ಯ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೭೭.

೭೬. ವಸುಂಧರಾ ಫಿಲಿಯೋ, ಕರ್ನಾಟಕದಲ್ಲಿ ಲಾಕುಳಶೈವ ಜಕ್ಕಣಾಚಾರ್ಯರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.

೭೭. ವೃಷಭೇಂದ್ರಾಚಾರ್ ಅರ್ಕಸಾಲಿ, ಮಳೆರಾಜ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೭೮. ವಾಸುದೇವ ಬಡಿಗೇರ, ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ(ಚಾರಿತ್ರಿಕ ಪರಂಪರೆ), ಶ್ವೇತಾ ಭಾಗೀರಥಿ ಪ್ರಕಾಶನ, ಹೊಸಪೇಟೆ, ೨೦೦೨.

೭೯. ವೀರಭದ್ರಾಚಾರ್ಯ ಎಸ್., ಮೂಲಸ್ಥಂಭ ಮಹಾಪುರಾಣ, ದೇವಪೂರ, ಗಾಯತ್ರೀ ವಿಶ್ವಕರ್ಮ ಪ್ರಕಟನಾಲಯ, ದಿ.ಡಿ.ವಿ. ಶೇಷಾಚಾರ್ಯ, ಬೆಂಗಳೂರು, ೨೦೧೪.

